Government Oriental Library Series.

*Edited by Pandits under the Supervision of the Curator, Government Oriental Library, Mysore.*

KANNADA SECTION—No. I.

# THE ADI PURANA.

OF

# PAMPA.

## ಪಂಪಕವಿ ವಿರಚಿತಂ



EDITED BY

S. G. NARASIMHACHAR,

*Librarian, Government Oriental Library, Mysore.*

Published under the Authority of the Government of His Highness the Maharaja of Mysore.

MYSORE:

PRINTED AT THE GOVERNMENT BRANCH PRESS.

1900.

# PREFACE.

It is a part of the programme of the Mysore Government Oriental Library to publish important Kannada works which have been hitherto unpublished, or which, though already published, require re-editing with the aid of correct Mss The present volume forms the first number of the Kannada section of the Oriental Library series.

Among the various elements which contributed to the growth and development of the Kannada Literature, the adoption of the Kannada language by the Jain settlers of the Kannada country both for secular and religious purposes, seems to have been the earliest and the most effective. Wherever the Jains colonised, they were great patrons of learning and literature To-day we have in Kannada a greater number of classical works written by Jain authors than those written by authors of any other denomination. Of the Kannada works that the Library has been able to secure, the earliest are those of the Jains. And of these the writings of the three great poets, Pampa, Ponna, and Ranna, who are popularly known as the "Three Gems," are referred to by every poet in words of praise and appreciation It has been, therefore, thought proper to begin the Kannda section of the Oriental Library series with a work of Pampa, who is the earliest and the best of the three. Of the *Âdipurâna* and the *Bhârata,* the two well known Kannada works of this poet, the latter has been published by the Archaelogical Department of the Mysore Government. The publication of the former, the only other available work of this great author, has, therefore, been undertaken by the Oriental Library.

Âdi-Pampa is a name familiar to all the students of ancient Kannada Literature. He was born in an orthodox Brahmin family of the *Vatsagotra*. His ancestors appear to have been the residents of an *Agrahâra* in Vengimandala His father, Abhirâma-Devarâya, having become a convert to the Jain religion, Pampa was by birth a follower of the *Jaina-dharma*. He* has himself given in his works a clue to the date of his birth. He mentions

in his *Âdipurâna* that he was born in the cyclic year *Dundubhi* and that he wrote his book in the *Saka* year 863 *Dundubhi* being the 39th year preceding the year of his authorship, he must have been born in the *Saka* year 824, corresponding to 902 A D. Nothing is known about his early life and education except that he was a disciple of one Devendramuni who seems to have been a man of some note, probably identical with one of the same name, highly spoken of in the 4th inscription of Sravana Belgola. There are passages in the *Âdipurâna* in which the author gives an account of his own personal appearance and character He was a man of medium height, strong and well-built, of a dark complexion, of fair features, with soft curly hair, and beautiful expression, with a deep and sonorous voice. He was simple in his dress and manners, of a loving disposition and never jealous of others' fame He was valorous and seems to have spent his early manhood in military service.

His literary career has found recognition ever since the time he was invited to the court of Arikesari at Puligere, Arikesari being the eighth of the Châlukya line of kings that ruled there. Under the patronage of this king he rose to literary fame, having completed in three months his *Âdipurâna* and in six months his famous epic *Bhârata*. That his merits as a poet have been very much appreciated by the king is evident from the rich and valuable presents bestowed on him by his royal patron In accordance with what appears to be the custom of the Kannada poets, he also owned many characteristic titles, such as "the beautiful swan of the *Mânasa* lake of the minds of great poets", "the ocean of poetic excellence," "the precious garland of Sarasvati"

Pampa's scholarship is recognised by all Kannada poets. He might have been the author of several works both in Sanskrit and Kannada. Though his writings are silent about the Sanskrit and Kannada writers that preceded him, we have sufficient evidence in his two epics alone to show his acquaintance with some of the best Sanskrit writers and his recognition of the services of others before him in the field of Kannada Literature He speaks of his works as having trampled under foot the Kannada writings of his predecessors But, as he says elsewhere, he is not proud of his scholarship like one 'Kavi Vyâsa.' In his works we

often meet with parallels to the noble thoughts of Sanskrit poets like Kâlidâsa, Srîharsha, Bhâravi, Bâṇa and others, which fact does not in the least detract from the merits of his scholarship All the classic writers of Kannada are at one in acknowledging the superiority of Pampa as a Kannada writer and in extolling the elegance of his style. Grammarians like the authors of *Bhâshâbhûshaṇa* and *S'abdamanidarpana* and rhetoricians like Nâgavarma and Sâlva often cite Pampa in illustration of their rules His style has, no doubt, been for a long time the standard for all Kannada writers. Some have gone to the extent of even assuming his name as a token of literary ability

*Âdipurâna* stands even to-day as one of the best works of Kannada Literature It is well-known for elegance and dignity of style, wealth of expression, and depth of pathos. Its melodious rhythm and poetic charm, as also the rhetorical perfection of its sentences and the majestic flow of its words have endeared the name of Pampa to the readers of Kannada poetry His own words regarding his poetry are literally true He speaks of his poem as "learned, of approved language, sweet and melodious, beautiful, full of excellent thoughts, with harmonious combination of words, capable of standing critical scrutiny, with apt words, worthy of hearing, without any confusion of thoughts and of wide renown" Elsewhere he says "It is ever new like the deep and sublime ocean." Again he speaks of his poem "This alone is the joy of accomplished poets, and from it one may learn the requisites of good poetry." Speaking of his language he says "It is the Kannada of Puligere, lucid, natural and pithy."

The subject of this poem is an old *purânic* story pertaining to the history of Purudeva, the first *Tîrthakara* of the Jains As is the custom with Jain writers, the author, in narrating his story, very often diverges from the main plot and launches into the narration of dull episodes concerning the previous births of his characters Shorn of these episodes, the main story forms only three-fourths of the whole book. In spite of the triteness of the story, the author has found occasion to display his descriptive power and pathetic earnestness. The versatility of his diction, the lucidity of expression, the delicacy of touches and his vast erudition, have all combined to make this

poem a magnificent one. Its hero being a religious personage, the author has taken the opportunity to display his knowledge of religion by filling his poem with a complete and succinct exposition of the *Jaina-dharma*.

A detailed account of the history of Pampa and of his literary qualifications and a complete analysis of this epic *Âdipurâna* is given in the Kannada introduction prefixed to the book.

For the purposes of editing this book, four Mss have been consulted, two belonging to the Jaina Matt at S'ravaṇa Belgola kindly lent by the present pontiff and two others belonging to the Oriental Library The text of this edition is mainly based on one of the palm leaf Mss. belonging to the Jain Matt, and it is only where the reading of that manuscript was apparently incorrect that a better reading found in any one of the other Mss has been inserted in its place. All important variants are given as foot-notes

MYSORE,<br>
*May*, 1900.

———:o:———

# ಪಂಪಕವಿಚರಿತಂ*.

ಆದಿಪಂಪನ ಹೆಸರನ್ನು ಹಂಪ, ಹಂಪದೇವ, ಗುರುಹಂಪ, ಪಂಪುಗ, ಪಂಪ†—ಎಂದೂ ಬರೆವುದುಂಟು.

ಈತನ ಪೂರ್ವಿಕರು ವೆಂಗಿಮಂಡಲದಲ್ಲಿ ವೆಂಗಿಪಳುಗೆ ಸೇರಿದ ಒಂದು ಅಗ್ರಹಾರದಲ್ಲಿ ವಾಸಮಾಡುತ್ತಿದ್ದರು. ಅವರು ವತ್ಸಗೋತ್ರದ ಬ್ರಾಹ್ಮಣರು. ಅವರಲ್ಲಿ ಮಾಧವಸೋಮಯಾಜಿ ಎಂಬವನು ಅನೇಕಯಜ್ಞಗಳನ್ನು ಮಾಡಿ, ವಸಂತ ಕೊಟ್ಟೂರು ನಿಡುಗುಂದಿ ವಿಕ್ರಮಪುರ ಎಂಬ ಅಗ್ರಹಾರವಾಸಿಗಳಾದ ವಿಪ್ರರಲ್ಲಿ ಶ್ರೇಷ್ಠನೆಂದು ಖ್ಯಾತನಾಗಿದ್ದನು. ಇವನ ಮಗನಾದ ಅಭಿಮಾನಚಂದ್ರನು ಅನೇಕದಾನಗಳನ್ನು ಮಾಡಿ ಯಶಸ್ವಿಯಾದನು. ಈತನ ಪುತ್ರನಾದ ಕೊಮರಯ್ಯನು ವೇದವೇದಾಂಗಪಾರಂಗತನಾಗಿದ್ದನು. ಇವನಿಗೆ ಅಭಿರಾಮದೇವರಾಯನೆಂಬ ಸುತನು ಜನಿಸಿದನು. ಈತನು 'ಜಾತಿಯೊಳೆಲ್ಲ ಮುತ್ತಮದ ಜಾತಿಯು ವಿಪ್ರಕುಲಂಗೆ ನಂಬಲೇಮಾತೊ ಜಿನೇಂದ್ರಧರ್ಮಮೆ ವಲಂ ದೊರೆ ಧರ್ಮದೊಳೆಂದು ನಂಬಿ" ಜೈನಮತವನ್ನು ಅವಲಂಬಿಸಿದನು. ಈತನ ಮಗನೇ ಪ್ರಖ್ಯಾತನಾದ ಪಂಪನು. ಇವನು 'ಧಾತ್ರೀವಳಯನಿಳಿಂಪ' ನೆಂದೂ 'ವತ್ಸಕುಲತಿಲಕ' ನೆಂದೂ 'ಕೊಂಡಕುಂದಾನ್ವಯನಂದನವನಶುಕ' ವೆಂದೂ ತಾನೇ ಹೇಳಿಕೊಂಡಿದ್ದಾನೆ. ಇವನು ಆದಿಪುರಾಣವನ್ನು ಬರೆದು 'ದ್ವಿಜವಂಶಧ್ವಜ' ವಾದನೆಂದು ರನ್ನನು ಅಜಿತಪುರಾಣದಲ್ಲಿ ಬರೆದಿದ್ದಾನೆ.

---

* ಈಚರಿತೆ ಪಂಪಭಾರತದ ಆದ್ಯಂತಗಳಲ್ಲಿಯೂ ಆದಿಪುರಾಣದ ಆದಿಭಾಗದಲ್ಲಿಯೂ ದೊರೆವ ಕವಿವಿಷಯವಾದ ಪದ್ಯಗಳ ಆಧಾರದಿಂದ ಬರೆಯಲ್ಪಟ್ಟಿದೆ.

† ಈ ಹೆಸರನ್ನು ಮಧುರನು ಧರ್ಮನಾಥಪುರಾಣದಲ್ಲಿ ಚಮತ್ಕಾರವಾಗಿ ಹೀಗೆ ವರ್ಣಿಸಿದ್ದಾನೆ:—ಆದಿಕವಿಪಂಪನೆಂದನು । ವಾದಿಸಿ ವಾದಿಸಿ ವಿರೋಧಿ ವಿಪರೀತತೆಯಿಂ । ದೋಡೆ ವಿಲೋಮದೆ ಪೆಸರಂ । ಮೇದಿನಿಯೊಳಗವನ ಪೆಸರೆ ಪೆಸರ್ವಡೆದೆಸೆಗುಂ॥

ಈಕವಿಯ ಜನ್ಮಸ್ಥಳವು ಆವುದೋ ತಿಳಿಯಲಾಗುವುದಿಲ್ಲ. ಇವನು ರಟ್ಟರಾಜ್ಯದಲ್ಲಿದ್ದುದಾಗಿ ರನ್ನನು ಬರೆದಿದ್ದಾನೆ. ಆದರೆ ಪಂಪನು 'ತೆಂಕ ನಾಡ ಮಾಣಿಯಕ್ಕಂದಂ ಮನಂ ಬಕರ್ವಾವೋ' ಎಂದು ತನ್ನ ಭಾರತದಲ್ಲಿ ದಕ್ಷಿಣದೇಶವನ್ನು ವಿಶೇಷವಾಗಿ ವರ್ಣಿಸಿ ತನಗೆ ಆದೇಶವು ಆಗಾಗ್ಗೆ ನೆನಪಿಗೆ ಬರುತ್ತಿದ್ದಂತೆ ಬರೆದಿದ್ದಾನೆ. ಇದರಿಂದ ಇವನು ದಕ್ಷಿಣದೇಶದಲ್ಲಿ ಜನಿಸಿ ಬಳೆದು, ಆವುದೋ ಒಂದು ಕಾರಣದಿಂದ ಅದನ್ನು ಬಿಟ್ಟು ಬೇರೆದೇಶದಲ್ಲಿ ವಾಸಮಾಡುತ್ತಿದ್ದಂತೆ ಊಹಿಸುವುದಕ್ಕೆ ಅವಕಾಶವಿದೆ. ಇದು ಹೇಗಾದರೂ ಇರಲಿ; ಇವನು ಗ್ರಂಥಗಳನ್ನು ಬರೆವ ಕಾಲದಲ್ಲಿ ಪುಲಿಗೆರೆಯಲ್ಲಿ ವಾಸಮಾಡುತ್ತಿದ್ದನೆಂಬುದರಲ್ಲಿ ಆವ ಸಂಶಯವೂ ಇಲ್ಲ.

ಇವನು ತನ್ನ ಜನ್ಮಕಾಲವನ್ನು ಕಂಠೋಕ್ತವಾಗಿ ಹೇಳದಿದ್ದರೂ ಅದನ್ನು ನಿಷ್ಕರ್ಷಿಸುವುದಕ್ಕೆ ಸಾಲುವಷ್ಟು ಸಂಗತಿಗಳನ್ನು ತಿಳಿಸಿದ್ದಾನೆ. ಆದಿಪುರಾಣದಲ್ಲಿ ತಾನು 'ದುಂದುಭಿಸಂವತ್ಸರದೊಳ್ಜನಿಸಿದೆಂ ।' ಎಂದೂ, ಆಗ್ರಂಥವು "ಶಕವರ್ಷವೆಂಟುನೂರ । ಕ್ಕೆ ಕಡೆಯೊಳಱುವತ್ತುಮೂಱು ಸಂದಂದು ಜಗ ॥ ತ್ಪ್ರಕಟಪ್ಲವಸಂವತ್ಸರ' ದಲ್ಲಿ ಸಂಪೂರ್ಣವಾಯಿತೆಂದೂ ಬರೆದಿದ್ದಾನೆ. ಶಾಲಿವಾಹನಶಕ 863, ನೆಯ ವರ್ಷವು ಕ್ರಿ. ಶ 941 ನೆಯ ವರ್ಷಕ್ಕೆ ಸರಿಯಾಗುತ್ತದೆ. ಇವನು ಈಪ್ಲವದ ಹಿಂದಣ ದುಂದುಭಿಸಂವತ್ಸರದಲ್ಲಿ—ಎಂದರೆ 39 ವರ್ಷಗಳ ಹಿಂದೆ—ಹುಟ್ಟಿರಬೇಕು. ಆದುದರಿಂದ ಇವನ ಜನ್ಮವರ್ಷವು ಶಕವರ್ಷ 824 ಕ್ಕೆ ಸರಿಯಾದ ಕ್ರಿ. ಶ 902 ನೆಯ ವರ್ಷವಾಗಿರಬೇಕು.

ಇವನ ವಿದ್ಯಾಭ್ಯಾಸವೇ ಮೊದಲಾದ ಸಂಗತಿಗಳು ಆವುವೂ ತಿಳಿದು ಬಂದಿಲ್ಲ. ಆದರೆ ತನ್ನ "ಗುರು, ದೇವೇಂದ್ರಮುನೀಂದ್ರಂ" ಎಂದು ಹೇಳಿಕೊಂಡಿರುವುದರಿಂದ ಇವನು ದೇವೇಂದ್ರಮುನಿಯಲ್ಲಿ ವಿದ್ಯೆಯನ್ನು ಕಲಿತನೆಂದು ತೋರುತ್ತದೆ. ಈ ದೇವೇಂದ್ರಮುನಿ ಮಹಾಪ್ರಖ್ಯಾತನಾಗಿ ರಾಜಾಧಿರಾಜರುಗಳಿಂದ ಪೂಜಿತನಾಗಿದ್ದಂತೆ, ಶ್ರವಣಬೆಳ್ಗೊಳದ 4 ನೆಯ ಶಾಸನದಲ್ಲಿ ದೊರೆವ—ಅಜನಿ ಮಹಿಪಚೂಡಾರತ್ನರಾರಾಜಿತಾಂಘ್ರಿಃ । ವಿಜಿತಮಕರಕೇತೂದ್ದಂಡದೋರ್ದಂಡಗರ್ವಃ ॥ ಕುನಯನಿಕರ

ಭೂಧ್ರಾನೀಕದಂಭೋಳಿದಂಡ । ಸ್ಥ ಜಯತು ವಿಬುಧೇಂದ್ರೋ ಭಾರತೀ ಭಾಳಪಟ್ಟಃ–ಎಂಬ ಶ್ಲೋಕದಿಂದ ತಿಳಿಯಬರುತ್ತದೆ.

ಪಂಪನ ಬಾಲ್ಯಕಾಲದ ಆವಸಂಗತಿಗಳೂ ತಿಳಿದು ಬಂದಿಲ್ಲ ; ಪ್ರಾಪ್ತವಯಸ್ಕನಾದಮೇಲೆ ಅವನ ವಿಷಯವಾಗಿ ಕೆಲವು ಸಂಗತಿಗಳು ತಿಳಿದು ಬಂದಿವೆ. ಅವನ ಆಕೃತಿ ಅತ್ಯುನ್ನತವಾಗಿಯಾಗಲಿ ಅತಿಕುಬ್ಜವಾಗಿಯಾಗಲಿ ಇರದ ಮಧ್ಯಮವಾಗಿಯೂ ಅವನ ದೇಹಚ್ಛಾಯೆ ಕದಳೀಗರ್ಭದಂತೆ ಶ್ಯಾಮವಾಗಿಯೂ ತಲೆಯ ಕೂದಲು ಮೃದುವಾಗಿಯೂ ಕುಟಿಲವಾಗಿಯೂ ಮುಖವು ಪ್ರಸನ್ನವಾಗಿ ಮನೋಹರವಾಗಿಯೂ ಇದ್ದುವು. ಧ್ವನಿ ದುಂದುಭಿಗಭೀರವಾಗಿತ್ತು, ಮಾತುಗಳು ಮೃದುವಾಗಿಯೂ ಮಿತವಾಗಿಯೂ ಇದ್ದುವು. ಅವನು ಉಡುಪುಗಳಲ್ಲಿ ಅತ್ಯಾಡಂಬರವುಳ್ಳವನಾಗಿರದೆ ಮಿತವಾಗಿ ಮಧುರವೇಷನಾಗಿದ್ದನು. ಅಭಿಜನರಲ್ಲಿ ಪ್ರೇಮವುಳ್ಳವನಾಗಿದ್ದನು, ಸುಕವಿಗಳ ಯಶಸ್ಸಿನಲ್ಲಿ ಸ್ವಲ್ಪವೂ ಮಾತ್ಸರ್ಯವುಳ್ಳವನಾಗಿರಲಿಲ್ಲ ; ಸ್ವಭಾವದಿಂದ ಧೈರ್ಯಶಾಲಿಯಾಗಿದ್ದನು.

ಪಂಪನು ಪಂಡಿತನಾಗಿದ್ದರೂ ವಿದ್ಯೆಯಿಂದ ತನ್ನ ಜೀವಿಕೆಯನ್ನು ಸಂಪಾದಿಸಿಕೊಳ್ಳುತ್ತಿದ್ದಂತೆ ತೋರುವುದಿಲ್ಲ. 'ಚತುರಂಗಬಳಬಲಯಂಕರಣಂ' ಎಂದೂ 'ನಿಷ್ಕಂಪಂ' ಎಂದೂ 'ಜೋಳದ ಪಾಳಿನಿಜಾಧಿನಾಥನಾಹವದೊಳರಾತಿನಾಯಕರ ಪಟ್ಟವೆ ಸಾರಿಸೆ ಸಂಪಪೆಂಪು ಭೂ । ಭುವನದೊಳಾವಗಂ ಬೆಳಗೆ ಮಿಕ್ಕಭಿಮಾನದ ಮಾತು ಕೀರ್ತಿಯಂ । ವಿವರಿಸೆ ಸಂದ ನೇಂಕಲಿಯೋ ಗುಣಾರ್ಣವಂ' ಎಂದೂ ಹೇಳಿಕೊಂಡಿರುವುದರಿಂದ ಈತನು ಪರಾಕ್ರಮಶಾಲಿಯಾಗಿ ದಂಡನಾಥನಾಗಿದ್ದಂತೆ ತೋರುತ್ತದೆ. ಇವನ ಪೋಷಕನು ಪ್ರಖ್ಯಾತನಾದ ಅರಿಕೇಸರಿರಾಜನು.

ಈ ರಾಜನು ಆ ಕಾಲದಲ್ಲಿ ಪುಲಿಗೆರೆಯಲ್ಲಿ ಆಳುತ್ತಿದ್ದನು. ಇವನು ಚಾಳುಕ್ಯವಂಶದವನು. ಚಾಳುಕ್ಯರ ಮೂಲಪುರುಷನಾದ ಯುದ್ಧಮಲ್ಲನು ಹಿಂದೆ 'ಸಪಾದಲಕ್ಷ' ದೇಶಕ್ಕೆ ಅಧಿಪನಾಗಿದ್ದನು. ಅವನಿಗೆ ಅರಿಕೇಸರಿ ಎಂಬ ಮಗನು ಹುಟ್ಟಿದನು. ಇವನು ಸಿರುಪಮದೇವನ ರಾಜ್ಯವನ್ನು ಜಯಿಸಿ ಪ್ರಖ್ಯಾತನಾದನು. ಈತನಿಗೆ ನರಸಿಂಹ, ಭದ್ರದೇವ ಎಂಬ ಇಬ್ಬರು ಮಕ್ಕಳಾದರು. ಈ ನರಸಿಂಹನಿಗೆ ದುಗ್ಧಮಲ್ಲನೆಂಬ

ಪುತ್ರನು ಜನಿಸಿದನು. ಇವನ ಗರ್ಭದಲ್ಲಿ ಬದ್ದೆಗನೆಂಬವನು ಅವ ತರಿಸಿ ನಾಲ್ವತ್ತೆರಡುವಿಧವಾದ ಕಾಳೆಗಗಳಲ್ಲೂ ಪ್ರಾಜ್ಞನಾಗಿ ಸೋಲದ ಗಂಡನೆಂಬ ಬಿರುದನ್ನು ಪಡೆದಿದ್ದನು. ಇವನ ಸುತನಾದ ದುಗ್ಧಮಲ್ಲ ನಿಗೆ ನರಸಿಂಹನೆಂಬ ಕುಮಾರನು ಹುಟ್ಟಿದನು. ಈ ಶೂರನು ಲಾಳ ರನ್ನು ಜಯಿಸಿ, ಏಳು 'ಮಾಳಳ' ವನ್ನೂ ಇರಿದು, ವಿಜಯಗಜಗ ಳನ್ನು ಹಿಡಿದು, ತನ್ನ ತುರಗವನ್ನು ಗಂಗಾವಾರ್ಧಿಯಲ್ಲಿ ತೊಳೆದು, ತನ್ನ ಪ್ರಿಯಮಿತ್ರನಾದ ಸಂಗನನ್ನು ಸ್ಥಾಪಿಸಿದನು. ಇವನಿಗೆ ಜಾಕವ್ವೆ ಪಟ್ಟ ಮಹಿಷಿಯಾದಳು. ಇವರ ಪುತ್ರನೇ ಪಂಪನ ಸ್ವಾಮಿಯಾದ ಅರಿಕೇ ಸರಿನೃಪಾಲನು. ಈತನು ಸಾಮಂತಮಣಿಯೆಂದು ಪ್ರಖ್ಯಾತನಾಗಿದ್ದನು. ಈತನಿಗೂ ಪಂಚಮಹಾಶಬ್ದವೇ ಮೊದಲಾದ ರಾಜಚಿಹ್ನಗಳುಂಟು; ಪ್ರಿಯಗಳ್ಳ ಗುಣಾರ್ಣವ ಮೊದಲಾದ ಬಿರುದುಗಳೂ ಇದ್ದುವು.

ಈರಾಜನು ಕವಿಯನ್ನು ಬರಿಸಿಕೊಂಡು ಅವನಿಗೆ ಬೇಕಾದಹಾಗೆ ಧನಕನಕಾದಿಗಳನ್ನು ಕೊಟ್ಟು ತನ್ನ ಖ್ಯಾತಿ ಆಚಂದ್ರಾರ್ಕವಾಗಿ ನಿಲ್ಲು ವಹಾಗೆ ಬಂದು ಕಾವ್ಯವನ್ನು ಬರೆದು ಒಪ್ಪಿಸುವಂತೆ ಆಜ್ಞಾಪಿಸಿದನು. ಕವಿ ಅದಕ್ಕೆ ಒಪ್ಪಿಕೊಂಡು ಮೂರುತಿಂಗಳಲ್ಲಿ ಆದಿಪುರಾಣವನ್ನೂ ಆರು ತಿಂಗಳಲ್ಲಿ ಭಾರತವನ್ನೂ ಬರೆದು ತನ್ನ ಪ್ರತಿಜ್ಞೆಯನ್ನು ನೆರವೇರಿಸಿದನು. ಭಾರತವನ್ನು ಕೇಳಿ ರಾಜನು ಸಂತುಷ್ಟನಾಗಿ, ಕವಿಗೆ ಪಂಚರತ್ನಗ ಳನ್ನೂ ಉಡುಗೊರೆಗಳನ್ನೂ ಗ್ರಾಮಗಳನ್ನೂ ಜೀವಧನಗಳನ್ನೂ ಸಮೃದ್ಧಿಯಾಗಿ ಕೊಟ್ಟು ತನ್ನ ಪಕ್ಕದಲ್ಲಿ "ಪಿರಿಯಬಿತ್ತರಿಗೆ" ಯನ್ನು ಇರಿಸಿ "ಪಿರಿದಪ್ಪ ಗೌರವದ ಮೈಮೆಯ ಮನ್ನಣೆಯಬೊಳ್ಪನಳ್ಕಱಿಂ" ದ ಕವಿಯನ್ನು ಗೌರವಿಸಿ, ಬಚ್ಚೆಸಾಸಿರದ ಧರ್ಮಪುರಕ್ಕೆ ಸಾರವೆಂದು ಹೆಸರಿಟ್ಟು ಶಾಸನಾಗ್ರಹಾರವಾಗಿ ಕೊಟ್ಟನು.

ಹೀಗೆ ಬಂದ ಬಹುಮಾನಗಳೊಡನೆ ಪಂಪನಿಗೆ ಅನೇಕವಾದ ಬಿರುದುಗಳೂ ಬಂದುವು. ಇವನ ಕಾವ್ಯವು ಸುಕವಿಜನಶ್ಲಾಘ್ಯವಾದು ದರಿಂದ ಇವನು ಸುಕವಿಜನಮನೋಮಾನಸೋತ್ತಂಸಹಂಸನಾದನು. ಇವನ ಕವಿತ್ವವು ಸಮುದ್ರದಂತೆ ನಿತ್ಯವೂ ನೂತನವೂ ಗಂಭೀರವೂ **ಆದುದರಿಂದ ಕವಿತಾಗುಣಾರ್ಣವನೆನಿಸಿದನು. ಇವನು ತನ್ನ ಕಾವ್ಯದಲ್ಲಿ**

ಸಂಸಾರಸಾರವಾದ ಧರ್ಮವನ್ನು ವರ್ಣಿಸಿರುವುದರಿಂದ ಸಂಸಾರಸಾರೋದಯನೆನಿಸಿಕೊಂಡನು. ಇವನ ವಾಗ್ವಿಲಾಸವು ಸರಸ್ವತಿಗೆ ಅಲಂಕೃತಿಪ್ರಾಯವಾಗಿರುವುದರಿಂದ ಸರಸ್ವತೀಮಣಿಹಾರನಾದನು. ಈ ಆದಿಪುರಾಣವನ್ನು ಬರೆದುದರಿಂದ ಪುರಾಣಕವಿಯೆನಿಸಿದನು. ಈ ಬಿರುದುಗಳಲ್ಲೆಲ್ಲಾ ಕವಿತಾಗುಣಾರ್ಣವನೆಂಬ ಬಿರುದೇ ಕವಿಗೆ ಪ್ರಿಯವಾದುದೆಂದು ತೋರುತ್ತದೆ. ಇದು ಆದಿಪುರಾಣದಲ್ಲಿಯೂ ಭಾರತದಲ್ಲಿಯೂ ಆಶ್ವಾಸಾಂತ್ಯದ ಗದ್ಯಗಳಲ್ಲಿ ತಪ್ಪದೆ ದೊರೆಯುತ್ತದೆ. ಸರಸ್ವತೀಮಣಿಹಾರಂ ಎಂಬುದು ಆದಿಪುರಾಣದಲ್ಲಿ ಆಶ್ವಾಸಗಳ ಮೊದಲನೆಯ ಪದ್ಯದ ಕೊನೆಯಲ್ಲಿಯೂ, ಸುಕವಿಜನಮನೋಮಾನಸೋತ್ತಂಸಹಂಸಂ ಸಂಸಾರಸಾರೋದಯಂ ಎಂಬುವು ಆಶ್ವಾಸಗಳ ಕಡೆಯ ಎರಡುಪದ್ಯಗಳ ಅಂತ್ಯದಲ್ಲಿಯೂ ಪ್ರಾಯಃ ದೊರೆಯುತ್ತವೆ.

ಪಂಪನು ತನಗೆ ಹಿಂದೆ ಇದ್ದ ಕರ್ಣಾಟಕಕವಿಗಳಲ್ಲಿ ಒಬ್ಬರ ಹೆಸರನ್ನೂ ಹೇಳಿಲ್ಲ. ಸಂಸ್ಕೃತಕವಿಗಳಲ್ಲಿ ವ್ಯಾಸಮುನಿ, ಸತ್ಕವಿವ್ಯಾಸ—ಎಂಬಿಬ್ಬರು ಹೊರತಾಗಿ ಬೇರೆ ಯಾವ ಕವಿಗಳನ್ನೂ ಸ್ಮರಿಸಿಲ್ಲ. ಆದರೂ ಶ್ರೀಹರ್ಷ, ಕಾಳಿದಾಸ, ಭಾರವಿ, ಬಾಣ, ಮೊದಲಾದ ಕವಿಗಳಿಂದ ಅನೇಕ ಭಾವಗಳನ್ನು ತೆಗೆದುಕೊಂಡು ಕನ್ನಡಿಸಿದ್ದಾನೆ. ಅವುಗಳೆಲ್ಲವನ್ನೂ ಇಲ್ಲಿ ಬರೆವುದು ಅನಾವಶ್ಯಕವಾದುದರಿಂದ ದಿಕ್ಪ್ರದರ್ಶನಾರ್ಥವಾಗಿ ಕೆಲವನ್ನು ಉದಾಹರಿಸುತ್ತೇವೆ.

ಆ ದಿ ಪು ರಾ ಣ .

ಡಿಸಲ್ ಪಂಕಜದಾರ್ಕನೇಂ ನೆಱೆಯ
ದೋ ನೇತ್ರೋತ್ಪಳಾನಂದಮಂ । ಪಡೆಯ
ಲ್ ಸಾಲದೊ ಮನ್ಮಥಂಗೆ ಜಯಮಂ
ಮಾಣೇಯದೋ ಸಾಲದೇಂ ॥ ಗಡಮಾ
ಕಾಂತೆಯ ವಕ್ತ್ರಚಂದ್ರನೆಳೆ ತಾನೇನೆಂಮ
ಚಂದ್ರಂ ನಭ । ಕ್ಕಡರ್ದಂ ಗೆಲ್ದಪೆ ತನ್ನೊ
ಳುಳ್ಳಮೃತಮಂ ಬಿಂಬಾಧರಸ್ಥಾಮೃತಂ ॥
ಪುಟ. 169. ಆಶ್ವಾಸ 7. ಪದ್ಯ 85

किं पद्मस्य रुचिं न हन्ति नयनानन्दं
विधत्ते न किं । वृद्धिं वा झषकेतनस्य
कुरुते नालोकमात्रेण किं ॥ वक्त्रेन्दौ
तव सत्ययं यदपरः शीतांशुरुज्जृम्भते
दर्पः स्यादमृतेन चेदिह तदप्यस्त्येव बि-
म्बाधरे ॥
रत्नावल्यां द्वितीयेङ्के १९ तमः श्लोकः.

—0—

ತಂದೆಯ ರೂಪೆ ತಂದೆಯ ವಿಳಾಸಮೆ
ತಂದೆಯ ಚೆಲ್ವೆ ತಂದೆಯೊಂ । ದಂದಮೆ
ತಂದೆಯೊಂದು ನುಡಿಯೋಜೆಯೆ ತನ್ನೊ
ಳಮರ್ಕೆವತ್ತುದಾ ॥ ಸಂದಕರಂ ಕರಂ
ಸೊಗಯಿಸುತ್ತಿರೆ ಶೋಭಿಸಿದಂ ಕುಮಾ
ರನಾ । ನಂದಿತರೂಪನಂದೆಸೆಯೆ ತಂದೆ
ಯೊಳಚ್ಚಿನೊಳೊತ್ತಿದಂತೆವೋಲ್ ॥

ಪುಟ. 204. ಆಶ್ವಾಸ. 8. ಪದ್ಯ 43.

—0—

ಬಗೆದಾಂ ನಿನ್ನನ್ವಾಯೋನ್ನತಿಯು
ನಿವಳತಿಸ್ನೇಹಸಂಬಂಧಮಂ ನೀಂ । ಬಗೆ
ದುಂ ಸಂದೆಮ್ಮನ್ನಣ್ಪಂ ಬಗೆದುಮುಬು
ಯದೇ ನಾನುಮೊಂದಾಗಳುಂ ಮೆ । ಲ್ಲಗೆ
ನೀಂ ಕಲ್ಪಿಪ್ಪುದೆಮ್ಮಂ ನೆನೆದೆರ್ದೆಗಿಡದಂ
ತಾಗೆ ಪಾಲಿಪ್ಪುದಿಂತೀ । ಮೃಗಶಾಬೇಕ್ಷಾ
ಕ್ಷಿಯಂ. * * *

ಪುಟ. 91. ಆಶ್ವಾಸ. 4. ಪದ್ಯ 55.

—0—

ಅಂತು ಮಹೀಭಾಗಮೆಲ್ಲಂ ಚತುರಂಗ
ಮಯಮುಂ, ದಿಗ್ವಿಭಾಗಮೆಲ್ಲಂ ರಜೋ
ಮಯಮುಂ, ನಭೋಭಾಗಮೆಲ್ಲಂ ದಿವಿ
ಜವಿದ್ಯಾಧರಮಯಮುಂ, ಅನ್ತರಿಕ್ಷಮೆಲ್ಲ
ಮಾತಪತ್ರಮಂಡಳಮಯಮುಂ, ಸಮೀ
ರಣಸಂಚರಣಮೆಲ್ಲಂ ಮದಗಂಧಮಯ
ಮುಂ, ಸೃಷ್ಟಿಯೆಲ್ಲಮವನಿಪಾಳಮಯ
ಮುಂ, ಭುವನವಿವರಮೆಲ್ಲಂ ಜಯಜಯ
ನಿನಾದಮಯಮುಮಾಗಿ;

ಪುಟ. 278. ಆಶ್ವಾಸ 11. 35 (ಗ).

—0—

ಬಳೆವ ತಮೋಮದೇಭಘಟೆಯೊಡೊ
ಡೆವನ್ನೆಗಮುನ್ನತೋದಯಾ । ಚಳ
ಗುಹೆಯಿಂ ಲಸತ್ಕಿರಣಕೇಸರಮಂ ಪರಪ್ಪು
ತ್ತುಮಾಗಳಾ । ಗುರ್ಸುವ ಬಾಯಿಕೆಂಪ

रूपं तदोजस्वि तदेव वीर्यं तदेव नैस-
र्गिकमुन्नतत्वं ॥ न कारणात्स्वाद्बिभि-
दे कुमार प्रवर्तितो दीप इव प्रदीपात्॥
रघुवंशे ६ मसर्गे ३७ तमः श्लोकः.

—0—

अस्मान् साधु विचिंत्य संयमधना
नुच्चैः कुलं चात्मनः त्वय्यस्याः कथ-
मप्यबांधवकृतां स्नेहप्रवृत्तिं च तां ॥
सामान्यप्रतिपत्तिपूर्वकमियं दारेषु दृ-
श्या त्वया भाग्यायत्तमतः परं न
खलुतद्वाच्यं वधूबंधुभिः ॥
शाकुंतले ४ र्थे अङ्के.

—0—

क्षणेन च तुरगमयामिव महीतलं,
कुंजरमयमिव दिक्चक्रवालं, आतपत्र-
मंडलमयमिवांतरिक्षं, इभमदगंधमय
इव समीरणः, भूपालमयीव प्रजासृष्टिः
* * * *
जयजयशब्दमयमिव त्रिभुवनमभवन्.
*कादंबर्यां ११३ तमे पुटे.

—0—

शार्दूलकेसरिकरनखराविदार्यमाण
करिकुंभसंभवेन...................
कादंबर्यां १६० तमे पुटे.

* डाक्टर् पीटर्सनेन मुद्रितायां.

ಸುದಯಂಗೆಯೆ ಪೊಣ್ಮುವ ಕೆಂಪು ಪೋಲ್ತಿ
ಸಂ । ತಳರೆ ಪೆಱಂಗಿನೊಳ್ ಸ್ಫುದಿವುದೆತ್ತಿ ರ
ವುದ್ಗತಚಂದ್ರಸಿಂಪದಂ ॥

ಪುಟ. 303. ಆಶ್ವಾಸ. 12 ಪದ್ಯ 5.

—0—

ನೆಱೆದ್ಯೆ ಸಂಜೆಯೊಳೆಂದು ಕಾಯ್ದೊದೆ
ದೊಡೇನಾತ್ಮಾಂಗದೊಳ್ ರೋಹಿಣೀ । ಚ
ರಣಾಲಕ್ತಕರಾಗಮುಚ್ಚಿ ಬಿದುದೋಮೇಱ
ಕಾಮಿಗಳ್ಗೀಪ ರು । ಗರಸಂ ಪೊಣ್ಮಿ
ದುದೋ ತಮೋಗಜದ ಕೋಡೇಱಿಂದ
ಮೇಂ ನೊಂದುದೋ । ಪರಿಣಾಂ ಮೇಣ್
ನಿಸಿತ್ತು ರಕ್ತರುಚಿಯಿಂ ಬಿಂಬಂ ಸುಧಾ
ಸೂತಿಯಾ ॥

ಪುಟ. 303. ಆಶ್ವಾಸ 12. ಪದ್ಯ 6.

—0—

ನೆಲಸುಗೆ ನಿನ್ನ ವಕ್ಷದೊಳ್ ನಿಚ್ಚಳ
ಮಿಾಭಟಖಡ್ಗಮಂಡಲೋ । ತ್ಪಲವನವಿ
ಭ್ರಮಭ್ರಮರಿಯಪ್ಪ ಮನೋಹರ ರಾಜ್ಯ
ಲಕ್ಷ್ಮೀ * *

ಪುಟ. 384. ಆಶ್ವಾಸ 14. ಪದ್ಯ 130

—0—

## ವಿಕ್ರಮಾರ್ಜುನವಿಜಯಂ.

ಸಾಲಪ್ರಾಂಶು ವಿಶಾಲಲೋಲನಯನಂ
ಪ್ರೋದ್ಯದ್ವೃಷಸ್ಕಂಧನು । ನ್ಮೀಲತ್ಪಂಕ
ಜವಕ್ತ್ರನಾಯತಭುಜಾಗ್ರೋರಸ್ಸ್ಥಲಂ
ದೀರ್ಘಬಾ । ಹಾಲಂಬಂ * *

ಪುಟ. 11. ಆಶ್ವಾಸ 1. ಪದ್ಯ. 67.

—0—

ಧ್ಯಾನದೊಳಭವಂ ನೆಱೆದಿನಿ
ಸಾನುಮನರೆಮುಚ್ಚಿ ಕಣ್ಗಳಂ ನಿಶ್ಚಳಿತಂ ।
ತಾನಿರ್ದ ಮಱೆದು ಕೆಂದಿದ
ಮಿಾನಂ ತಳ್ತಡಿದಿರ್ದ ಮಡುವಂ ಪೋಲ್ತಂ

ಪುಟ. 169. ಆಶ್ವಾಸ 8. ಪದ್ಯ 13.

रतिकलहकुपितरोहिणीचरणाल
क्तकरसलांछितमिव अभिनवोदयलो-
हितं रजनिकरमुदितं विलोक्य......
कादंबर्या १६१ तमे पुटे.

—0—

इयं हि सुभटखड्गमण्डलोत्पलवन-
विभ्रमभ्रमरी लक्ष्मीः। * *
कादम्बर्या १०४ तमे पुटे.

—0—

व्यूढोरस्को वृषस्कन्धः सालप्रांशुर्म-
हाभुजः ॥
रघुवंशे. प्रथमसर्गे १३ श्लोक.

—0—

इति विज्ञापितो राज्ञा ध्यानस्तिमि-
तलोचनः । क्षणमात्रमृषिस्तस्थौ सुप्त-
मीन इव ह्रदः ॥
रघुवंशे प्रथमसर्गे ७३ तमः श्लोकः.

—0—

ನುಡಿವೊಡೆ ರಾಜಕಾರ್ಯನಯಮೆತ್ತ
ಬಲಾಜನದೋ * * ತ್ತುಡುಪತಿವಂಶ
ನೋಡುವೊಡಿದೋ ಘೋಷ್ಠಿಂಗಳೆಂತುಕೇ।
ಳ್ನುಡಿಯದೆ ಕೆಮ್ಮಗಿರ್ದೊಡ ಮಿರಲ್ಕಣ
ಮಿಾಯದೆ ನಿಮ್ಮೊಳೇನುಮಂ। ನುಡಿಯಿ
ಸಿದಪ್ಪವಾಕುರುಕುಳರ್ಕಳೆಗೆಯ್ದಪರಾಧ
ಕೋಟಿಗಳ್॥

ಪುಟ. 157. ಅಶ್ವಾಸ. 7. ಪದ್ಯ 44

भवादृशेषु प्रमदाजनोदितं भवत्यधि-
क्षेप इवानुशासनं। तथापि वक्तुं व्यव-
साययंति मां निरस्तनारीसमया दुरा-
धय: ॥

भारवौ प्रथमसर्ग २८ तम: श्लोक:.

—0—

ಪೋಗಿಸುಪರ್ವಪರ್ವತದ ಕಾಂಚನ
ತೂಣೆಗಳಂ ಪರಾಕ್ರಮೋ। ದ್ಯೋಗದಿ
ನೆತ್ತಿತಂದು ನಿನಗಿತ್ತದಟಿಂ ಬಡಪಟ್ಟು
ಪಟ್ಟದೊಳ್॥ ಪೋಗಿ ತೊಟಿಲ್ವು ನಾಗರ್
ಳನುಡಲ್ತುರುತಿರ್ದಲೆ ಮೂಡಲ್ಕಾರ್ತನಿಲು
ಗಳೆ ಕೋಪವಂ ನಿನಗೆ ಸಂಚಿತಶೌರ್ಯ
ದಿನಾ ಧನಜಂಯಂ ॥

ಪುಟ. 157. ಆಶ್ವಾಸ. 7. ಪದ್ಯ 46

—0—

विजित्य य: प्राज्यमयज्यदुत्तरान्
कुरूनकुप्यं वसु वासवोपम:। स व-
ल्कवासांसि तवाधुना हरन् करोति
मन्युं न कथं धनंजय: ॥

भारवौ प्रथमसर्गे ४२ तम: श्लोक:.

—0—

ಬಳ್ವಳನೀಳ್ದ ಕಣ್ಮಲರ ತಳ್ತಮೆಯಿಂ
ಕರೆಗಣ್ಮಿಪಳ್ಗಡ। ಲ್ಗಳ್ಪರಿಯಲ್ಕಮಾಟಿಸಿ
ದೊಡೊಯ್ಯನೆ ಮಂಗಳಗೀತಿ ಭೀತಿಯಿಂ।
ತಳ್ವದೆ ಮೂಡೆ ಬಾಷ್ಪಜಳಮಂ ತಳೆದಟ್ಟಿಕಿ
ನೀಯಿ ಸಂಬಳಂ। ಗೊಳ್ವವೊಲಾತಳೋ
ದರಿಯ ಚಿತ್ತಮ ನಿಟ್ಟಿಕಿ ಗೊಂಡನಂತರಂ,

ಪುಟ. 161. ಆಶ್ವಾಸ. 7. ಪದ್ಯ 66.

तुषारलेखाकुलितोत्पलाभे पर्यश्रु-
णी मंगलभंगभीरु:। अगूढभावापि
विलोचने सा न लोचने मीलयितुं विषे
हे॥ अकृत्रिमप्रेमरसाभिरामं रामार्पितं
दृष्टिविलोभि दृष्टं। मन:प्रसादाञ्जलि-
ना निकामं जग्राह पाथेयमिवेंद्रसूनु: ॥

भारवौ द्वितीयसर्गे ३६-३७तमौ श्लोकौ.

—0—

ಸಮದಗಜಗಮನೆಯುಮುರ್ಗಿ
ಲ ಮೇಲೆ ನಡೆಪಾಡುವಾಕೆಗಳ್ ತಮಗೆ
ಧರಾ।
ಗಮನಂ ಪೊಸತಪ್ಪುದಱಿಂ
ದಮರ್ದಿರೆ. ,ನಡೆಯಲಾಱದೆ ಸುಟಿದರ್॥

द्रुततरमभियातुमिच्छतीनां
गगनपरिक्रमलाघवेन तासां।

ಮುಡಿಯು ಕುಡುಮಿಯಾಗದ ಜಘನದ
ಕಡುವಿಣ್ಪಿಂ ಮಣಲೊಳಟ್ಟು ಬರೆಮೆಲ್ಲ
ಡಿಗಳ್
ನಡೆಯದ ದಿವಸಮುಂ ತಾಂ
ನಡೆಯಿಸುವಂತವರ್ಗಳೊಯ್ಯನೊಯ್ಯನೆ
ಬಂದರ್

ಪುಟ. 164. ಆಶ್ವಾಸ. 7. ಪದ್ಯ 82-83.

अवनिषु चरणैः पृथुमनीनामलघुनि-
तंबतया चिरं निषेदे ॥
भारवेः—द्वादशसर्गे—तृतीयः श्लोकः.

—o—

ಹರಜಟಾಜೂಟಕ್ಕೆ ಚಂದ್ರಲೇಖೆಯು
ಪ್ಪಂತೆ ದಿಕ್ಕರಿಕರಟತಟಕ್ಕೆ ಮದಲೇಖೆ
ಯಂತೆ ಕೈಟಭಾರತಿಯ ವಿಶಾಲೋರಸ್ಥ
ಲಕ್ಕೆ ಕೌಸ್ತುಭವಿರ್ಪಂತೆ.

ಪುಟ 9. 56. ಗದ್ಯ.

चंद्रलेखेव हरजटाकलापस्य कौस्तु-
भप्रभेव कैटभारेः वक्षस्स्थलस्य......
मदलेखेव दिग्गजस्य ॥
कादंबर्या—१९तमे—पुटे.

—o—

—o—

ಈರೀತಿಯಾಗಿ ಪಂಪನು ಸಂಸ್ಕೃತಕವಿಗಳಿಂದ ಕೆಲವು ವಾಕ್ಯಗಳನ್ನೂ ಅಭಿಪ್ರಾಯಗಳನ್ನೂ ತೆಗೆದುಕೊಂಡ ಮಾತ್ರದಿಂದಲೇ ಅವನಿಗೆ ಕೃತಿಚೌರ್ಯದೋಷವು ಉಂಟಾಯಿತೆಂದಾಗಲಿ ಪ್ರತಿಭೆಯಿಲ್ಲವೆಂದಾಗಲಿ ಭಾವಿಸಕೂಡದು. ಆದಿಪುರಾಣವನ್ನು ಮೂರುತಿಂಗಳಲ್ಲಿಯೂ ಭಾರತವನ್ನು ಆರುತಿಂಗಳಲ್ಲಿಯೂ ಬರೆದುದೇ ಅವನ ಅದ್ವಿತೀಯವಾದ ಪಾಂಡಿತ್ಯಕ್ಕೂ ಅನ್ಯಾದೃಶವಾದ ಪ್ರತಿಭೆಗೂ ಸಾಕಾದ ನಿದರ್ಶನವಾಗಿದೆ. ಆದುದರಿಂದ ಅವನು ಹೀಗೆ ಮಾಡಿದುದಕ್ಕೆ ಬೇರೆ ಕಾರಣವಿರಬೇಕು. ಸಂಸ್ಕೃತದ ಉದ್ದಾಮಕವಿಗಳ ಅಭಿಪ್ರಾಯಗಳನ್ನು ಮನೋಹರವಾಗಿ ಕನ್ನಡಿಸಿ ಕನ್ನಡಿಗರಲ್ಲಿ ಪ್ರಚಾರಕ್ಕೆ ತರಬೇಕೆಂಬ ಉದ್ದೇಶವೇ ಕಾರಣವಾಗಿರಬಹುದು. ಇದು ಹೇಗಾದರೂ ಇರಲಿ; ಹೀಗೆ ಮಹಾಕವಿಗಳ ಸರ್ವವಿದಿತವಾದ ಅಭಿಪ್ರಾಯಗಳನ್ನು ಭಾಷಾಂತರಗಳಲ್ಲಿ ಉಪಯೋಗಿಸಿಕೊಳ್ಳುವುದರಿಂದ ಆವದೋಷವೂ ಇಲ್ಲ' ಈ ಅಭಿಪ್ರಾಯದಿಂದಲೇ ಆವಕವಿಗಳೂ ಈತನಲ್ಲಿ ದೋಷಾರೋಪಣೆ

ಯನ್ನು ಮಾಡಿಲ್ಲ. ಅಷ್ಟೇ ಅಲ್ಲ ; ಕನ್ನಡದ ಮಹಾಕವಿಗಳೆಲ್ಲರೂ ಈ ತನನ್ನು ಏಕಕಂಠರಾಗಿ ಸ್ತುತಿಸಿದ್ದಾರೆ. ಕವಿರತ್ನವೆಂದು ಪ್ರಖ್ಯಾತನಾದ ರನ್ನನು 'ಸುಭಗಕವಿಪಂಪನಿಂ ಮಾ । ಗ್ವಿಭವೋನ್ನತಿ ನೆಗೞ್ದವನ ಗುಣದೊಳಗೆಸೆದಿ । ದ್ಉಭಯಕವಿಚಕ್ರವರ್ತಿಗ । ಮಭಿನವಕವಿ 'ಚಕ್ರವರ್ತಿಗಂ ದೊರೆಯೊಳರೇ'—ಎಂದು ಹೇಳಿದ್ದಾನೆ. 'ರಸಿಕಾಗ್ರಣಿ ಹಂಪದೇವಂ' ಎಂದು ವರ್ಧಮಾನಪುರಾಣದಲ್ಲಿ ವಾಣೀವಲ್ಲಭನೂ, 'ಪಂಪನೊಂದಸದೃಶಮಪ್ಪಪೂರ್ವರಸಭಾವಂ' ಎಂದು ಧರ್ಮಾಮೃತದಲ್ಲಿ ನಯಸೇನನೂ, 'ಪಂಪನ ಗುಣಂ' ಎಂದು ಸೂಕ್ತಿಸುಧಾರ್ಣವದಲ್ಲಿ ಮಲ್ಲಿಕಾರ್ಜುನನೂ, 'ಪಂಪನ ರೀತಿ' ಯೆಂದು ಜಗನ್ನಾಥವಿಜಯದಲ್ಲಿ ರುದ್ರಭಟ್ಟನೂ, 'ಪಂಪನಿಂಪು' ಎಂದು ಅನಂತನಾಥಪುರಾಣದಲ್ಲಿ ಜನ್ನನೂ, 'ಪಂಪನ ನುಣ್ಪುವೆತ್ತ ನುಡಿ' ಯೆಂದು ಪಾರ್ಶ್ವಪುರಾಣದಲ್ಲಿ ಪಾರ್ಶ್ವಪಂಡಿತನೂ, 'ಸತ್ಕವಿಹಂಪನ ವಾಕ್ಸೌಂದರೀ ಸುಭಗಂ' ಎಂದು ಶಾಂತಿನಾಥಪುರಾಣದಲ್ಲಿ ಕಮಲಭವನೂ, ಪಂಪನ ಅದ್ಭುತಶಕ್ತಿಯನ್ನು ತಮ್ಮ ತಮ್ಮ ಅನುಭವಾನುಸಾರವಾಗಿ ಸ್ತುತಿಸಿದ್ದಾರೆ. ಹೆಚ್ಚು ಮಾತುಗಳೇತಕ್ಕೆ ? ಪ್ರಸಿದ್ಧವಾದ ರಾಮಚಂದ್ರಚರಿತಪುರಾಣವನ್ನೂ ಮಲ್ಲಿನಾಥಪುರಾಣವನ್ನೂ ಬರೆದ ಮಹಾಕವಿ ನಾಗಚಂದ್ರನು ತನ್ನ ಮಲ್ಲಿನಾಥಪುರಾಣದಲ್ಲಿ 'ಮುನ್ನಿನ ಸುಗೆ ಕೃತಿಗೆ ಸಾಭಾ । ಗ್ಯೋನ್ನತಿಯಂ ಸುಕವಿಪಂಪನಾದಿಪುರಾಣಂ' ಎಂದು ಸ್ತುತಿಸಿದುದು ಮಾತ್ರವೇ ಅಲ್ಲದೆ, ತಾನು ಅಭಿನವಪಂಪನೆಂದು ಹೆಸರಿಟ್ಟುಕೊಂಡು ತನಗೆ ಆದಿಪಂಪನಲ್ಲಿದ್ದ ಗೌರವವನ್ನು ಪ್ರಕಟಿಸಿದ್ದಾನೆ.

ಹೀಗೆ ಮಹಾಕವಿಸ್ತುತನಾದವನ ಕಾವ್ಯದ ವಿಷಯವಾಗಿ ನಾವು ಹೇಳಬೇಕಾದುದೇನೂ ಇರುವುದಿಲ್ಲ. ತನ್ನ ಕಾವ್ಯವು 'ವಿದಿತಂ ಪ್ರಾತೀತಕಂ ಕೋಮಳಮತಿಸುಭಗಂ ಸುಂದರಂ ಸೂಕ್ತಿಗರ್ಭಂ । ಮೃದುಸಂದರ್ಭಂ ವಿಚಾರಕ್ಷಮಮುಚಿತಪದಂ ಶ್ರವ್ಯಮವ್ಯಾಕುಳಂವ್ಯಾ । ಪ್ತದಿಗಂತಂ ಎಂದೂ 'ಇದು ನಿಚ್ಚಂ ಪೊಸತರ್ಣವಂಬೊಲತಿಗಂಭೀರಂ ಕವಿತ್ವಂ" ಎಂದೂ 'ಇದುವೆ ಸುಕವಿಪ್ರಮೋದಪ್ರದಂ' ಎಂದೂ ಇದರಲ್ಲಿ 'ಅಱಿವುದು ಕಾವ್ಯಧರ್ಮಮಂ' ಎಂದೂ ತನ್ನ ಕಾವ್ಯಗಳು 'ಮುನ್ನಿನ ಕಬ್ಬಮನೆಲ್ಲಮಿಕ್ಕಿ ಮೆಟ್ಟಿದುವು' ಎಂದೂ ಪಂಪನೇ ಹೇಳಿ

ಕೊಂಡಿದ್ದಾನೆ. ಈ ಅಭಿಪ್ರಾಯವನ್ನೇ ಸಮರ್ಥಿಸಿ ಪಾರ್ಶ್ವಪಂಡಿತನು—

‘ಚತುರಚಮತ್ಕೃತಿಯುದ್ಘಾ । ಟಿತ[illegible]ಯುಂ ದಿಟಕ್ಕೆ ಪಂಪನ ಕೃತಿ
ಮಿ । ಕ್ಕಿತರರ ಕೃತಿತತಿಯುಮಿಕಾ । [illegible]ಮಣಿಯುಂ ವಿದಗ್ಧರಂ ಮೆಚ್ಚಿಕು
ಮೇ । ಇಂಪೆನೆಯಿ [illegible] ಪ್ರೋಲ್ತಿರೆ ಸುಕರಸರಸ
ಸೂಕ್ತಿವಿಳಾಸಂ । ಪಂಪನೆ ನುಡಿಪಂ
ಬೞಿಕ್ಕೆ ಕಳಕಂತನ ಪ್ರೋಲ್—’ಎಂದೂ, ನಾಗರಾಜನು ‘ಪಸರಿಪ ಕನ್ನಡಕ್ಕೊಡೆಯನೊರ್ವನೆ ಸತ್ಕವಿಪಂಪ’ ನೆಂದೂ ಹೇಳಿದ್ದಾರೆ.

ಪಂಪನು ತನ್ನ ಭಾಷೆ ‘ಪ್ರಟಿಮದ ಸಾಜದ ಪುಲಿಗೆರೆಯ ತಿರುಳಕನ್ನಡ’ ವೆಂದು ಹೇಳಿದ್ದಾನೆ. ಇದು ವ್ಯಾಕರಣಶುದ್ಧವಾದುದೆಂಬ ವಿಷಯದಲ್ಲಿ ಶಬ್ದಮಣಿದರ್ಪಣಕಾರನ ‘ ಹಂಪನ ಸುಮಾರ್ಗಮಿದಱೊಳೆ ಲಕ್ಷ್ಯಂ’ ಎಂಬ ಮಾತೇ ಸಾಕಾಗಿರುತ್ತದೆ. ಈತನು ಆದಿಪುರಾಣವೊಂದರಿಂದಲೇ ಹತ್ತೊಂಬತ್ತು ಕಡೆಯಲ್ಲಿ ಪದ್ಯಗಳನ್ನು ಉದ್ಧರಿಸಿ ಬರೆದಿದ್ದಾನೆ. । ನಾಗವರ್ಮನು ಭಾಷಾಭೂಷಣದಲ್ಲಿ ‘ಗುರುಹಂಪದೇವ’ ನಿಂದ ಉದಾಹರಣೆಗಳನ್ನು ತೆಗೆದಿದ್ದಾನೆ. ಶಬ್ದಾನುಶಾಸನದಲ್ಲೂ ಇವನ ಗ್ರಂಥದಿಂದ ಪದ್ಯಗಳು ಉದ್ಧೃತವಾಗಿವೆ.

---

| 1 ಆದಿಪುರಾಣ. | | ಪುಟ. | ಪದ್ಯ. | ಶಬ್ದಮಣಿದರ್ಪಣ. ಪು.ಟ | ಪದ್ಯ. |
|---|---|---|---|---|---|
| [1.] ಪರಮಜಿನೇಂದ್ರವಾಣಿಯ ಸರಸ್ವತಿ ಪೇೞಿದು ಪೆಣ್ಣರೂಪಮಂ । ಧರಿಯಿಸಿ ನಿಂದು ದಲ್ತು . . . . . . . . . . | ಇತ್ಯಾದಿ | 2 | 9 | 109 | 98 |
| [2.] ಶ್ರೀಮತ್ಸಮಂತ ಭದ್ರಸ್ವಾಮಿಗಳ . . . . . . . . . . | ,, | 3 | 11 | 125 | 102 |
| [3.] ಇರು ಮರುಳೆ ಪುಷ್ಪವೈಯಾಕರಣಂಗಂ . . . . . . | ,, | 5 | 24 | 272 | 230 |
| [4.] ಆಯಿರ್ದಮೊಟ್ಟೆಯೊಳ್ | ,, | 38 | 53 | 64<br>128 | 53<br>104 |

| ಆದಿಪುರಾಣ. | | | | ಶಬ್ದಮಣಿದರ್ಪಣ. | |
|---|---|---|---|---|---|
| [5.] ಸುರತರು ನಂದನಂಗಳಿರ | ,, | 15 | 4 | 112<br>153 | 95<br>120 |
| [6.] ವಿನೋದದ ಮೊದಲಿಲ್ಲದಂ | ,, | 48 | 15 | 136 | 111 |
| [7.] ಅಮರ್ದುಮನಂತಕನೊ<br>ರ್ಮೊಗೆಯೊ . . . . . . . . | ,, | 54 | 35 | 150 | 122 |
| [8.] ಇರುಳಿನ ಚಕ್ರಾಹ್ವಯದ<br>ವೊಲಿರ್ದಪಂ ಸುಖಂಬಡೆವನೇ. | ,, | 65 | 68 | 134 | 109 |
| [9.] ಓಸರಿಸಿವಜವನಿಕೆಯೊಳ<br>ನೋಸರಿಸಿದ ನಿಸಲೆ ಕಂಡು | ,, | 221 | 21 | 16 | 8 |
| [10.] ಅಱುದಿಂಗಳಾಯುವುಂಪೆನೆ<br>ಮಱುಗುವುದುಂ . . . . . . | ,, | 226 | 50 | 224 | 189 |
| [11.] ಬಾಱಿಸಿದುವು ಬಿದಿವೆ ಜಡಿದು<br>ವನದೇವತೆಗಳ್ . . . . | ,, | 235 | 93 | 109 | 88 |
| [12.] ಈಯೆಲ್ಲಂಬಿತ್ತು ಕಲ್ಪಾಂ<br>ಘ್ರಿಪಮಭಿಮಾತಮಂ . . | ,, | 244 | 132 | 64<br>128<br>277 | 53<br>104<br>234 |
| [13.] ಮಹೇಂದ್ರಮಹದೈಶ್ವ<br>ರ್ಯಂಗಳೆಲ್ಲ ಧ್ರುವಂ . . | ,, | 263 | 59 | 168 | 137 |
| [14.] ಅವಕರ್ಣಿಯ್ದೆ ಕವಲ್ಕ<br>ವಲ್ತು ಪಲವುಂ ಕೊಂಬಾದು<br>ಪೊಳ್ಗೊಂಬುಗಳ್ . . . . . . | ,, | 289 | 97 | 112 | 90 |
| [15.] ಪಗಲಂತಿರ್ದಚ್ಚವೆಳ್ದಿಂ<br>ಗಳೊಳ್ . . . . . . . . . . | ,, | 303 | 9 | 134 | 109 |
| [16.] ಅವತಂಸೋತ್ಪಲತಾಡನಂ | ,, | 312 | 48 | 173 | 142 |
| [17.] ಜಳಧಿದ್ವೀಪಾಂತರಾಳಂಗಳ<br>ನಿರದೆ ಪುಗಿಂ ಪೋಗಿಮುಗ್ರಾ<br>ರಿಗಳ್ . . . . . . . . . . . . | ,, | 340 | 44 | 153 | 125 |
| [18.] ಸ ದೇವಚರಿತಂ ಚರೇತೆನಿಸಿ<br>ದೈ ತ್ರಿಲೋಕೇಶ್ವರಾ . . . . | ,, | 353 | 84 | 74 | 61 |
| [19.] ಇನಿಯವು ವಿಷಯಸುಖಂ . . | ,, | 383 | 125 | 117 | 95 |

ಇವನ ಗ್ರಂಥದ 'ಕಾವ್ಯಧರ್ಮ' ಸಮೃದ್ಧಿಯನ್ನು ದೃಢೀಕರಿಸುವಂತೆ ಕಾವ್ಯಾವಲೋಕನದಲ್ಲಿ ನಾಗವರ್ಮನೂ, ರಸರತ್ನಾಕರದಲ್ಲಿ ಕವಿಸಾಳ್ವನೂ ಅನೇಕ ಪದ್ಯಗಳನ್ನು ತೆಗೆದು ಉದಾಹರಿಸಿದ್ದಾರೆ. ಮಲ್ಲಿಕಾರ್ಜುನನ ಸೂಕ್ತಿಸುಧಾರ್ಣವದಲ್ಲೂ ಅಭಿನವವಾದಿವಿದ್ಯಾನಂದನನ ಕಾವ್ಯಸಾರದಲ್ಲೂ ಪತತ್ಕೃತವಾದ ಅನೇಕಪದ್ಯಗಳು ದೊರೆಯುತ್ತವೆ.

ಪಂಪನು ಸತ್ಕವಿಯ ಶಕ್ತಿಯನ್ನೂ ಸತ್ಕಾವ್ಯದ ಲಕ್ಷಣಗಳನ್ನೂ 'ಬಗೆಯದು ತಪ್ಪದಾಗಿ ಮೃದುಬಂಧದೊಳೊಂದುವುದೊಂದಿದೇಸೆಯೊಳ್ । ಪುಗುವುದು ಪೊಕ್ಕಮಾರ್ಗದೊಳ್ ತಳ್ವುದು ತಳ್ತೊಡೆ ಕಾವ್ಯದ ಬಂಧ ಮೊಪ್ಪಗುಂ ' 'ಆಸಕಲಾರ್ಥಸಂಯುತಮಳಂಕೃತಿಯುಕ್ತಮುದಾತ್ತಕೀರ್ತಿವಿ । ನ್ಯಾಸಮನೇಕಲಕ್ಷಣಗುಣಪ್ರಭವಂ ಮೃದುಪಾದಮಾದ ಪಾ। ಕ್ರಿ ।ೀಸುಭಗಂ ಕಳಾಕಳಿತಂ' ಎಂಬ ಪದ್ಯಭಾಗಗಳಲ್ಲಿ ವರ್ಣಿಸಿದ್ದಾನೆ. ಈರೀತಿಯಾದ ಗುಣಗಳನ್ನೆಲ್ಲಾ ತಳೆದು ಈಲಕ್ಷಣಗಳಿಗೆ ಅನುಸಾರವಾದ ಕಾವ್ಯಶ್ರೇಷ್ಠವನ್ನು ವಿರಚಿಸಿ ತನ್ನ ಲಕ್ಷಣಕ್ಕೆ ತನ್ನ ಕಾವ್ಯವನ್ನೇ ಲಕ್ಷ್ಯವಾಗಿ ತೋರಿಸಿದವನು ಮಹಾಕವಿಪಂಪನೊಬ್ಬನೇ ಎಂದು ಧಾರಾಳವಾಗಿ ಹೇಳಬಹುದು.

ಪಂಪನು ಸಂಸ್ಕೃತದಲ್ಲೂ ಗ್ರಂಥಗಳನ್ನು ಬರೆದುದಾಗಿ ತಿಳಿಯಬರುತ್ತದೆ. ಇವನ ಕನ್ನಡದ ಕಾವ್ಯಗಳಲ್ಲಿ ಈವರೆಗೆ ತಿಳಿದಿರುವುವು ಪಂಪಭಾರತ ಅಥವಾ ವಿಕ್ರಮಾರ್ಜುನವಿಜಯ, ಆದಿಪುರಾಣ ಎಂಬ ಎರಡು ಗ್ರಂಥಗಳು.

## ಪಂಪಭಾರತ ಅಥವಾ ವಿಕ್ರಮಾರ್ಜುನವಿಜಯ.

ಇದು ಚಂಪೂಕಾವ್ಯವು; 14 ಆಶ್ವಾಸಗಳುಳ್ಳುದಾಗಿದೆ. ಇದರಲ್ಲಿ ಭಾರತದಕಥೆ ಹೇಳಿದೆ ಇದನ್ನು ಕವಿ ತನ್ನ ಪೋಷಕನಾದ ಅರಿಕೇಸರಿಯ ಖ್ಯಾತಿಯನ್ನು ಸ್ಥಿರವಾಗಿಸ್ಥಾಪಿಸುವುದಕ್ಕಾಗಿ ವಿರಚಿಸಿದನು. ಇದರಲ್ಲಿ "ಬೆಳಗುವೆಂ ಲೌಕಿಕಮಂ" ಎಂದೂ, "ಉಪಾಖ್ಯಾನಂಗಳೊಳೊಂದುಂ ಕುಂದಲೀಯದೆ ಪೇಳ್ದೆಂ" ಎಂದೂ ಕವಿಯೇ ಹೇಳಿದ್ದಾನೆ. ಈ ಕಾವ್ಯ

ದಲ್ಲಿ ಸಂಸ್ಕೃತಪದಗಳನ್ನು ವಿಶೇಷವಾಗಿ ಬೆರಸದೆ ಕನ್ನಡದ ಪದಗಳನ್ನೇ ಬಹಳವಾಗಿ ಪ್ರಯೋಗಿಸಿದ್ದಾನೆ.

ಈ ಗ್ರಂಥದ ವಿಷಯವಾಗಿ ಇಲ್ಲಿ ವಿಶೇಷವಾಗಿ ಲಂಬಿಸಿ ಬರೆವುದು ಅಪ್ರಕೃತವಾದುದರಿಂದ ಈವಿಷಯವನ್ನು ಇಷ್ಟಕ್ಕೆ ನಿಲ್ಲಿಸಿದ್ದೇವೆ.

ಆದಿಪುರಾಣ.

ಇದು ಚಂಪೂಕಾವ್ಯವು. ಇದರಲ್ಲಿ ಪ್ರಥಮತೀರ್ಥಂಕರನಾದ ಪುರುದೇವನ ಚರಿತೆ ವರ್ಣಿಸಲ್ಪಟ್ಟಿದೆ. ಈ ಕಥೆಯನ್ನೇ ಅರ್ಹದ್ದಾಸನೆಂಬ ಕವಿ 'ಪುರುದೇವಚಂಪು' ಎಂಬ ಹೆಸರಿನಿಂದ ಸಂಸ್ಕೃತದಲ್ಲಿ ಬರೆದಿದ್ದಾನೆ. ಈಕಥೆ ಚಾವುಂಡರಾಯನ "ಚಾವುಂಡರಾಯಪುರಾಣ" ದಲ್ಲಿ ಕನ್ನಡ ಭಾಷೆಯಲ್ಲಿ ಗದ್ಯರೂಪವಾಗಿ ದೊರೆಯುತ್ತದೆ. ಇದನ್ನು ಹಸ್ತಿಮಲ್ಲನು ಕರ್ಣಾಟಕಕಾವ್ಯರೂಪವಾಗಿ ಬರೆದಂತೆ ಪ್ರತೀತಿಯಿದೆ.

ಈ ಕಥೆ ಹಿಂದೆ ಪುರುದೇವಾದಿಜಿನೇಂದ್ರರು ಗಣಧರರು ಇವರ ಪರಂಪರೆಯಿಂದ ವೀರಸೇನಜಿನಸೇನಾಚಾರ್ಯಪರ್ಯಂತವಾಗಿ ಉಪದೇಶಕ್ರಮದಿಂದ ಬಂದಿತೆಂದು ಈ ಗ್ರಂಥದಲ್ಲಿ ಹೇಳಿದೆ. ಆದರೂ ಜಿನಸೇನನ ಪುರಾಣದ ಆಧಾರದಿಂದ ಈಗ್ರಂಥವು ಹುಟ್ಟಿದ ಹಾಗೆ ತಿಳಿಯಬರುವುದಿಲ್ಲ; ವಿಕ್ರಮಾರ್ಜುನವಿಜಯದಲ್ಲಿ " ಸತ್ಕವಿ ವ್ಯಾಸಸಮಾಗಮಾನ್ವಿತಮನಾದಿಪುರಾಣಮನೆಯ್ದೆ ಪೇೞ್ದ ವಾಕ್ಶ್ರೀಸುಭಗಂ ಪುರಾಣಕವಿ" ಯೆಂದು ಹೇಳಿಕೊಂಡಿರುವುದರಿಂದ ವ್ಯಾಸನೆಂಬ ಕವಿಯ ಗ್ರಂಥದ ಆಧಾರದ ಮೇಲೆ ವಿರಚಿತವಾದಂತೆ ತೋರುತ್ತದೆ.

ಇದು 16. ಆಶ್ವಾಸಗಳಾಗಿ ಭಾಗಿಸಲ್ಪಟ್ಟಿದೆ. ಗ್ರಂಥಕಾರನು ಕವಿಸಂಪ್ರದಾಯಾನುಸಾರವಾಗಿ ಆದಿಯಲ್ಲಿ ಕಥಾನಾಯಕನಾದ ಆದಿಬ್ರಹ್ಮನನ್ನೂ ಬಳಿಕ ಸಿದ್ಧಾದಿಗಳನ್ನು ಸ್ತುತಿಸಿದ್ದಾನೆ. ಅನಂತರ ತನ್ನ ಗುರುವಾದ ದೇವೇಂದ್ರಮುನಿಯನ್ನು ಸ್ತುತಿಸಿ ತರುವಾಯ ಈ ಪುರಾಣವನ್ನು "ಅಪರಿಮಿತಭಕ್ತಿಯಿಂ ವಿರಚಿಸುವೆಂ" ಎಂದೂ ಇದರಲ್ಲಿ "ಕಾವ್ಯಧರ್ಮಮಂ ಧರ್ಮಮುಮಂ" ಹೇಳುವೆನೆಂದೂ ತಿಳಿಸಿ ಕಥೆಯನ್ನು ಉಪಕ್ರಮಿಸುತ್ತಾನೆ.

ಇದರಲ್ಲಿ ಕಥಾನಾಯಕನ ಹಿಂದಣ ಹತ್ತು ಜನ್ಮದ ಕಥೆಗಳಿವೆ.

I ಮೊದಲನೆಯ ಜನ್ಮದಲ್ಲಿ—ಅವನು ವಿಜಯಾರ್ಧಗಿರಿಯ ಉತ್ತರ ಶ್ರೇಣಿಯ ಅಳಕಾಪುರದಲ್ಲಿ ಮಹಾಬಲನೆಂಬ ಖಚರಪತಿಯಾಗಿ ಸ್ವಯಂಬುದ್ಧಾದಿಮಂತ್ರಿಗಳ ಸಹಾಯ್ಯದಿಂದ ರಾಜ್ಯಭಾರಮಾಡುತ್ತಿದ್ದನು. ಒಂದಾನೊಂದುದಿವಸ ಅವನು ಒಡ್ಡೋಲಗದಲ್ಲಿರುವಾಗ ಸ್ವಯಂಬುದ್ಧನು ಸದ್ಧರ್ಮೋಪದೇಶಕ್ಕೆ ಅವಸರವನ್ನು ಪಡೆದು ಧರ್ಮಪ್ರಭಾವವನ್ನೂ ತತ್ಫಲಗಳನ್ನೂ ತಿಳಿಸಿದನು, ಉಳಿದ ಮಂತ್ರಿಗಳು ವಿಮತಗಳನ್ನವಲಂಬಿಸಿ, ಜೀವನಿಲ್ಲ, ಪುಣ್ಯಪಾಪಗಳಿಲ್ಲವೆಂದು ವಾದಿಸಿದರು. ಸ್ವಯಂಬುದ್ಧನು ಅವರೆಲ್ಲರನ್ನೂ ಯುಕ್ತಿಯುಕ್ತವಾದ ವಾದದಿಂದಲೂ ದೃಷ್ಟಶ್ರುತಾನುಭೂತ ಕಥಾನುವಾದದಿಂದಲೂ ಜಯಿಸಿ ಪ್ರಭುವಿನ ವಿಶ್ವಾಸಕ್ಕೆ ಪಾತ್ರನಾಗಿದ್ದನು. ಹೀಗೆ ಕೆಲವುಕಾಲ ಕಳೆಯಲು ಸ್ವಯಂಬುದ್ಧನು ಒಂದುಕಾಲದಲ್ಲಿ ಮೇರುವಿಗೆ ಹೋಗಿ ಅಲ್ಲಿ ಜಿನದರ್ಶನ ಮಾಡುತ್ತಿದ್ದನು; ಆಗ ಅಲ್ಲಿಗೆ ಗಗನದಿಂದ ಆದಿತ್ಯಗತಿ ಅರಿಂದಮ ಎಂಬ ಇಬ್ಬರು ಚಾರಣರು ಇಳಿದು ಬಂದರು. ಅವರನ್ನು ಕಂಡು ಒಡನೆ ಅಲ್ಲಿಗೆ ಹೋಗಿ, ತನ್ನ ಸ್ವಾಮಿಯಾದ ಮಹಾಬಲನು ಆಸನ್ನಭವ್ಯನೆಂಬ ಸಂಗತಿಯನ್ನು ಅವರಿಂದ ತಿಳಿದುಕೊಂಡು ಅವನ ಬಳಿಗೆ ಹೋಗಿ ವಿವೇಕವನ್ನು ಹೇಳಿದನು. ಆ ಮಾತುಗಳಿಂದ ಖೇಚರೇಂದ್ರನು ವೈರಾಗ್ಯವನ್ನವಲಂಬಿಸಿ ಪ್ರಾಯೋಪಗಮನದಿಂದ ಶರೀರಪರಿತ್ಯಾಗಮಾಡಿದನು.

II ಎರಡನೆಯ ಜನ್ಮದಲ್ಲಿ—ಈಶಾನಕಲ್ಪದಲ್ಲಿ ಲಲಿತಾಂಗನಾಗಿ ಹುಟ್ಟಿದನು. ಕೂಡಲೆ ವಿಮಾನದಲ್ಲಿ ದೇವಸ್ತ್ರೀಯರು ಮಂಗಳವಾದ್ಯಸಮೇತರಾಗಿ ಬಂದು ಅವನನ್ನು ಇದಿರುಗೊಂಡರು. ಅವನು ಅಲ್ಲಿ ಸ್ವಯಂಪ್ರಭೆಯೆಂಬ ಸ್ತ್ರೀಯೊಡನೆ ಚಿರಕಾಲ ಸ್ವರ್ಗಸುಖವನ್ನು ಅನುಭವಿಸಿ, ಆಯುರವಸಾನದಲ್ಲಿ ಮೃತನಾದನು.

III ಮೂರನೆಯ ಜನ್ಮದಲ್ಲಿ—ಉತ್ಪಳಪುರದಲ್ಲಿ ವಜ್ರಜಂಘನೆಂಬ ರಾಜನಾಗಿ ಹುಟ್ಟಿದನು. ಅತ್ತ, ಸ್ವಯಂಪ್ರಭೆ ಪತಿವಿಯೋಗದಿಂದ ನೊಂದು ಗುರುಪಂಚಕವನ್ನು ಧ್ಯಾನಿಸುತ್ತಾ ಶರೀರವನ್ನು ಬಿಟ್ಟು, ಪುಂಡ

ರೀಕಿಣಿಯಲ್ಲಿ ಶ್ರೀಮತಿಯೆಂಬ ರಾಜಪುತ್ರಿಯಾಗಿ ಹುಟ್ಟಿ ಬೆಳೆಯುತ್ತಿದ್ದಳು. ಇಬ್ಬರಿಗೂ ಯೌವನೋದಯವಾಯಿತು. ವಜ್ರಜಂಘನು ಪೂರ್ವದ ಸ್ವಯಂಪ್ರಭೆಯನ್ನು ನೆನೆನೆನೆದು ಬೇರೆ ಯಾರನ್ನೂ ವರಿಸಲೊಲ್ಲದೆ ವಿರಹವಿಕಳನಾಗಿದ್ದನು. ಶ್ರೀಮತಿಗೂ ಪೂರ್ವಜನ್ಮಸಂಸ್ಕಾರವುಂಟಾಗಿ ಮನೋವ್ಯಥೆ ತಲೆದೋರಿತು. ಅವಳ ಸಖಿಯಾದ ಪಂಡಿತೆ ಆ ವಿಷಯವನ್ನು ತಿಳಿದುಕೊಂಡು ಶ್ರೀಮತಿ ಬರೆದಿಟ್ಟಿದ್ದ ಪೂರ್ವಜನ್ಮವೃತ್ತಸೂಚಕವಾದ ಚಿತ್ರಪಟದ ಸಾಹಾಯ್ಯದಿಂದ ವಜ್ರಜಂಘನೇ ಲಲಿತಾಂಗನೆಂದು ಕಂಡುಹಿಡಿದಳು. ಆ ಸಂಗತಿಯನ್ನು ಕೇಳಿ ಅವರ ಮಾತಾಪಿತೃಗಳು ಶ್ರೀಮತಿಯನ್ನು ವಜ್ರಜಂಘನಿಗೆ ಕೊಟ್ಟು ವಿವಾಹ ಮಾಡಿದರು. ವಜ್ರಜಂಘನು ಕೆಲವುದಿವಸ ಅತ್ತೆಯ ಮನೆಯಲ್ಲಿದ್ದು ಬಳಿಕ ತನ್ನ ಪತ್ನಿಯೊಡನೆ ನಿಜನಗರಿಗೆ ಹೋದನು. ಸ್ವಲ್ಪ ಕಾಲದಮೇಲೆ ವಜ್ರಜಂಘನ ತಂದೆಯೂ ಶ್ರೀಮತಿಯ ತಂದೆಯೂ ವೈರಾಗ್ಯವನ್ನವಲಂಬಿಸಿ ಮೊದಲನೆಯವನು ವಜ್ರಜಂಘನಿಗೂ ಎರಡನೆಯವನು ತನ್ನ ಮೊಮ್ಮಗನಿಗೂ ರಾಜ್ಯವನ್ನು ಕೊಟ್ಟು ತಪಸ್ಸಿಗೆ ಹೋದರು. ಶ್ರೀಮತಿಯ ಸೋದರಳಿಯನು ಬಾಲನಾದುದರಿಂದ ರಾಜ್ಯದಲ್ಲಿ ದುಷ್ಟರ ಬಾಧೆಯುಂಟಾಯಿತು. ಅದನ್ನು ಅಡಗಿಸಲು ವಜ್ರಜಂಘನು ಪತ್ನಿಯೊಡನೆ ಪುಂಡರೀಕಿಣಿಗೆ ಹೋಗಿ ರಾಜ್ಯವನ್ನು ನಿಷ್ಕಂಟಕಮಾಡಿ, ಮರಳಿ ತಮ್ಮೂರಿಗೆ ಬಂದು ಸುಖದಿಂದಿರುತ್ತಿದ್ದನು. ಹೀಗೆ ಅನೇಕ ಸಂವತ್ಸರಗಳು ಕಳೆದ ಮೇಲೆ, ಒಂದು ದಿವಸ ಆದಂಪತಿಗಳು ಮಲಗಿರುವ ಮನೆಯಲ್ಲಿ ಧೂಪದ ಹೊಗೆ ತುಂಬಿಕೊಂಡುದರಿಂದ ಉಸಿರಾಡುವುದಕ್ಕೆ ಮಾರ್ಗವಿಲ್ಲದೆ ಇಬ್ಬರೂ ಕಾಲವಶರಾದರು.

IV ನಾಲ್ಕನೆಯ ಜನ್ಮದಲ್ಲಿ—ಅವರು ಭೋಗಭೂಮಿಯಲ್ಲಿ ಅವತರಿಸಿದರು. ಅಲ್ಲಿಗೆ ಒಬ್ಬ ಚಾರಣನು ಬಂದು ಅವರಿಗೆ ಸಮ್ಯಗ್ದರ್ಶನ ಸ್ವರೂಪವನ್ನು ಬೋಧಿಸಿದನು. ಅವರು ಸಮ್ಯಗ್ದರ್ಶನದಲ್ಲಿ ನಿಂತು ಕ್ಷುತವಿಜೃಂಭಣವ್ಯಾಜದಿಂದ ಆಯುಷ್ಯಾವಸಾನದಲ್ಲಿ ಮೃತ್ಯುವಶರಾದರು.

V ಐದನೆಯ ಜನ್ಮದಲ್ಲಿ—ವಜ್ರಜಂಘನು ಶ್ರೀಪ್ರಭವಿಮಾನದಲ್ಲಿ ಶ್ರೀಧರನೆಂಬ ದೇವನಾಗಿ ಜನಿಸಿದನು. ಶ್ರೀಮತಿ ಸಮ್ಯಕ್ತ್ವಮಹಿಮೆ

ಮೆಯಿಂದ ಸ್ತ್ರೀತ್ವವನ್ನು ಬಿಟ್ಟು ಸ್ವಯಂಪ್ರಭನಾದಳು. ಕೆಲವು ಕಾಲದಲ್ಲಿ ಶ್ರೀಧರನು ದಿವದಿಂದ ಪರಿಚ್ಯುತನಾದನು.

VI ಆರನೆಯ ಜನ್ಮದಲ್ಲಿ—ಅವನು ಸುವಿಧಿಯೆಂಬ ಹೆಸರಿನಿಂದ ಸುಸೀಮಾನಗರಕ್ಕೆ ಅರಸಾಗಿ ಹುಟ್ಟಿದನು. ಶ್ರೀಮತಿಯಾಗಿದ್ದ ಸ್ವಯಂಪ್ರಭದೇವನು ದೇವಲೋಕದಿಂದಿಳಿದು ಬಂದು ಕೇಶವನೆಂಬ ಹೆಸರಿನಿಂದ ಅವನಿಗೆ ಪುತ್ರನಾಗಿ ಜನಿಸಿದನು. ಸುವಿಧಿ ಪಂಚಮಹಾವ್ರತಾದಿಗಳನ್ನು ಕೈಕೊಂಡು ಜೀವಿತಾವಸಾನದಲ್ಲಿ ಸಮಾಧಿವಿಧಿಯಿಂದ ಶರೀರಪರಿತ್ಯಾಗ ಮಾಡಿದನು

VII ಏಳನೆಯ ಜನ್ಮದಲ್ಲಿ—ಅವನು ಅಚ್ಯುತೇಂದ್ರನಾಗಿ ಅಚ್ಯುತೇಂದ್ರಕಲ್ಪದಲ್ಲಿ ಅವತರಿಸಿದನು. ಅಲ್ಲಿ ದಿವ್ಯಭೋಗಗಳನ್ನು ಆಸ್ವಾದಿಸಿ ಆಯುರವಸಾನದಲ್ಲಿ ಜಿನಪದಧ್ಯಾನಾಸಕ್ತನಾಗಿ ಅಲ್ಲಿಂದ ಪರಿಚ್ಯುತನಾದನು.

VIII ಎಂಟನೆಯ ಜನ್ಮದಲ್ಲಿ—ಅವನು ವಜ್ರನಾಭಿಯೆಂಬ ನಾಮದಿಂದ ಪ್ರತಿಬದ್ಧಪುಂಡರೀಕಿಣಿಯಲ್ಲಿ ಜನಿಸಿದನು. ವಯಸ್ಸಾದಮೇಲೆ ತನ್ನ ಮಗನಿಗೆ ರಾಜ್ಯವನ್ನು ಕೊಟ್ಟು ಪಂಚಮಹಾವ್ರತ ಪಂಚಸಮಿತಿ ಗುಪ್ತಿತ್ರಯಗಳನ್ನು ಆಚರಿಸಿ ಶರೀರಪರಿತ್ಯಾಗಮಾಡಿದನು.

IX ಒಂಬತ್ತನೆಯ ಜನ್ಮದಲ್ಲಿ—ಅವನು ಅಹಮಿಂದ್ರನಾಗಿ ಸರ್ವಾರ್ಥಸಿದ್ಧಿಯಲ್ಲಿ ಅವತರಿಸಿದನು.

X ಹತ್ತನೆಯ ಜನ್ಮದ ಕಥೆ—ಆಕಾಲದಲ್ಲಿ ಜಂಬೂದ್ವೀಪದಲ್ಲಿ ಹದಿನಾಲ್ಕನೆಯ ಮನುವಾದ ನಾಭಿರಾಜನು ಅಯೋಧ್ಯೆಯಲ್ಲಿ ಆಳುತ್ತಿದ್ದನು. ಮರುದೇವಿಯೆಂಬವಳು ಅವನ ಅಗ್ರಮಹಿಷಿಯಾಗಿದ್ದಳು. ಅವಳ ಉದರದಲ್ಲಿ ಪರಮನು ಅವತರಿಸುವನೆಂದು ಇಂದ್ರನು ತಿಳಿದು ಗರ್ಭಶೋಧನಾದಿವ್ಯಾಪಾರಗಳಿಗೆ ದೇವಸ್ತ್ರೀಯರನ್ನು ನಿಯಮಿಸಿದನು. ಗರ್ಭಶೋಧನೆಯಾದಮೇಲೆ ಮರುದೇವಿ ಶುಭಸ್ವಪ್ನವನ್ನು ಕಂಡಳು. ತತ್ಫಲದಿಂದ ಆಕೆ ಗರ್ಭವಾಗಿ ಸಕಾಲದಲ್ಲಿ ಪುತ್ರರತ್ನವನ್ನು ಪಡೆದಳು. ಈಶಿಶುವೇ ಪುರುದೇವನು. ಜನನವಾದ ಕೂಡಲೆ ಇಂದ್ರನು ಶಿಶುವನ್ನು ಎತ್ತಿಕೊಂಡು ಹೋಗಿ ಜನ್ಮಾಭಿಷೇಕವನ್ನು ನೆರವೇರಿಸಿ ಪುನಃ ತಂದಿಟ್ಟನು. ಆಜಿನಬಾ

ಲಕನು ಸುರರೊಡನೆ ಬಾಲಕ್ರೀಡೆಯಾಡಿ ಬಳೆದನು. ಪ್ರಾಪ್ತಯೌವನ ನಾದರೂ ಅವನಿಗೆ ರಾಜ್ಯಲಕ್ಷ್ಮಿಯಲ್ಲೂ ವಿವಾಹದಲ್ಲೂ ಅಭಿರುಚಿಯುಂಟಾಗಲಿಲ್ಲ. ಆದರೂ ತಂದೆ ನಾನಾವಿಧವಾಗಿ ಬುದ್ಧಿಹೇಳಿ ಅನುಮತಿಪಡಿಸಿ ಯಶಸ್ವತಿ, ಸುನಂದೆಯೆಂಬ ಕನ್ನಿಕೆಗಳನ್ನು ಮದುವೆಮಾಡಿದನು. ಕೆಲವು ಕಾಲಕ್ಕೆ ಯಶಸ್ವತಿ ಭರತನೆಂಬ ಮಗನನ್ನೂ ಆಬಳಿಕ ಬ್ರಾಹ್ಮಿ ಯೆಂಬ ಮಗಳನ್ನೂ ಪಡೆದಳು. ಹಾಗೆಯೇ ಸುನಂದೆಯೂ ಬಾಹುಬಲಿಯೆಂಬ ಪುತ್ರನನ್ನೂ ಸೌಂದರಿಯೆಂಬ ಪುತ್ರಿಯನ್ನೂ ಹೆತ್ತಳು. ಆ ಮಕ್ಕಳೆಲ್ಲರೂ ಬಳೆಯುತ್ತಿದ್ದರು. ಅವರಿಗೆಲ್ಲಾ ಪುರುದೇವನು ಲೋಕೋಪಕಾರಕವಾದ ವಿದ್ಯೆಗಳನ್ನು ಕಲಿಸಿ ತನ್ನ ಪ್ರಜೆಗಳಿಗೆ ಉಪಯುಕ್ತವಾದ ಅನೇಕ ವಿದ್ಯೆಗಳನ್ನು ಉಪದೇಶಿಸಿದನು. ಬಳಿಕ ತಾನು ಹಿಂದೆ ಪಡೆದ ಕ್ಷತ್ರಿಯವಣಿಕ್ಛೂದ್ರರೆಂಬ ಮೂರುವರ್ಣಕ್ಕೂ ಮುಂದೆ ಭರತನಿಂದುಂಟಾಗುವ ವಿಪ್ರವರ್ಣಕ್ಕೂ ಯಥೋಚಿತವೃತ್ತಿಗಳನ್ನು ತಿಳಿಸಬೇಕೆಂದು ಬಗೆದು ದ್ವಿಜವರ್ಣಕ್ಕೆ, ಅಧ್ಯಯನ ಅಧ್ಯಾಪನ ದಾನ ಪ್ರತಿಗ್ರಹ ಯಜನ ಯಾಜನವಿಶಿಷ್ಟವೃತ್ತಿಯನ್ನೂ, ಕ್ಷತ್ರಿಯ ಜಾತಿಗೆ, ಸತ್ಯ ತ್ಯಾಗ ಪ್ರಜಾಪಾಲನ ಶರಣಾಗತರಕ್ಷಣ ಪ್ರಹರಣಕ್ಷಮಾದಿಗುಣಾಚರಣವನ್ನೂ, ವಣಿಗ್ವಂಶಕ್ಕೆ, ಜಳಸ್ಥಳಯಾತ್ರಾದಿಗಳನ್ನೂ, ಶೂದ್ರಾನ್ವಯಕ್ಕೆ ವರ್ಣತ್ರಯ ಶುಶ್ರೂಷೆಯನ್ನೂ ಬೋಧಿಸಿದನು. ಆ ವೇಳೆಗೆ ಆತನ ಪರಿನಿಷ್ಕ್ರಮಣಕಲ್ಯಾಣವು ಸಮೀಪಿಸಿತು; ಆದುದರಿಂದ ರಾಜ್ಯವನ್ನು ತನ್ನ ಮಕ್ಕಳಿಗೆ ಕೊಟ್ಟು ಅಯೋಧ್ಯಾಪುರದ ಸಮೀಪದ ಸಿದ್ಧಾರ್ಥವನಕ್ಕೆ ಹೋಗಿ ಕೇಶವನ್ನು 'ಪರಿದು' ದೀಕ್ಷೆಯನ್ನು ಅಂಗೀಕರಿಸಿದನು. ಕೆಲವು ಕಾಲದಮೇಲೆ ಅಲ್ಲಿಂದ ಹೊರಟು ಧರ್ಮಕ್ಷೇತ್ರಗಳಲ್ಲಿ ವಿಹಾರಿಸುತ್ತ ರಜತಾಚಳಕ್ಕೆ ಹೋಗಿ ತಪಸ್ಸು ಮಾಡುತ್ತಿದ್ದನು.

ಇತ್ತ ಭರತನು ದಿಗ್ವಿಜಯಾರ್ಥವಾಗಿ ಹೋಗಿ ತನ್ನ ತಮ್ಮನಾದ ಬಾಹುಬಲಿಯೊಡನೆ ಯುದ್ಧಮಾಡಿದನು. ಅದನ್ನು ನೋಡಿ ಬಾಹುಬಲಿ—ರಾಜ್ಯವಿಮೋಹವು ದ..ರ್ವ್ಯಸನಕ್ಕೆ ಕಾರಣವೆಂದು ಬಗೆದು ವೈರಾಗ್ಯವನ್ನು ಹೊಂದಿ ಕೈಲಾಸಕ್ಕೆ ಹೋಗಿ ದೀಕ್ಷೆಯನ್ನು ಪಡೆದನು. ಭರ

ತನು ಪಟ್ಟಾಭಿಷಿಕ್ತನಾಗಿ ಅನೇಕ ಜಿನಧರ್ಮಗಳನ್ನು ಮಾಡುತ್ತ ರಾಜ್ಯವನ್ನು ಪಾಲಿಸುತ್ತಿದ್ದನು. ಹೀಗಿರುತ್ತಿರಲು ಅತ್ತ ವೃಷಭನಾಥನಿಗೆ ಚರಮಕಾಲವು ಸಮೀಪಿಸಿತು. ಆಮಹಾಪುರುಷನು ಮಾಘಮಾಸದ ಕೃಷ್ಣಚತುರ್ದಶಿಯಂದು ಅಭಿಜಿನ್ಮುಹೂರ್ತದಲ್ಲಿ ಮೋಕ್ಷಕ್ಕೆ ನಡೆದನು. ಕೂಡಲೆ ಭರತನೂ ದೀಕ್ಷೆಯನ್ನು ವಹಿಸಿದನು.

ಇದು ಪುರಾಣವಾದುದರಿಂದಲೂ 'ವ್ಯಾಸಸಮಾಗಮಾನ್ವಿತ' ವಾದುದರಿಂದಲೂ ಇದರಲ್ಲಿ ಕವಿಯ ಕಥಾಕೌಶಲಕ್ಕೂ ಕಲ್ಪನಾಶಕ್ತಿಗೂ ವಿಶೇಷ ಅವಕಾಶವಿಲ್ಲ. ಅಲ್ಲಲ್ಲಿ ಅಪ್ರಕೃತವಾಗಿಯೂ ನೀರಸವಾಗಿಯೂ ಇರುವ ಜನ್ಮಾಂತರಕಥಾಗಹನವು ತುಂಬಿರುವುದರಿಂದ ಇದ್ದ ರಸವೂ ಮರೆಯಾಗಿ ಹೋಗಿಗೆ. ಈ ಜನ್ಮಾಂತರ ಭಾಗವನ್ನು ಬಿಟ್ಟರೆ ಬಹುಶಃ ಗ್ರಂಥವು ನಾಲ್ಕರಲ್ಲಿ ಒಂದುಪಾಲು ಕಿರಿದಾಗುತ್ತದೆ. ಈ ಗ್ರಂಥದಲ್ಲಿ ಕವಿಯ ಅನ್ಯಾದೃಶವಾದ ಶಯ್ಯೆಯನ್ನೂ ವರ್ಣನಾಶಕ್ತಿಯನ್ನೂ ನೋಡಿ ಆನಂದಪಡಬಹುದು. ಇದರ ಬಂಧವು ಭಾರತದ ಬಂಧಕ್ಕಿಂತ ಲಲಿತವಾಗಿಯೂ ಮಧುರವಾಗಿಯೂ ಇದೆ.

ಈ ಗ್ರಂಥದ ವಿಷಯವಾಗಿ ರನ್ನನು "ಪೆಱವುಳಿಯುಳ್ಳುವಲ್ಲಿ
ಯೊಳವಾಗಮಭಾಷೆಗಳಲ್ಲಿಯುಳ್ಳುವಂ । ಪೆಱವುಳಿ ಕಾಣಲಾಗದೆನೆ ಪಂ
ಪನ ಕಬ್ಬದೊಳ್ । ನೆಱೆಯಪರಿಸ್ಫುಟಂ
ನೆಱೆಯೆ ತೀರ್ದುದು " ಎಂದೂ, 'ಉಪಮಾತೀತವೆನಿಪ್ಪಾ ।
ದಿಪುರಾಣ' ವೆಂದೂ, ಕವಿಯವಿಷಯವಾಗಿ "ಕವಿಜನದೊಳ್ ರತ್ನತ್ರಯ ।
ಪವಿತ್ರಮೆನೆ ನೆಗಳ್ದ ಪಂಪನುಂ ಪೊನ್ನಿಗನುಂ । ಕವಿರತ್ನನುಮೀಮೂವರ್ ।
ಕವಿಗಳ್ ಜಿನಸಮಯದೀಪಕರ್ ಪೆಱರೊಳರೇ" ಎಂದೂ ಹೇಳಿದ್ದಾನೆ.

ಈ ಗ್ರಂಥದಲ್ಲಿ—ಸ್ತ್ರೀವಿದ್ಯಾಭ್ಯಾಸ, ವರ್ಣಾಶ್ರಮಧರ್ಮ, ಕಾಪಿಲಸಿದ್ಧಾಂತೋತ್ಪತ್ತಿ, ಯೋಗಶಾಸ್ತ್ರೋತ್ಪತ್ತಿ, ವಿಪ್ರವರ್ಣೋತ್ಪತ್ತಿ ಇವೇ ಮೊದಲಾದವುಗಳ ವಿಷಯದಲ್ಲಿ ಹೇಳಿರುವ ಅಭಿಪ್ರಾಯಗಳು ನವೀನವಾಗಿಯೂ ವಿಜಾತೀಯವಾಗಿಯೂ ಇರುವದರಿಂದ ವಿಚಾರಾರ್ಹವಾಗಿವೆ.

# ಆದಿಪುರಾಣಂ.

## I. ಮಹಾಬಳ ಕುಮಾರೋದಯಂ.

ಕವಿ ಗ್ರಂಥಾವತಾರದಲ್ಲಿ [1] ಆದಿಬ್ರಹ್ಮನನ್ನು ಸ್ತುತಿಸಿದ್ದಾನೆ [2] ಬಳಿಕ ಸಿದ್ಧರನ್ನೂ, [3] ಆಚಾರ್ಯರನ್ನೂ, [4] ಉಪಾಧ್ಯಾಯರನ್ನೂ, [5] ಸರ್ವಸಾಧುಗಳನ್ನೂ, [6] ಅರ್ಹತ್ಸಿದ್ಧಾಚಾರ್ಯೋಪಾಧ್ಯಾಯ ಸರ್ವಸಾಧುಗಳನ್ನೂ, [7] ಚಕ್ರೇಶ್ವರಿಯನ್ನೂ, [8] ವೃಷಭಯಕ್ಷನನ್ನು, [9] ಸರಸ್ವತಿಯನ್ನೂ, [10] ಶ್ರುತಸ್ಕಂಧವನ್ನೂ ಸ್ತುತಿಸಿ, [11] ಸಮಂತಭದ್ರ, ಕವಿಪರಮೇಷ್ಠಿ, ಪೂಜ್ಯಪಾದರನ್ನೂ [12] ಗೃಧ್ರಪಿಂಛಾಚಾರ್ಯ, ಜಟಾಚಾರ್ಯ ಪ್ರಭೃತೀತ್ಯಾಚಾರ್ಯರನ್ನೂ [13] ಮಲಧಾರಿಸಿದ್ಧಾಂತಮುನಿಯನ್ನೂ ದೇವೇಂದ್ರಮುನಿಯನ್ನೂ ಜಯನಂದಮುನಿಯನ್ನೂ ಕ್ರಮವಾಗಿ ಸ್ತುತಿಸಿದ್ದಾನೆ. ಬಳಿಕ [14] ತಾನು ಕುಂಡಕುಂದಾನ್ವಯನಂದನವನಶುಕವೆಂದು ತನ್ನಲ್ಲಿ ಮುನಿಸಿವಹವು ಅನುಗ್ರಹವಮಾಡಬೇಕೆಂದು ಪ್ರಾರ್ಥಿಸಿ [15] ಜಿನರೂ ಗಣಧರರೂ ಮುನೀಂದ್ರರೂ ಮುನಿಗಳೂ ಭವ್ಯರಿಗೆ ಗುಣಗಳನ್ನು ದಯೆಯಿಂದ ಕೊಡಬೇಕೆಂದು ಆಶಿಸಿ [16] ಅಕಳಂಕದೇವನ ಪ್ರಮಾಣರತ್ನಪ್ರದೀಪರಶ್ಮಿಕಲಾಪವು ಜಗದಮಿಥ್ಯಾತ್ವತಮವನ್ನು ನಿರಾಕರಿಸಲೆಂದು ಪ್ರಾರ್ಥಿಸುತ್ತಾನೆ.

ಅನಂತರ [17—19] ಸತ್ಕೃತಿಯ ಗುಣಗಳನ್ನೂ ದುಷ್ಕೃತಿಯ ದೋಷಗಳನ್ನೂ ವಿವರಿಸಿ. [20] ಕಾವ್ಯರಹಸ್ಯವು ಕವಿಗಳಿಗಲ್ಲದೆ ಸಾಮಾನ್ಯನಿಗೆ ತಿಳಿಯದೆಂದು ಹೇಳಿ [21—22] ಭಾವಿಕರೂ ಕವಿತ್ವವಿಶೇಷಜ್ಞರೂ ಕೃತಿಯ ಗುಣವನ್ನು ಪರೀಕ್ಷಿಸಬಲ್ಲರೆಂದು ಭಾಷಿಸಿ, ಕುಕವಿಬಕಗಳು ದೋಷಾಮಿಷವನ್ನು ಬಯಸುವವೆಂದು ನಿಂದಿಸಿ [23] ಅವರ ಬಳಿಯಲ್ಲಿ ಸತ್ಕೃತಿಪಠನವು ಅರಣ್ಯರುದಿತವೆಂದು ಸೂಚಿಸಿ [24] ಶುಷ್ಕವೈಯಾಕರಣನಿಗೂ ಶುಷ್ಕತಾರ್ಕಿಕನಿಗೂ ಅತಿಚತುರಕವಿಜನೈಕವೇದ್ಯವಾದ ಕಾವ್ಯರಸವು ಆಗೋಚರವೆಂದು ತಿಳಿಸುತ್ತಾನೆ

ತರುವಾಯ [25] ದೇವೇಂದ್ರಮುನೀಂದ್ರನು ತನ್ನ ಗುರುವೆಂದೂ ಪುರುದೇವನು ಕಥಾನಾಯಕನೆಂದೂ ಕಥೆ ತದಾದಿಪುರುಷಜನ್ಮಕಥಾಬಂಧುರವೆಂದೂ ಹೇಳುತ್ತಾನೆ. ಇವನ ಕಾವ್ಯವು ಸುಕವಿಜನಶ್ಲಾಘ್ಯವಾದುದರಿಂದ ಇವನಿಗೆ [26] ಸುಕವಿಜನಮನೋಮಾನಸೋತ್ತಂಸಹಂಸನೆಂದೂ [27] ಇವನ ಕವಿತ್ವವು ಸಮುದ್ರದಂತೆ ನಿತ್ಯವೂ ನೂತನವೂ ಗಂಭೀರವೂ ಆದುದರಿಂದ ಇವನಿಗೆ ಕವಿತಾಗುಣಾರ್ಣವನೆಂದೂ, ಇವನು ಸಂಸಾರಸಾರವಾದ ಧರ್ಮವನ್ನು ವರ್ಣಿಸಿರುವುದರಿಂದ ಇವನಿಗೆ ಸಂಸಾರಸರೋದಯನೆಂದೂ [28] ಇವನ ವಾಗ್ವಿಲಾಸವೆ ಸರಸ್ವತಿಗೆ ಅಲಂಕೃತಿಪ್ರಾಯವಾಗಿರುವುದರಿಂದ ಇವನಿಗೆ ಸರಸ್ವತೀಮಣಿಹಾರನೆಂದೂ ಬಿರುದುಗಳನ್ನು ಕೊಟ್ಟು [39—32]

ಇವನ ಸೌಂದರ್ಯಾದಿಗಳನ್ನು ವರ್ಣಿಸಿ [30] ಇವನು ವತ್ಸಕುಲೋತ್ಪನ್ನನೆಂದೂ [33] ದುಂದುಭಿಸಂವತ್ಸರದಲ್ಲಿ ಜನಿಸಿದವನೆಂದೂ ಇವನ ಹೆಸರು ಪಂಪನೆಂದೂ ಇವನು ಜಿನಭಕ್ತನೆಂದೂ ಸುಗುಣಿಯೆಂದೂ ಈ ಕವಿಯನ್ನು ಶ್ಲಾಘಿಸಿ ಈ ಗ್ರಂಥವನ್ನು ಹೇಳೆಂಬದಾಗಿ ಪಂಡಿತರು ನಿಯಮಿಸಲು ತಾನು ಇದನ್ನು ಹೇಳುವುದಕ್ಕೆ ಅನುಮತಿಸಿದಂತೆ ತಿಳಿಸುತ್ತಾನೆ.

[35] ಹಿಂದೆ ಪುರುದೇವಾದಿಜಿನೇಂದ್ರರು ಗಣಧರರು ಇವರ ಪರಂಪರೆಯಿಂದ ವೀರಸೇನ ಜಿನಸೇನಾಚಾರ್ಯಪರ್ಯಂತವಾಗಿ ಬಂದ ಈ ಕಥೆ ಬಹುಗಂಭೀರವಾದುದು, ಅವರು ಜ್ಞಾನರ್ಧಿಸಂಪನ್ನರು, ಅವರಿಗೆ ಅದು ಸಾಧ್ಯವಾದುದು ತನಗೆ ಅಸಾಧ್ಯವೆಂದು ಸುಮ್ಮನಿರದೆ ಈ ಕಥಾಸಾಗರವನ್ನು ತಾನು ಈಜುವುದಕ್ಕೆ ಇಷ್ಟಪಟ್ಟುದು ಧಾರ್ಷ್ಟ್ಯವೆಂದು ನ್ಯೂನಾಹಂಕಾರಪರಿತ್ಯಾಗಮಾಡಿ [36] ಕವಿತೆಗೆ ಪೂಜೆಯೂ ಖ್ಯಾತಿಯೂ ಲಾಭವೂ ಫಲವೆಂದು ತಿಳಿಸಿ ಅವರಲ್ಲೂ ಈ ಕವಿತೆಯಿಂದ ತನಗೆ ಇಂದ್ರಪೂಜೆಯೂ ಭುವನಸ್ತುತವಾದ ಖ್ಯಾತಿಯೂ ಮುಕ್ತಿಯು ಲಾಭವೂ ಉಂಟಾಗುವುದರಿಂದ ತನಗೆ ಇತರರಿಂದ ಆಗಬೇಕಾದ ಪ್ರಯೋಜನವು ಏನೂ ಇಲ್ಲವೆಂದು ತನ್ನ ನಿಸ್ಪೃಹತೆಯನ್ನು ಸೂಚಿಸಿ [37] ಇಂದ್ರನರೇಂದ್ರವಂದಿತನಾದ ಅರ್ಹನನ್ನು ಒಂದೊಂದುವೇಳೆ ಚಿಂತಿಸಿದವನ ಪುಣ್ಯಕ್ಕೇ ಎಣೆಯಿಲ್ಲದಿರುವಲ್ಲಿ ಕಾವ್ಯಗಳಲ್ಲಿ ಅರ್ಹನನ್ನೇ ವರ್ಣಿಸುವವನ ಕರ್ಮನಿರ್ಜರೆಗೆ ಪಾರವೇ ಇಲ್ಲವೆಂದು ತನ್ನ ಧನ್ಯತೆಯನ್ನು ಹೇಳಿಕೊಂಡು [38] ಈಯಾದಿಪುರಾಣದಲ್ಲಿ ಸುಕವಿಗಳಿಗೆ ಪ್ರಮೋದಾವಹವಾಗುವಂತೆ ಕಾವ್ಯಧರ್ಮವನ್ನೂ ಭವ್ಯಲೋಕಕ್ಕೆ ಆನಂದಕರವಾಗುವಂತೆ ಜೈನಧರ್ಮವನ್ನೂ ವ್ಯಾವರ್ಣಿಸುವುದಾಗಿ ಪ್ರತಿಜ್ಞೆಮಾಡಿ ಅವತರಣಿಕೆಯನ್ನು ಪರಿಪೂರ್ಣಮಾಡಿ ಮುಂದೆ ಕಥೆಯನ್ನು ಉಪಕ್ರಮಿಸುತ್ತಾನೆ.

---

[39] ಶ್ರುತಸ್ಕಂಧದಲ್ಲಿ ನಾಲ್ಕು ಅನುಯೋಗಗಳುಂಟು ಅವುಗಳಲ್ಲಿ ಪ್ರಥಮಾನುಯೋಗದಲ್ಲಿ ಈ ಕಥೆ ದೊರೆಯುತ್ತದೆ. [40—41] ಇದನ್ನು ಮೊದಲು ವೃಷಭಜಿನಸನ್ನಿಧಿಯಲ್ಲಿ ವೃಷಭಸೇನಗಣಾಗ್ರಣಿ ಭರತನಿಗೆ ಹೇಳಿದನು. ಅದನ್ನೇ ವಿಪುಳಾದ್ರಿಯಲ್ಲಿ ವರ್ಧಮಾನಜಿನಸನ್ನಿಧಿಯಲ್ಲಿ ಗೌತಮನು ಮಗಧನಾಯಕನಿಗೆ ವಿವರಿಸಿದನು. [44] ಅದೇ ಕಥೆಯೇ ಈಗ್ರಂಥದಲ್ಲಿ ವಿನ್ಯಸಲ್ಪಟ್ಟಿದೆ.

[42 ಗ] ಪುರಾಣಕ್ಕೆ ಲೋಕಾಕಾರಕಥನ, ದೇಶನಿವೇಶೋಪದೇಶ, ನಗರಸಂಪತ್ಪರಿವರ್ಣನ, ರಾಜ್ಯರಮಣೀಯತಾಖ್ಯಾನ, ತೀರ್ಥಮಹಿಮಾಸಮರ್ಥನ, ಚತುರ್ಗತಿಸ್ವರೂಪನಿರೂಪಣ, ತಪೋದಾನವಿಧಾನವರ್ಣನ, ತತ್ಫಳಪ್ರಾಪ್ತಿಪ್ರಕಟನವೆಂದು ಎಂಟಂಗಗಳುಂಟು ಇವುಗಳಲ್ಲಿ ಮೊದಲನೆಯದಾದ ಲೋಕವು [43—44] ಅನಂತವಾಗಿ ಇರುವ ಗಗನಮಧ್ಯದಲ್ಲಿ ಅನೇಕ ಜೀವನಿವಹನಿಬಿಡಾಭ್ಯಂತರವಾಗಿ [44] ಅನಾದಿಯಾಗಿ ಅಕೃತ್ರಿಮವಾಗಿ ಅನಿಧನವಾಗಿ ಮರುತ್ತ್ರಯಸಂವೇಷ್ಟಿತವಾಗಿ ಹದಿನಾಲ್ಕು

ರಜ್ಜು ಎತ್ತರವಾಗಿದೆ. ಅದರ ಆಕಾರವು ಕಟಿತಟವಿನ್ಯಸ್ತಹಸ್ತನಾದ ನಟನಂತೆಯೂ [47] ವೇತ್ರಾಸನಝಲ್ಲರೀಮೃದಂಗಗಳಂತೆಯೂ ಇದೆ.

[46] ಅದರಲ್ಲಿ ಅಧೋಲೋಕ, ತಿರ್ಯಗ್ಲೋಕ, ಊರ್ಧ್ವಲೋಕಗಳೆಂಬ ಮೂರುಭೇದಗಳುಂಟು. [47 ಗ-48] ಅವುಗಳಲ್ಲಿ ಮಧ್ಯಮವಾದ ತಿರ್ಯಗ್ಲೋಕವು ಏಕರಜ್ಜುಪ್ರಮಾಣ ವಿಸ್ತಾರವುಳ್ಳುದಾಗಿ ಸ್ವಯಂಭೂರಮಣವೆಂಬ ಸಮುದ್ರದವರೆಗೂ ವ್ಯಾಪಿಸಿರುತ್ತದೆ [48 ಗ] ಆತಿರ್ಯಗ್ಲೋಕದ ನಟ್ಟನಡುವೆ ಜಂಬೂದ್ವೀಪವು [49] ವೃತ್ತಾಕಾರವಾಗಿ ಲವಣಜಲಧಿಪರಿವೃತವಾಗಿ ಇದೆ [49ಗ-50] ಆ ದ್ವೀಪದ ಮಧ್ಯ ಪ್ರದೇಶದಲ್ಲಿ ಮಂದರಪರ್ವತವು ಪ್ರಕಾಶಿಸುತ್ತಿರುವುದು [50ಗ] ಆ ಪರ್ವತದ ಪೂರ್ವಾಪರದಿಗ್ಭಾಗಗಳಲ್ಲಿ ವಿದೇಹವೆಂಬ ದೇಶಗಳು ಕಂಗೊಳಿಸುತ್ತವೆ. [51-53] ವಿದೇಹವರ್ಣನೆ. ಅವುಗಳಲ್ಲಿ ಪಶ್ಚಿಮ ವಿದೇಹಗಳಲ್ಲಿ [ 54-55 ] ಸೀತೋನದಿ ಪ್ರವಹಿಸುತ್ತಿದೆ. [55ಗ] ಆ ನದಿಯ ದಕ್ಷಿಣೋತ್ತರಭಾಗಗಳಲ್ಲಿ ಎಂಟು ನಾಡುಗಳಿವೆ. [56] ಉತ್ತರ ಭಾಗದ ದೇಶಗಳಲ್ಲಿ ಏಳನೆಯದಾದ ಗಂಧಿಳದೇಶವು ಸೀತೋನದಿಕ್ಕೆ ದಕ್ಷಿಣದಲ್ಲೂ ವಕ್ಷಾರಾದ್ರಿಗೆ ಪಶ್ಚಿಮದಲ್ಲೂ ಒಪ್ಪುತ್ತಿದೆ [56—62] ಗಂಧಿಳವಿಷಯಾದಿವರ್ಣನೆ. [62ಗ-63] ಆ ದೇಶದ ಮಧ್ಯದಲ್ಲಿ ವಿಜಯಾರ್ಧವೆಂಬ ಶೈಲವಿದೆ [63—69] ಶೈಲವರ್ಣನೆ [70] ಅದರ ತಪ್ಪಲಲ್ಲಿ ಎರಡು ವಿದ್ಯಾಧರಶ್ರೇಣಿಗಳಿವೆ. [79ಗ—71] ಅವುಗಳಲ್ಲಿ ಉತ್ತರಶ್ರೇಣಿಯಲ್ಲಿ ಅಳಕಾಪುರವೆಂಬ ಪತ್ತನವಿತ್ತು. [71ಗ] ಅದನ್ನು ಅತಿಬಳನೆಂಬ ಖಚರಪತಿ ಆಳುತ್ತಿದ್ದನು ಆತನಿಗೆ ಮನೋಹರಿಯೆಂಬ ಪತ್ನಿಯಿದ್ದಳು. [73.] ಅವಳ ಗರ್ಭದಲ್ಲಿ ಮಹಾಬಳನೆಂಬೊಬ್ಬ ಪುತ್ರನು ಜನಿಸಿದನು. ಆತನು [74—75] ಪ್ರಾಪ್ತವಯಸ್ಕನಾಗಿ ಯುವರಾಜಪದವಿಗೆ ಯೋಗ್ಯನಾಗಲು ಆತನಿಗೆ ಅತಿಬಳನು [76] ಯುವರಾಜಪದವಿಯನ್ನು ಕೊಟ್ಟು [77—78] ತಾನು ಅಧಿರಾಜಪದವಿಯಲ್ಲಿದ್ದುಕೊಂಡು ರಾಜ್ಯಭಾರವನ್ನು ವಹಿಸಿದ್ದನು. ಹೀಗೆ ಕೆಲವು ಕಾಲಕಳೆಯಲು [79] ಅತಿಬಳನಿಗೆ ಕೆನ್ನೆಯಲ್ಲಿ ನರೆ ಕಂಡಿತು. [79ಗ] ಅದನ್ನು ನೋಡಿ ಅವನು ವೈರಾಗ್ಯಪರನಾಗಿ [80] ತನ್ನ ಮಗನಿಗೆ ರಾಜ್ಯವನ್ನು ಒಪ್ಪಿಸಿ [80ಗ] ಗುಣಧರ ಕೇವಳಿಗಳ ಪಾದಪದ್ಮದಲ್ಲಿ [8] ತಪಸ್ಸನ್ನು ಅಂಗೀಕರಿಸಿದನು [81ಗ] ಮಹಾಬಳನು ಸಿಂಹಾಸನಾರೂಢನಾಗಿ ಚತುರುಪಧಾವಿಶುದ್ಧರಾದ [82—84] ಸ್ವಯಂಬುದ್ಧ ಮಹಾಮತಿ ಸಂಭಿನ್ನಮತಿ ಶತಮತಿಗಳೆಂಬ ನಾಲ್ವರು ಅಮಾತ್ಯರಲ್ಲಿ ರಾಜ್ಯಭಾರವನ್ನು ವಹಿಸಿ ಸುಖದಿಂದಿರುತ್ತಿದ್ದನು.

---

## ಲಲಿತಾಂಗದೇವವರ್ಣನಂ.

ಹೀಗಿರಲು ಒಂದಾನೊಂದುಕಾಲದಲ್ಲಿ [1] ಮಹಾಬಳನು [2] ತನ್ನ ವರ್ಷವರ್ಧನದಿನದಲ್ಲಿ [2ಗ] ಒಡ್ಡೋಲಗದಲ್ಲಿ ಸಿಂಹಾಸನಾಸೀನನಾಗಿದ್ದನು (2ಗ—5) ಆಸ್ಥಾನವ

ಣಿಗನೆ. [5ಗ] ಆ ಕಾಲದಲ್ಲಿ ಸ್ವಯಂಬುದ್ಧನೆಂಬ ಮಂತ್ರಿ ಸದ್ಧರ್ಮೋಪದೇಶಲಬ್ಧಾವಸರನಾಗಿ [6] ಎಲೈ ಮಹಾರಾಜನೆ ನಿನ್ನ ವಿದ್ಯಾಧರಲಕ್ಷ್ಮಿ ಧರ್ಮಜನಿತವಾಗಿದುದು. [7] ಧರ್ಮವೇ ಎಲ್ಲಾ ಸಂಪತ್ತುಗಳಿಗೂ ಕಾರಣವು [7ಗ] ಎಂದು ಧರ್ಮಪ್ರಭಾವವನ್ನೂ ತತ್ಫಲಗಳನ್ನೂ ತಿಳಿಸಿದನು. ಆಗ ಮಹಾಮತಿ, ಸಂಭಿನ್ನಮತಿ, ಶತಮತಿಗಳೆಂಬ ಮಿಕ್ಕ ಮಂತ್ರಿಗಳು ಲೋಕಾಯತಿಕ, ಯೋಗಾಚಾರ, ಮಾಧ್ಯಮಿಕ ಮತಗಳನ್ನವಲಂಬಿಸಿ (8) ದೇಹದಲ್ಲಿ ಜೀವವೊಂದಿದೆಯಂತೆ, ಅದು ಪುಣ್ಯಪಾಪಗಳನ್ನು ಕೂಡಿಡುವುದಂತೆ, ಬೇರೆ ದೇಹದಲ್ಲಿ ಅದನ್ನು ಅನುಭವಿಸುವುದಂತೆ, ಇದೆಲ್ಲವೂ ಬರಿಯ ಸುಳ್ಳು [9] ತಲೆಗೋಳಿಸಿಕೊಂಡು ಬೆತ್ತಲೆ ನಿಂತು ಸ್ವರ್ಗಸುಖವನ್ನು ಆಸ್ವಾದಿಸುವೆವೆಂಬ ಹುಚ್ಚರ ಮಾತನ್ನು ನೀನು ನಂಬಬಹುದೆ? ಜೀವವಿರುವವರೆಗೂ ಸುಖವಾಗಿರಬೇಕು, ಮುಂದಿನ ಜನ್ಮವನ್ನು ಕಂಡವರಾರು? [9 ಗ] ಎಂದು ಹೇಳಿ ತಮ್ಮ ತಮ್ಮ ಮತಗಳನ್ನು ಉಪನ್ಯಾಸಮಾಡುತ್ತಾರೆ.

[1] ಬೃಹಸ್ಪತಿಮತವೆಂಬ ಚಾರ್ವಾಕಮತೋಪನ್ಯಾಸವನ್ನು ಮಹಾಮತಿ ಮಾಡುತ್ತಾನೆ — ಚೈತನ್ಯವೆಂಬುದು ಪಂಚಭೂತಗಳ ಪರಸ್ಪರಸಂಯೋಗವಿಶೇಷದಿಂದ ಹುಟ್ಟುವುದು ಆದುದರಿಂದ ಭೂತಾತಿರಿಕ್ತವಾಗಿಯೂ ನಿತ್ಯವಾಗಿಯೂ ಇರುವ ಒಂದುಪದಾರ್ಥವಿಲ್ಲ ಹೇಗೆ ವೀಣಾಧ್ವನಿಯೂ-ಮದಶಕ್ತಿಯೂ-ಅಲಾಬುತಂತುಸಂಯೋಗದಿಂದಲೂ ಕಿಣ್ವಾದಿಪದಾರ್ಥಸಂಯೋಗದಿಂದಲೂ ಉಂಟಾಗುವುವೋ ಅದೇ ಪ್ರಕಾರ ಆತ್ಮವೆಂಬ ಚೈತನ್ಯವು ಉಂಟಾಗುತ್ತದೆ ಅದು ಉತ್ಪತ್ತಿ ವಿನಾಶಶಾಲಿಯಾಗಿರುವುದರಿಂದ ಸ್ಥಿರವಾದ ಆತ್ಮವೆಂಬುದು ಇಲ್ಲವೆಯೆಂಬ ಅಭಿಪ್ರಾಯದಿಂದ ಪರಲೋಕಾದಿಸಾಧನವಾದ ವ್ಯಾಪಾರಗಳನ್ನು ಮಾಡುವುದು ನಿರರ್ಥಕವು.

[2] ಬೌದ್ಧವಿಶೇಷವಾದ ಯೋಗಾಚಾರಮತವನ್ನು ಸಂಭಿನ್ನಮತಿ ಉಪನ್ಯಸಿಸುತ್ತಾನೆ — ಕ್ಷಣಿಕವಾದ ವಿಜ್ಞಾನಗಳೇ ಸಂತಾನರೂಪವಾಗಿ ಆತ್ಮವೆಂಬ ವ್ಯವಹಾರವಿಷಯವಾಗುವುವು ನಿರನ್ವಯವಿನಾಶಗಳಾದ ಆ ವಿಜ್ಞಾನಕ್ಷಣಗಳೇ ಜ್ಞಾನಜ್ಞೇಯಜ್ಞಾತೃರೂಪವಾಗಿ ಭ್ರಾಂತರಿಗೆ ಕಾಣಲ್ಪಡುವುವು. ಶೀಘ್ರವಾಗಿ ಉತ್ಪತ್ತಿವಿನಾಶಶಾಲಿಗಳಾದುದರಿಂದ ಸಂತಾನರೂಪವಾಗಿಯೂ ಕಾಣಲ್ಪಡುವುವು ಸೋಯಮೆಂಬ ಪ್ರತ್ಯಭಿಜ್ಞೆ ನಖ ಕೇಶ ದೀಪಜ್ವಾಲಾದಿಗಳಂತೆ ಭ್ರಾಂತಿಸಿದ್ಧವು; ಆದುದರಿಂದ ಪರಲೋಕಾಪೇಕ್ಷಿಗಳು ಭ್ರಾಂತಶಿರೋಮಣಿಗಳು.

[3] ಬೌದ್ಧಶಿರೋಮಣಿಯಾದ ಮಾಧ್ಯಮಿಕಮತವನ್ನು ಶತಮತಿ ಉಪನ್ಯಾಸಮಾಡುತ್ತಾನೆ-ಆಂತರಪದಾರ್ಥಗಳು ಬಾಹ್ಯಪದಾರ್ಥಗಳು ಯಾವುವೂ ಸತ್ಯವಾಗಿಲ್ಲ, ಸಮಸ್ತವೂ ಮಿಥ್ಯಾಭೂತವಾದುವು, ವ್ಯವಹಾರಾದಿಗಳು, ಸ್ವಾಪ್ನಿಕಪದಾರ್ಥವಿಲ್ಲದೆಯೆ ಸ್ವಾಪ್ನಿಕವ್ಯವಹಾರದೋಪಾದಿಯಲ್ಲಿಯೂ ಮರುಮರೀಚಿಕಾಪದಾರ್ಥದೋಪಾದಿಯಲ್ಲಿಯೂ ಐಂದ್ರಜಾಲಿಕಪದಾರ್ಥದೋಪಾದಿಯಲ್ಲಿಯೂ ಇರುವುವು. ಆದುದರಿಂದ ಜೀವನೆಂಬುದಿಲ್ಲ, ಪರ

ಲೋಕವಿಲ್ಲ, ಪುಣ್ಯವಿಲ್ಲ, ಪಾಪವಿಲ್ಲ, ಇದಕ್ಕಾಗಿ ಮಾಡುವ ತಪೋದಾನಾದಿಪ್ರಯತ್ನಗಳು ವೃಥಾಕ್ಲೇಶಮಾತ್ರಫಲಪ್ರದಗಳು.

ಈ ಮತತ್ರಯವನ್ನು ಯಥಾಕ್ರಮವಾಗಿ ಖಂಡಿಸುತ್ತಾನೆ ಸ್ವಯಂಬುದ್ಧನು.

[1] ಚೈತನ್ಯವು ಭೌತಿಕವಾಗುವ ಪಕ್ಷದಲ್ಲಿ ಬಾಲ್ಯಾದಿವಿರುದ್ಧಧರ್ಮಗಳನ್ನು ಚೈತನ್ಯದಲ್ಲಿ ಸ್ವೀಕಾರಮಾಡಬೇಕಾಗುವುದಾದುದರಿಂದ ಬಾಲವೃದ್ಧವ್ಯವಹಾರವಿಲ್ಲದೆ ಹೋಗಬೇಕಾಗುವುದು. ನಿನ್ನ ಮತದಲ್ಲಿ ಆಕಾಶವಿಲ್ಲದೆಯಿರುವುದರಿಂದ ದೇಶಭೇದವಿಲ್ಲ; ಆದುದರಿಂದ ಜೀವಭೇದಸಿದ್ಧಿಸಲಾರದು ಕಿಣ್ವಾದಿಮದಶಕ್ತಿ ದೃಷ್ಟಾಂತದಿಂದ ಕಾರಣಾಪೇಕ್ಷಯಾ ಅತಿರಿಕ್ತಕಾರ್ಯಸಿದ್ಧಿಸಬೇಕಾಗುವುದರಿಂದಲೂ ಕಾರಣಗುಣವು ಕಾರ್ಯವಾದ ಚೈತನ್ಯದಲ್ಲಿ ಕಾಣಲ್ಪಡದೆಯಿರುವುದರಿಂದಲೂ ಶರೀರಕಾರ್ಶ್ಯವೃದ್ಧಿಗಳಿಂದ ಚೈತನ್ಯಕಾರ್ಶ್ಯವೃದ್ಧಿಗಳುಂಟಾಗಬೇಕಾಗುವುದರಿಂದಲೂ ಗಜಾದಿಶರೀರಪ್ರಮಾಣಾನುಗುಣವಾಗಿ ಚೈತನ್ಯಪ್ರಮಾಣವು ಸಿದ್ಧಿಸುವುದರಿಂದಲೂ ತನ್ನ ಶರೀರವನ್ನು ತಾನೇ ಕೆಡಿಸಿಕೊಳ್ಳುವುದು ಅಯುಕ್ತವಾಗಬೇಕಾಗಿರುವದರಿಂದಲೂ ಈ ಮತವು ಅತ್ಯಂತವಿರುದ್ಧವು.

[2] ವಿಜ್ಞಾನಮಾತ್ರವಾದವೂ ಅಯುಕ್ತವೇ. ಹೇಗೆಂದರೆ—ಸರ್ವವೂ ವಿಜ್ಞಾನವೆಂಬ ಸಾಧ್ಯವನ್ನು ವಿಜ್ಞಾನಮಾತ್ರದಿಂದ ಸಾಧಿಸುವೆಯೋ ವಾಕ್ಯದಿಂದ ಸಾಧಿಸುವೆಯೊ ? ಮೊದಲನೆಯ ಪಕ್ಷದಲ್ಲಿ ಸಾಧ್ಯಹೇತುಗಳಿಗೆ ಭೇದವಿಲ್ಲದೆ ಇರುವುದರಿಂದ ಸಿದ್ಧಿಸಲಾರದು. ಎರಡನೆಯಪಕ್ಷದಲ್ಲಿ ಆ ವಾಕ್ಯವು ಅರ್ಥವುಳ್ಳುದೋ ? ಅಲ್ಲವೋ ? ದ್ವಿತೀಯಪಕ್ಷದಲ್ಲಿ ನಿಷ್ಪ್ರಯೋಜನವೇ ದೋಷವು. ಪ್ರಥಮಪಕ್ಷದಲ್ಲಿ ವಿಜ್ಞಾನವೆಂಬ ಅರ್ಥವುಳ್ಳದ್ದೋ? ಬೇರೆ ಅರ್ಥವುಳ್ಳದ್ದೋ? ಒಂದನೆಯಪಕ್ಷದಲ್ಲಿ ಸಾಧ್ಯವಿಶೇಷವೆಂಬ ಮೊದಲು ಹೇಳಿದ ದೋಷವುಂಟಾಗುವುದು. ಎರಡನೆಯ ಪಕ್ಷದಲ್ಲಿ ಬಾಹ್ಯಾರ್ಥಸಿದ್ಧಿಸುವುದಾದುದರಿಂದ ನಿನ್ನ ಮತವಿರೋಧವು ಮತ್ತು ವಿಜ್ಞಾನವು–ಮತ್ತೊಂದುವಿಜ್ಞಾನವನ್ನು ವಿಷಯೀಕರಿಸುತ್ತದೆಯೋ ? ಇಲ್ಲವೋ–? ಮೊದಲನೆಯ ಪಕ್ಷದಲ್ಲಿ ಸರ್ವಪ್ರತ್ಯಯವೂ ನಿರ್ವಿಷಯಕವೆಂಬ ನಿನ್ನ ಮತಹಾನಿ, ಬಾಹ್ಯಾರ್ಥಸಿದ್ಧಿ. ಎರಡನೆಯದರಲ್ಲಿ ಸಂತಾನಾಂತರಭಂಗ, ಅನುಮಾನದಿಂದ ಸಂತಾನಾಂತರಸಿದ್ಧಿಯಾಗುವದರಲ್ಲಿ ಬಾಹ್ಯಾರ್ಥವೂ ಸಿದ್ಧಿಸುವದು, ಆದುದರಿಂದ ಈ ಮತವು ಬಹಳ ಅಯುಕ್ತವು.

[3] ಸರ್ವಶೂನ್ಯವಾದಿಮತಧ್ವಂಸ. ಹೇಗೆಂದರೆ .— ಸರ್ವವೂ ಶೂನ್ಯವೆಂಬ ನಿನ್ನ ಮಾತೂ ಅದರಿಂದುಂಟಾಗುವ ಜ್ಞಾನವೂ ನಿರ್ವಿಷಯಕವೆ ? ಸವಿಷಯಕವೆ ? ಪ್ರಥಮಪಕ್ಷದಲ್ಲಿ ನಿನ್ನಿಷ್ಟ ಸಿದ್ಧಿಸುವುದಿಲ್ಲ, ದ್ವಿತೀಯಪಕ್ಷದಲ್ಲಿ ನಿನ್ನ ಮತಭಂಗವಾಗುವುದು, ಆದುದರಿಂದ ನಿನ್ನ ಪ್ರತ್ಯಯವಾಕ್ಯಗಳ ಹಾಗೆ ಬಾಹ್ಯಾಭ್ಯಂತರಸಕಲಪದಾರ್ಥವೂ ಸಿದ್ಧಿಸುವುದು.

ಈಪ್ರಕಾರ ಮತತ್ರಯವನ್ನೂ ನಿರಾಕರಿಸಿ ನಿತ್ಯನಾಗಿಯೂ ಪುಣ್ಯಪಾಪಗಳ ಫಲವನ್ನು ಅನುಭವಿಸುವವನಾಗಿಯೂ ಸೂಕ್ಷ್ಮನಾಗಿಯೂ ಜ್ಞಾನಾನಂದಾದಿಗುಣವುಳ್ಳವನಾ

ಗಿಯೂ ಸ್ವಸ್ವದೇಹಾನುಗುಣಪ್ರಮಾಣವುಳ್ಳವನಾಗಿಯೂ ಸಕಲಕರ್ಮನಿರ್ಮೂಲನಕರನಾಗಿಯೂ ತ್ರಿಲೋಕಶಿಖರಿಶೇಖರನಾಗಿಯೂ ಇರುವ ಜೀವನೆಂಬವನುಂಟೆಂದು ಸ್ಥಾಪಿಸಿ ಜನರನ್ನು ಸಂತೋಷಪಡಿಸಿದನು.

[11] ಮತ್ತೂ ಅವರಿಗೆ ತಿಳಿಸಬೇಕೆಂದು ನೃಪವಂಶಸಂಬಂಧಿಗಳಾದ ದೃಷ್ಟಶ್ರುತಾನುಭೂತಕಥೆಗಳನ್ನು ಹೇಳತೊಡಗಿದನು.

‘ಈತನ ವಂಶದಲ್ಲಿ ಅರವಿಂದನೆಂಬ ಅಂಬರಚರನು ತನ್ನ ಪತ್ನಿಯಾದ ವಿಜಯಿಯೊಡನೆಯೂ ಹರಿಶ್ಚಂದ್ರ ಕುರವಿಂದರೆಂಬ ತನ್ನ ಮಕ್ಕಳೊಡನೆಯೂ ಚಿರಕಾಲ ಖೇಚರವಿಭವವನ್ನು ಅನುಭವಿಸುತ್ತಿದ್ದನು. ಕಡೆಗೆ ಅವನು ಬಹ್ವಾರಂಭ ರೌದ್ರಧ್ಯಾನದಿಂದ ನರಕಾಯುಷ್ಯವನ್ನು ಉಪಾರ್ಜಿಸಿ ಮರಣಸಮಯದಲ್ಲಿ [12] ದಾಹಜ್ವರಸಂತಪ್ತನಾಗಿ [13–14] ಆವವಿಧವಾದ ಶೀತಳಕ್ರಿಯೆಯಿಂದಲೂ ತಾಪಶಾಂತಿಯನ್ನು ಪಡೆಯದೆ [14 ಗ] ಹರಿಶ್ಚಂದ್ರನನ್ನು ಕರೆದು ತನ್ನನ್ನು ಗಗನಗಾಮಿನಿವಿದ್ಯೆಯಿಂದ ಉತ್ತರಕುರುಗೆ ಕರೆದುಕೊಂಡು ಹೋಗಿ ಅಲ್ಲಿ ನಂದವನದಲ್ಲಿ ಬಿಡುವಂತೆ ಹೇಳಿದನು. ಆಗಗನಗಾಮಿನಿವಿದ್ಯೆ ನರಕಾಯುಷ್ಯನನ್ನು ಕರೆದುಕೊಂಡು ಹೋಗಲಾರೆನೆಂದು ಆತನ ಆಜ್ಞೆಯನ್ನು ಉಲ್ಲಂಘಿಸಿತು. ಹೀಗಿರಲು ಒಂದುದಿವಸ ಗೃಹಕಪೋತಗಳು ಕೋಪದಿಂದ ಒಂದನ್ನೊಂದು ಕಡಿದಾಡುತ್ತಿದ್ದುವು. ಆಕಾಲದಲ್ಲಿ ಅವುಗಳ ದೇಹದಿಂದ ರಕ್ತದ ಹನಿಗಳು ಹಾರಿ ಅರವಿಂದನ ದೇಹದಲ್ಲಿ ಬಿದ್ದುವು. ಆ ರಕ್ತಬಿಂದುಗಳಿಂದ ಅವನ ತಾಪವು ಸ್ವಲ್ಪಮಟ್ಟಿಗೆ ಆರಿತು. ಕೂಡಲೆ ಅವನು ಮಗನನ್ನು ಕರೆದು ತನಗೆ ಒಂದು ರಕ್ತಜಲಸರೋವರವನ್ನು ನಿರ್ಮಿಸಿಕೊಡುವಂತೆ ಆಜ್ಞಾಪಿಸಿದನು. ಮಗನು ಅನಿಷ್ಟಾಂಶಕರ್ಮಕ್ಕೆ ಅಂಜಿದರೂ ತಂದೆಯ ಮಾತನ್ನು ಮೀರಲಾರದೆ ಲಾಕ್ಷಾರಸಾದಿಗಳಿಂದ ಕೃತಕರುಧಿರವನ್ನು ಮಾಡಿ ಕೊಳದಲ್ಲಿ ತುಂಬಿಟ್ಟನು. ಅರವಿಂದನು ಸಂತುಷ್ಟನಾಗಿ ಆಕೊಳವನ್ನು ಹೊಕ್ಕು ಓಲಾಡಿ ಮುಕ್ಕುಳಿಸಿ ನೋಡಿ ಕೃತಕರಕ್ತವೆಂದು ತಿಳಿದು ಮಗನಲ್ಲಿ ಕೋಪವನ್ನು ತಾಳಿ ಅವನನ್ನು ಕೊಂದುಹಾಕಬೇಕೆಂದು ಕೈಯ ಕತ್ತಿಯೊಡನೆ ಪಾವಟಿಗೆಗಳನ್ನು ಹತ್ತಿ ಬಂದನು. ಹಾಗೆ ಬರುವಾಗ ಜಾರಿಬಿದ್ದು ಕಯ್ಯಕತ್ತಿ ಎದೆಯಲ್ಲಿ ನಟ್ಟು ಸತ್ತುಹೋದನು. ಇದನ್ನು ಎಲ್ಲರೂ ಕೇಳಿರಬಹುದು.

ಮತ್ತು ಈತನ ವಂಶದಲ್ಲಿ ದಂಡಕನೆಂಬೊಬ್ಬನು ಚಿರಕಾಲ ರಾಜ್ಯವಾಳಿ [15] ಲೋಭದಿಂದ ಸತ್ತು ಅಜಗರನಾಗಿ ಹುಟ್ಟಿ ತಾನು ಹಿಂದೆ ಕೂಡಿಟ್ಟಿದ್ದ ಭಂಡಾರವನ್ನು ಕಾವಿದ್ದು ತನ್ನ ಪೂರ್ವಜನ್ಮದ ಪುತ್ರನನ್ನು ಕಂಡು ಜಾತಿಸ್ಮರನಾಗಿ ಅವನನ್ನು ಮಾತ್ರ ಭಂಡಾರದೊಳಗೆ ಬಿಡುತ್ತಿದ್ದನು. ಹೀಗಿರಲು ಮಗನು ರತಿಚಾರಣರೆಂಬವಧಿಜ್ಞಾನಿಗಳನಲ್ಲಿ ಅಜಗರವೃತ್ತಾಂತವನ್ನು ಕೇಳಿ ಅದು ತನ್ನ ತಂದೆಯೆಂದು ತಿಳಿದು ಅವನ

ಬಳಿಗೆ ಹೋಗಿ [16-17] 'ನೀನು ಲೋಭದಿಂದ ಅಜಗರವಾದೆ. ಇನ್ನಾದರೂ ವಿಷಯಾಭಿಲಾಷೆಯನ್ನು ಬಿಡು ' ಎಂದು ಬೋಧಿಸಿದನು. [17] ಕೂಡಲೆ ಅಜಗರವು ಅಜ್ಞಾನವನ್ನು ತೊರೆದು ನಿರಶನವ್ರತದಿಂದ ದೇಹವನ್ನು ಬಿಟ್ಟು ಸೌಧರ್ಮಕಲ್ಪದಲ್ಲಿ ದೇವನಾಗಿ ಜನಿಸಿ [18] ತನ್ನ ಪುತ್ರನ ಉಪಕಾರವನ್ನು ಸ್ಮರಿಸಿಕೊಂಡು ದಿವ್ಯರತ್ನಾಭರಣಗಳನ್ನು ತಂದುಕೊಟ್ಟನು. ಅವು ವಂಶಪರಂಪರೆಯಾಗಿ ಬಂದು ಈಗ ನಮ್ಮ ಮಹಾರಾಜನ ಕಂಠದಲ್ಲಿ ಪ್ರಕಾಶಿಸುತ್ತವೆ.—ಇದನ್ನೂ ನೀವು ಕಂಡೇ ಇರುತ್ತೀರಿ. [18] ಇದೂ ಅಲ್ಲದೆ ಈ ಮಹಾಬಳನ ಪಿತೃಪಿತಾಮಹನಾದ ಸಹಸ್ರಬಳನು ಆತ್ಮಶ್ರೀಯನನುಭವಿಸಿ ವಿಷಯವಿರಕ್ತನಾಗಿ [19] ರಾಜ್ಯದಲ್ಲಿ ತನ್ನ ಹಿರಿಯಮಗನನ್ನು ನಿಲಿಸಿ ತಪಸ್ಸಿನಿಂದ ಮೋಕ್ಷವನ್ನು ಸಾಧಿಸಿದನು. ಬಳಿಕ ಶತಬಳನು ಈ ಮಹಾಬಳನ ತಂದೆಯಾದ ಅತಿಬಳನೆಂಬ ತನ್ನ ಮಗನಿಗೆ ರಾಜ್ಯವನ್ನು ಕೊಟ್ಟು ತಪಕ್ಕೆ ಹೋಗಿ ಸನ್ನ್ಯಾಸನವಿಧಾನದಿಂದ ಶರೀರವನ್ನು ಬಿಟ್ಟು ಮಹೇಂದ್ರಕಲ್ಪದಲ್ಲಿ ಜನಿಸಿದನು. ಹಿಂದೆ ಬಾಲ್ಯದಲ್ಲಿ ನಾವು ಒಂದುದಿನ ಮಂದರಪರ್ವತದಲ್ಲಿ ವನಕ್ರೀಡೆಯಾಡುತ್ತಿರುವಾಗ ಮಹೇಂದ್ರಕಲ್ಪಜನು ಅಲ್ಲಿಗೆ ಚೈತ್ಯಾಲಯವಂದನಾರ್ಥನಾಗಿ ಬಂದು [20] ಈ ಮಹಾಬಳನನ್ನು ಕಂಡು ಆಲಿಂಗಿಸಿಕೊಂಡು ಜಿನಧರ್ಮವನ್ನು ಮರೆಯದಿರೆಂದು ಹೇಳಲಿಲ್ಲವೆ? [21] ಈತನ ತಂದೆಯಾದ ಅತಿಬಳಖೇಚರನೂ ಈತನಿಗೆ ರಾಜ್ಯವನ್ನು ವಹಿಸಿ ತಪೋಬಲದಿಂದ ಕೇವಲಿಯಾಗಲು ನಾವೆಲ್ಲರೂ ದೇವಸಂತತಿಯೊಡನೆ ಹೋಗಿ ಪೂಜಿಸಿ ಬರಲಿಲ್ಲವೆ? ಇದು ಅ[illegible]ನ್ನಿಸೆ? ಎಂದೀ ದೃಷ್ಟಶ್ರುತಾನುಭೂತಕಥೆಗಳನ್ನು ಹೇಳಿ [22ಗ] ಪರಪಕ್ಷದ[illegible]ಪ್ರತಿಸ್ಪರವಾದ ಅನೇಕೋಪಪತ್ತಿಗಳಿಂದ ಸ್ವಪಕ್ಷಸ್ಥಾಪನೆಮಾಡಿ [23] [illegible]ನನ್ನು ಪಡೆದನು. [23ಗ] ಇವನಲ್ಲೀ ಮಹಾಬಳನು ಪರಮವಿಶ್ವಾಸವನ್ನಿಟ್ಟು ಸುಖದಿಂದಿರುತ್ತಿದ್ದನು[24ಗ] ಹೀಗೆ ಕೆಲವುಕಾಲವಾಗಲು ಒಂದು ದಿವಸ ಸ್ವಯಂಬುದ್ಧನು [25] ಮೇರುವಿಗೆ ಹೋಗಿ [26—32] ಅದರ ಸಮೀಪಪ್ರದೇಶಗಳನ್ನು [illegible] ತೋರಿ ವಿವರಿಸುತ್ತ [32ಗ] ಭದ್ರಶಾಲ ಮೊದಲು ಪಾಂಡುಕವನದವರೆಗೂ ಅದರಲ್ಲಿದ್ದ ಚೈತ್ಯಾಲಯಗಳನ್ನು ಕ್ರಮವಾಗಿ ವಂದಿಸಿ ದೇವತಾರ್ಚನೆಮಾಡಿ [illegible] ಜಿನಭವನಕ್ಕೆ ಬಂದನು. [33-33] ಆಗ ಅಲ್ಲಿಗೆ ಆದಿತ್ಯಗತಿ ಅರಿಂದಮವೆಂಬಿಬ್ಬರು [illegible]ಗಳು ಗಗನಮಾರ್ಗದಿಂದ ಇಳಿದು ಬಂದರು ಅದನ್ನು ಕಂಡು ಸ್ವಯಂಬುದ್ಧನು ಅವರ ಬಳಿಗೆ ಹೋಗಿ ವಂದನೆಮಾಡಿ ಆದಿತ್ಯಗತಿಗಳನ್ನು ಕುರಿತು [34] '[illegible]ಗೆ ಇನ್ನೂ ಭೋಗಕಾಂಕ್ಷೆ ಕುಂದಲಿಲ್ಲ. ಆತನು ಭವ್ಯನೋ [illegible]? [35] ಆತನಿಗ ಯೌವನವು ಕಳೆದು ಹೋಗಿ ಮುಪ್ಪುಬಂದೂ [illegible] ವ್ಯಾಮೋಹವು ತಪ್ಪಲಿಲ್ಲ. ಇದು ನನಗೆ ದುಃಖವನ್ನು ಉಂಟುಮಾಡುತ್ತಿದೆ. [illegible]ವಧಿಜ್ಞಾನದಿಂದ ಇದನ್ನು ಅರಿತು ನನಗೆ ತಿಳುಹಿ ನನ್ನ ದುಃಖವನ್ನು ತೊಲಗಿಸಬೇಕು' ಎಂದು ಪ್ರಾರ್ಥಿಸಿದನು. ಅದಕ್ಕೆ ಆದಿತ್ಯಗತಿಗಳು ಮಹಾಬಳನ ಪೂರ್ವಜನ್ಮದ ವೃತ್ತಾಂತವನ್ನು ಹೀಗೆಂದು ಹೇಳಿದರು:—

ಈ ಜಂಬೂದ್ವೀಪದ ಪರವಿದೇಹದ ಗಂಧಿಳವಿಷಯದಲ್ಲಿ ಸಿಂಹಪುರವೆಂಬ ಪಟ್ಟಣವುಂಟು. ಅದನ್ನು ಶ್ರೀಷೇಣನೆಂಬ ರಾಜನು ಆಳುತ್ತಿದ್ದನು. [36] ಅವನಿಗೆ ಸೌಂದರಿಯೆಂಬ ಪತ್ನಿಯಿದ್ದಳು [37] ಅವರಿಗೆ ಜಯವರ್ಮ ಶ್ರೀವರ್ಮ ಎಂಬ ಇಬ್ಬರು ಮಕ್ಕಳಾದರು. [37ಗ] ಅವರಲ್ಲಿ ಕಿರಿಯುವನು ಜನಗಳಿಗೆ ಪ್ರಿಯನಾಗಿದ್ದನು [38] ಆದುದರಿಂದ ರಾಜನು ತನ್ನ ವೃದ್ಧಾಪ್ಯದಲ್ಲಿ ರಾಜ್ಯವನ್ನು ಮಕ್ಕಳಿಗೆ ಕೊಡುವಾಗ ಕಿರಿಯವನಿಗೆ ಕೊಟ್ಟು ತಪಸ್ಸಿಗೆ ಹೊರಟುಹೋದನು. [38ಗ] ಅದಕ್ಕೆ ಹಿರಿಯಮಗನು ದುಃಖಿಸಿ [39] ತನ್ನ ಮುಂದಿನ ಜನ್ಮದಲ್ಲಾದರೂ ರಾಜ್ಯವನ್ನು ಪಡೆವೆನೆಂದು ಜೈನದೀಕ್ಷೆಯನ್ನು ವಹಿಸಿ ತನ್ನ ಕೊಯ್ದ ಕುಂತಳವನ್ನು ಇಡಲೆಂದು [40] ಹುತ್ತದಲ್ಲಿ ಕೈಯಿಟ್ಟನು. ಅಲ್ಲಿದ್ದ ಹಾವು ಕೈಯನ್ನು ಕಚ್ಚಿತು. [41] ಆಕಾಲಕ್ಕೆ ಸರಿಯಾಗಿ ಅಂತರಿಕ್ಷದಲ್ಲಿ ಒಬ್ಬ ವಿಯಚ್ಚರೇಂದ್ರನು ಹೋಗುತ್ತಿದ್ದನು. ಅವನನ್ನು ಕಂಡು ತಾನೂ ವಿದ್ಯಾಧರನಾಗಬೇಕೆಂದು ಬಯಸಿ ರಾಜಪುತ್ರನು ದೇಹವನ್ನು ತೊರೆದು [42] ಇಲ್ಲಿಮಹಾಬಳನಾಗಿ ಜನಿಸಿದನು. ಅವನು [43] ಇಂದಿನ ಕನಸಿನಲ್ಲಿ ತನ್ನ ಮೂವರುಮಂತ್ರಿಗಳೂ ತನ್ನನ್ನು ದುರ್ಗಂಧದ ಕೆಸರಿನಲ್ಲಿ ಅದ್ದಿದಂತೆಯೂ ನೀನು ಬಿಡಿಸಿತಂದು ಸಿಂಹಾಸನದಲ್ಲಿರಿಸಿ ಅಭಿಷೇಕಿಸಿದಂತೆಯೂ ಎದ್ದ ಉರಿ ನಂದುವಂತೆಯೂ ಕಂಡು ದುಸ್ಸ್ವಪ್ನವಾದುದರಿಂದ ಚಿಂತಾಕ್ರಾಂತನಾಗಿ ನಿನ್ನ ಆಗಮನವನ್ನೇ ಇದಿರುನೋಡುತ್ತಿರುವನು ನೀನು ಹೋಗಿ ಎಲ್ಲವನ್ನೂ ತಿಳಿಸಿದರೆ ನಿನ್ನ ಮಾತಿನಂತೆ ನೆಡೆದುಕೊಳ್ಳುವನು. ಅವನಿಂದ ನೋಹಿಗಳನ್ನು ಮಾಡಿಸು ಆ ಫಲದಿಂದ [44] ಅವನು (1) ಲಲಿತಾಂಗ(2)ವಜ್ರಜಂಘ(3)ಭೋಗಭೂಮಿಜ.(4) ಶ್ರೀಧರ (5) ಸುವಿಧಿನೃಪ (6) ಅಚ್ಯುತೇಂದ್ರ (7) ವಜ್ರನಾಭಿ (8) ಸರ್ವಾರ್ಥಸಿದ್ಧೀಶ್ವರ ಎಂಬ ಹೆಸರುಗಳಿಂದ ಬೇರೆಬೇರೆ ಜನ್ಮಗಳನ್ನು ಪಡೆದು ಕೊನೆಗೆ (9) ಆದಿದೇವನಾಗುವನು.' ಬಳಿಕ ಸ್ವಯಂಬುದ್ಧನು ಅವರಿಗೆ ಕೈಗಳನ್ನು ಮುಗಿದು ತ್ವರಿತಗತಿಯಿಂದ ಬಂದು [45ಗ] ಖಚರಪತಿಗೆ ಆ ಸಂಗತಿಯನ್ನೆಲ್ಲಾ ತಿಳಿಸಿ [46-48] ವಿವೇಕವನ್ನು ಉಪದೇಶಿಸಿದನು. [48ಗ] ಅವನು ಮಂತ್ರಿಯ ಮಾತಿನಿಂದ ಅಕಲುಷಿತಹೃದಯನಾಗಿ [49] ವೈರಾಗ್ಯವನ್ನವಲಂಬಿಸಿ ತನ್ನ ಮಗನಾದ ಅತಿಬಳನನ್ನು ರಾಜ್ಯದಲ್ಲಿ ನಿಲ್ಲಿಸಿ ಪಟ್ಟಣದಿಂದ ಹೊರಟು ಹೋಗಿ ವೀರಸಂಸ್ಥಾನಾರೂಢನಾಗಿದ್ದನು. [51ಗ] ಅವನನ್ನು ಸ್ವಯಂಬುದ್ಧನು ಜಾತರೂಪಧರನಾಗಿ ಮಾಡಿ [52-57] ವ್ರತವಿಧಾನನನ್ನು ಉಪದೇಶಿಸಿ [58] 'ಜಿನೇಂದ್ರಪದವನ್ನು ಶರಣುಹೊಗು; ದಿವ್ಯಕಾಂತಿಯುಳ್ಳ ಶರೀರವನ್ನು ಪಡೆವೆ' ಎಂದು ಬೋಧಿಸಿದನು. ಖಚರೇಂದ್ರನು [58ಗ] ಆಮಾತಿನಂತೆಯೆ ಇಪ್ಪತ್ತೆರಡುದಿವಸ ವೀರಶಯ್ಯಾತಳದಲ್ಲಿದ್ದು [59-60] ಪ್ರಾಯೋಪಗಮನದಿಂದ ಶರೀರವನ್ನು ತೊರೆದು [62] ಈಶಾನಕಲ್ಪದಲ್ಲಿ ಲಲಿತಾಂಗದೇವನಾಗಿ ಹುಟ್ಟಿದನು.

---

## (2) ಲಲಿತಾಂಗದೇವನ ಕಥೆ.

(63-65) ಈಶಾನಕಲ್ಪದ ವರ್ಣನೆ. ಕೂಹಲೆ ಮೃದಂಗಮುಂಗಳೆವಾದ್ಯವೂ (65) ಕುಸುಮವರ್ಷಾದಿಶುಭನಿಮಿತ್ತಗಳೂ ಉಂಟಾದುವು. ಬಳಿಕ ದೇವವಿಲಾಸಿನಿಯರೊಡನೆ ಬಂದು ವಿಮಾನವು ಬಂದಿತು. (66) ಲಲಿತಾಂಗನು ಅದೆಲ್ಲವನ್ನೂ ನೋಡಿ ಇದೇನಿರಬಹುದೆಂದು ಸ್ವಲ್ಪಕಾಲ ವಿಸ್ಮಯಸ್ತಬ್ಧನಾಗಿದ್ದು ಹಾಗೆಯೇ ತನ್ನ ಪೂರ್ವ ವೃತ್ತಾಂತವನ್ನು ನೆನೆದು (67) ಅದು ದೇವ ವಿಮಾನವೆಂದೂ ಆ ಸ್ತ್ರೀಯರು ದೇವ ಸ್ತ್ರೀಯರೆಂದೂ ತಿಳಿದುಕೊಂಡನು. ಅಷ್ಟರಲ್ಲಿ (67ಗ) ಅಲ್ಲಿನ ಮಹತ್ತರ ದೇವಿಗಳು ಬಂದು (68) 'ಇದು ನಿನ್ನ ವಿಮಾನವು. ಇದು ನಿನ್ನ ಸೇವೆಗಾಗಿರುವ ಗಣಿಕಾಸಮೂಹವು. ನೀನು ಲಲಿತಾಂಗದೇವನು. (69) ಇವೆಲ್ಲವೂ ನಿನಗೆ ಜಿನವರಪ್ರಸಾದದಿಂದ ಉಂಟಾದುವು,' ಎಂದು ಬಿನ್ನವಿಸಿ ಅವುಗಳನ್ನು ಒಪ್ಪಿಸಿದರು. ಲಲಿತಾಂಗನು ಎಲ್ಲವನ್ನೂ ಅಂಗೀಕರಿಸಿ ಸ್ವಯಂಪ್ರಭೆ, ಕನಕಲತೆ, ಕನಕಮಾಲೆ, ವಿದ್ಯುಲ್ಲತೆ, ಎಂಬ ನಾಲ್ವರು ದೇವಿಗಳೊಡನೆ (70-72) ಚಿರಕಾಲ ಸ್ವರ್ಗಸುಖಗಳನ್ನು ಅನುಭವಿಸುತ್ತಿದ್ದನು. ಆಗ ಸರ್ವಾಂಗಸುಂದರಿಯಾದ ಸ್ವಯಂಪ್ರಭೆ ಜನಿಸಿದಳು (73-77) ಅವಳ ವರ್ಣನೆ ಆಕೆಯನ್ನು ವರಿಸಿ ಸುಖದಿಂದಿರುತ್ತಿದ್ದನು.

## III. ಆಶ್ವಾಸಂ. ವಜ್ರಜಂಘದರ್ಶನ ವ್ಯಾವರ್ಣನಂ.

ಹೀಗೆ ಲಲಿತಾಂಗನು ಸುರಲೋಕಸೌಖ್ಯಗಳನ್ನು ಸೇವಿಸುತ್ತಿರುವಲ್ಲಿ (2ಗ] ಅವನ ಆಯುಃಪ್ರಮಾಣವು ಇನ್ನಾರುತಿಂಗಳಿಗೆ ಮುಗಿವುದೆಂಬ ವೇಳೆಗೆ (3) ಪುಷ್ಪಮಾಲೆಗಳೂ ವಿಭೂಷಣಾದಿಗಳೂ ಕಾಂತಿಗುಂದಿ ಅವನ ಅವಸಾನಕಾಲವನ್ನು ಸೂಚಿಸಿದುವು. ಅದನ್ನು ಕಂಡು ಅವನು ಎದೆಗೆಟ್ಟು ನಡುಗಿ (3ಗ-5) ಬಹು ವಿಧವಾಗಿ ಪ್ರಲಾಪಿಸಿದನು. [5ಗ] ಆಗ ಸಾಮಾನಿಕದೇವರು ಬಂದು (6) 'ಮೃತ್ಯುವು ಆರಿಗೂ ತಪ್ಪಿದುದಲ್ಲ ; (7) ನೀನು ಅಂಜದೆ ಜಿನಪೂಜೆಯನ್ನುಮಾಡು (8) ಆರೂ ಮೃತ್ಯುವನ್ನು ಗೆಲ್ಲಲಾರರು' ಎಂದು ಸಮಾಧಾನಮಾಡಿದರು. ಅವರ ವಾಕ್ಯವನ್ನು ನಂಬಿ ಅವನು ಆರುತಿಂಗಳು ಜಿನಪೂಜೆಮಾಡಿ ಕೊನೆಗೆ ಮೃತ್ಯುವಶನಾದನು.

## (3) ವಜ್ರಜಂಘನ ಕಥೆ.

ಬಳಿಕ ಅವನು [9] ಜಂಬೂದ್ವೀಪದ ಮೇರುವಿನ ಪೂರ್ವವಿದೇಹದ ಸೀತಾನದಿಯ ದಕ್ಷಿಣತಟದ ಉತ್ಪಳಪುರದಧಿಪನಾದ ವಜ್ರಬಾಹುನೃಪನಿಗೂ ಅತನ ಪತ್ನಿ ವಸುಂಧರೆಗೂ ಅಗ್ರಪುತ್ರನಾಗಿ ಜನಿಸಿ ವಜ್ರಜಂಘನೆಂಬ ಹೆಸರಿನಿಂದ ಬೆಳೆಯುತ್ತಿದ್ದನು. [9ಗ-10] ಅವನಿಗೆ ಕ್ರಮಕ್ರಮವಾಗಿ ಯೌವನೋದಯವಾಯಿತು. [11-11ಗ]

ಕೂಡಲೆ ಸ್ವಯಂಪ್ರಭಾದೇವಿಯ ನೆನೆವೂ ಉಂಟಾಯಿತು. ಅವಳ ಹಂಬಲಿಂದ ಅವನು [12] ಸರ್ವಭೋಗವಿಮುಖನಾಗಿ ಚಿಂತಿಸುತ್ತಿದ್ದನು. [12ಗ] ಅತ್ತ ಸ್ವಯಂಪ್ರಭಾದೇವಿಯೂ ಪತಿವಿಯೋಗದಿಂದ ಖಿನ್ನಳಾಗಿ [ 13 ] ಆಭರಣಾದಿಗಳನ್ನು ತೊರೆದು [14–15] ಲಲಿತಾಂಗನನ್ನು ಹಂಬಲಿಸಿ ಹಲುಬುತ್ತ ರೋದಿಸುತ್ತಿದ್ದಳು. [15] ಅವಳ ಬಳಿಗೆ ಮಹತ್ತರದೇವಿಗಳು ಹೋಗಿ [16] 'ಮರಣವು ಬಾರದವರು ಆರು? ಮುಂದುಹಿಂದೆಂಬ ಭೇದವಲ್ಲದೆ ಬೇರೆಯೇನೂ ಇಲ್ಲ. ಇದಕ್ಕೆ ಮರುಳಾಗದೆ ಜಿನನನ್ನು ಪೂಜಿಸು. ಮುಂದಿನ ಜನ್ಮದಲ್ಲಿ ನಿನ್ನ ಪತಿಯನ್ನು ಪಡೆವೆ' ಎಂದು ಬೋಧಿಸಿದರು. [16ಗ] ಆ ಮಾತುಗಳಿಂದ ಮನಸ್ಸಿಗೆ ವಿವೇಕವನ್ನು ತಂದುಕೊಂಡು [17] ಅವಳು ಗುರುಪಂಚಕವನ್ನು ಧ್ಯಾನಿಸುತ್ತ ಶರೀರಪರಿತ್ಯಾಗಮಾಡಿದಳು. [17ಗ] ಕೂಡಲೆ ಜಂಬೂದ್ವೀಪದ ಪೂರ್ವವಿದೇಹದ ಪುಂಡರೀಕಿಣಿಯನ್ನು ಆಳುತ್ತಿದ್ದ ವಜ್ರದಂತನಿಗೂ ಆತನ ಸತಿ ಲಕ್ಷ್ಮೀಮತಿಗೂ ಪುತ್ರಿಯಾಗಿ ಹುಟ್ಟಿ ಶ್ರೀಮತಿಯೆಂಬ ನಾಮದಿಂದ ಬಳೆದು [18-20] ಯೌವನಲಕ್ಷ್ಮಿಯನ್ನು ಹೊಂದಿದಳು. [21] ಪಂಡಿತೆಯೆಂಬ ದಾದಿಯಲ್ಲಿ ಓದಿ ಸಕಲಕಲಾಪಾಂಡಿತ್ಯವನ್ನು ಪಡೆದಿದ್ದಳು ಹೀಗಿರುವಲ್ಲಿ [21ಗ] ಒಂದುದಿವಸ ಆ ಕನ್ಯೆ ತನ್ನ ಅಂತಃಪುರದಲ್ಲಿ ಮಲಗಿದ್ದು ನಿಶಾವಸಾನಸಮಯದಲ್ಲಿ ಆಪುರದ ಬಹಿರುದ್ಯಾನದಲ್ಲಿದ್ದ ಯಶೋಧರಮುನಿಗಳ ಕೇವಲಜ್ಞಾನೋತ್ಪತ್ತಿಯ ಉತ್ಸವಕ್ಕಾಗಿ ಬಂದ [22] ದೇವಯಾನದ ಕಿಂಕಿಣೀಧ್ವನಿಯಿಂದ ಎಚ್ಚತ್ತು [22ಗ] ಸೌಧದಲ್ಲಿ ನಿಂತು ದೇವಾಗಮನವನ್ನು ನೋಡಿದಳು. ತಟ್ಟನೆ ಅವಳಿಗೆ ತನ್ನ ಪೂರ್ವಭವಸ್ಮರಣೆಯುಂಟಾಯಿತು. [23] ಅದರೊಡನೆ ಲಲಿತಾಂಗದೇವನ ನೆನೆವೂ ಮೈದೋರಿತು. ಅವಳು ವಿರಹವ್ಯಥೆಯಿಂದ ಮೈಮರೆತಳು. [23ಗ] ಅದನ್ನು ಕಂಡು ಪರಿಜನರು ಬಂದು ಶೀತಳಕ್ರಿಯೆಗಳಿಂದ ಉಪಚರಿಸಿ ಮೂರ್ಛೆಯಿಂದೆಚ್ಚರಿಸಿ ಮೂರ್ಛೆಗೆ ಕಾರಣವೇನೆಂದು ಕೇಳಿದರು ಅವಳು ಅವರಿಗೆ ಪ್ರತ್ಯುತ್ತರವನ್ನೂ ಕೊಡಲಿಲ್ಲ, ಆದುದರಿಂದ ಅವರು ಆ ಸಂಗತಿಯನ್ನು ವಜ್ರದಂತನಿಗೂ ಲಕ್ಷ್ಮೀಮತಿಗೂ ತಿಳಿಸಿದರು. ಅವರಿಬ್ಬರೂ ಮಗಳ ಸಮೀಪಕ್ಕೆ ಬಂದು [24] ಅವಳ ಚಿಂತೆಗೆ ಕಾರಣವನ್ನು ಕೇಳಿದರು. ಅವಳು ಸುಮ್ಮನೆ ಕಣ್ಣೀರನ್ನು ಸುರಿಸಿದಳೆ ಹೊರತು ತನ್ನ ಮನೋಗತವನ್ನು ಹೇಳಲಿಲ್ಲ. ಅದನ್ನು ಕಂಡು [26] ವಜ್ರದಂತನು—ಮಗಳ ಅಭಿಪ್ರಾಯವನ್ನು ತಿಳಿವವರೆಗೂ ನೀನು ಸಮಾಧಾನಳಾಗಿರೆಂದು ತನ್ನ ಪತ್ನಿಗೆ ಹೇಳಿ [ 26ಗ ] ಪಂಡಿತೆಯನ್ನು ಕರೆದು ಮಗಳನ್ನು ಮೆಲ್ಲಗೆ ಒಡಂಬಡಿಸಿ ಸಂಗತಿಯನ್ನು ತಿಳಿದು ಹೇಳುವಂತೆ ನಿಯಮಿಸಿ ಹೊರಟುಹೋದನು. [27] ಆಸಮಯಕ್ಕೆ ಗುರುಗಳಾದ ಯಶೋಧರ ಮುನಿಪತಿಗೆ ಕೇವಲಬೋಧವೂ ತನ್ನ ಆಯುಧಾಗಾರದಲ್ಲಿ ಚಕ್ರರತ್ನವೂ ಜನಿಸಿದುವು. [29] ಆಗ ವಜ್ರದಂತನು ಹೋಗಿ ಮುನಿಪತಿಗೆ ವಂದಿಸಿ [29ಗ] ಲಬ್ಧಾವಧಿಲೋಚನನಾಗಿ ಮರಳಿ ಬಂದು ಚಕ್ರಪೂಜೆಯನ್ನು ನಿರ್ವರ್ತಿಸಿ ದಿಗ್ವಿಜಯೋದ್ಯೋಗದಿಂದ ವಿಜಯಪ್ರಯಾಣವನ್ನು ಬಳೆಸಿದನು.

ಇತ್ತ ಪಂಡಿತೆ ಶ್ರೀಮತಿಯನ್ನು ಮೆಲ್ಲಗೆ ಉಪವನಕ್ಕೆ ಕರೆದುಕೊಂಡುಹೋಗಿ [30] ಉಪಚರಿಸುವ ವ್ಯಾಜದಿಂದ ಸಮೀಪಕ್ಕೆ ಸೇರಿ [31-32] 'ನನಗಿಂತ ನಿನಗೆ ಹಿತರಾರು ? ನನ್ನಲ್ಲಿಯೂ ನಿನ್ನ ಮನಸ್ಸನ್ನು ಮರೆಸಿ ನೀನು ಹೀಗೆ ಕೊರಗಲಾಗದು, ನಿನ್ನ ಮನೋಗತವನ್ನು ಹೇಳು' ಎಂದು ಪ್ರೀತಿಯಿಂದ ಕಾಡಿದಳು. [32ಗ] ಸ್ವಭಾವಮುಗ್ಧೆಯಾದ ಶ್ರೀಮತಿ ಲಜ್ಜೆಯಿಂದ ತಲೆಬಾಗಿ [33] 'ನಿನಗಿಂತಲೂ ನನಗೆ ಆಪ್ತರು ಬೇರೆಯಾರಿರುವರು ? ಹೇಳುವೆನು ಕೇಳು. ದೇವಾಗಮನವನ್ನು ಕಂಡು ನನಗೆ ಪೂರ್ವಜನ್ಮಸ್ಮರಣೆಯುಂಟಾಗಿ ಇಷ್ಟು ನೋವಾಯಿತು. ಇಲ್ಲದಿದ್ದರೆ ನಿಷ್ಕಾರಣವಾಗಿ ನನಗೆ ಇಷ್ಟು ಚಿಂತೆಯೆಲ್ಲಿಯದು — ಎಂದು ಹೇಳಿ ತನ್ನ ಹಿಂದಿನ ಜನ್ಮದ ಸಂಗತಿಯನ್ನು ಇಂತೆಂದಳು:—

[33ಗ] ನಾನು ಈ ಜನ್ಮಕ್ಕೆ ಹಿಂದೆ ಮೂರನೆಯ ಜನ್ಮದಲ್ಲಿ ಗಂಧಿಳವಿಷಯದ ಪಾಟಲಿಗ್ರಾಮದಲ್ಲಿ ನಾಗದತ್ತನೆಂಬ ವರ್ತಕನ ಪತ್ನಿಯಾದ ವಸುದತ್ತೆ ಎಂಬಳ ಉದರದಲ್ಲಿ ಜನಿಸಿದೆನು. ನಾನು ನಮ್ಮ ತಾಯಿಯ ಗರ್ಭದಲ್ಲಿ ನೆಲಸಿದ ಕೂಡಲೆ [34] ನನ್ನೊಡಹುಟ್ಟಿದವರೂ ತಂದೆಯೂ ಪರಲೋಕಗತರಾದರು. [33ಗ] ನಮ್ಮ ತಾಯಿಯೂ ಅಜ್ಜಿಯೂ ಸರ್ವಸ್ವವನ್ನೂ ಕಳೆದುಕೊಂಡು ದೀನರಾಗಿ ಇತರರ ಮನೆಯಲ್ಲಿ ಕೆಲಸಮಾಡಿಕೊಂಡು ಜೀವಿಸುತ್ತಿದ್ದರು. ಕೆಲವು ಕಾಲದಮೇಲೆ ನಾನು ಜನಿಸಿದೆನು. ನನ್ನ ದೇಹದಿಂದ ಬಂದು ವಿಧವಾದ ದುರ್ಗಂಧವು ಬರುತ್ತಿದ್ದುದರಿಂದ ಎಲ್ಲರೂ ಜುಗುಪ್ಸೆಪಡುತ್ತಿದ್ದರು. ಅದರಿಂದ ಅವರು ನನ್ನನ್ನು ಶ್ಮಶಾನದಲ್ಲಿ ಬಿಂದಿಹೊದಿಸಿಟ್ಟು ತಾವುಬೇಡಿ ತಂದಎಂಜಲಿಂದ ಸಾಕುತ್ತಿದ್ದರು. ನಾನು ಹೆಸರೂ ಇಲ್ಲದೆ ನಿರ್ನಾಮಿಕೆಯಾಗಿದ್ದೆನು. ಹೀಗಿರುವಲ್ಲಿ [35] ಕೆಲವು ದಿವಸಕ್ಕೆ ಅವರೂ ಮೃತ್ಯುವಶರಾದರು. ನನಗೆ ಆರೂ ಗತಿಯಿಲ್ಲದಿದ್ದುದರಿಂದ ನಾನು ಅವಿಚಾರಣವೆಂಬ ಕಾಡನ್ನು ಹೊಕ್ಕು [35ಗ] ಅಲ್ಲಿದ್ದ ಅಂಬರತಿಳಕವೆಂಬ ಗಿರಿಯನ್ನು ಸೇರಿದನು. [36] ಅಲ್ಲಿ ಪುಣ್ಯಾಸ್ರವರೆಂಬ ಮುನಿಗಳಿದ್ದರು [36ಗ] ಅವರಿಗೆ ನಮಸ್ಕರಿಸಿ ನನ್ನ ದುಃಖಕಾರಣವನ್ನು ತಿಳಿಸಿ ಕರುಣಿಸಬೇಕೆಂದು ಪ್ರಾರ್ಥಿಸಿದೆನು. [38] 'ಇದು ನಿನ್ನ ಜನ್ಮಾಂತರಪಾಪಪರಿಪಾಕದಿಂದ ಉಂಟಾಯಿತು' ಎಂದು ಅವರು ಇಂತೆಂದರು :— [38ಗ] ನೀನು ಹಿಂದಿನ ಜನ್ಮನಲ್ಲಿ ಈ ದೇಶದ ಪಳಾಳಕೂಟದಲ್ಲಿ ದೇವಿಲನೆಂಬ ಗ್ರಾಮಕೂಟನ ಪತ್ನಿ ವಸುಮತಿಯೆಂಬಳ ಗರ್ಭದಲ್ಲಿ ಧನದತ್ತೆಯೆಂಬ ಹೆಸರಿನಿಂದ ಹುಟ್ಟಿ ಬಂದುದಿವಸ ತ್ರಿಗುಪ್ತಿಗುಪ್ತ ಸಮಾಧಿಗುಪ್ತರೆಂಬ ಯತಿಗಳ ಅಧ್ಯಯನಕ್ಕೆ ಅಂತರಾಯವನ್ನು ಕಲ್ಪಿಸಲೆಂದು ಸತ್ತನಾಯನ್ನು ತಂದು ಅವರ ಓದುವ ಮನೆಯಲ್ಲಿ ಹಾಕಿದೆ. ಅದಕ್ಕೆ ಅವರು [39] ಅಯ್ಯೋ ! ಬುದ್ಧಿಯಿಲ್ಲದ ಹುಡುಗೀ ! ಹೀಗೆ ಮಾಡಿದೆಯಲ್ಲಾ , ಇದು ನಿನಗೆ ದುಃಖವನ್ನು ಉಂಟುಮಾಡುವುದು, ಎಂದರು [39ಗ] ಅದಕ್ಕೆ ನೀನು ಅಂಜಿ [40] ಅವರ ಕ್ಷಮೆಯನ್ನು ಬೇಡಿಕೊಂಡೆ. [40] ಅವರ ಉಪಶಮದಿಂದ ನಿನಗೆ ಮನುಷ್ಯಜನ್ಮವುಂಟಾಯಿತು. ಈ ನಿನ್ನ ದುಃಖವು ಪೂರ್ವ

ಪಾಪಜನಿತವಾದುದು ; ಇನ್ನು ನಿನಗೆ ಜಿನೇಂದ್ರಧರ್ಮಾಭ್ಯಾಸದಿಂದ ಪಾಪವಿಮೋಚನೆಯಾಗುವುದು ' ಎಂದು ಅನುಗ್ರಹಿಸಿದರು. [40ಗ] ತದ್ವಾಕ್ಯಾನುಸಾರವಾಗಿ ನಾನು ಜೈನವ್ರತಗಳನ್ನು ನಡೆಯಿಸಿ ಆಯುಷ್ಯಾವಸಾನದಲ್ಲಿ ಶರೀರಪರಿತ್ಯಾಗವನ್ನು ಮಾಡಿ ಶ್ರೀಪ್ರಭವಿಮಾನದಲ್ಲಿ ಜನಿಸಿ ಸ್ವಯಂಪ್ರಭೆಯೆಂಬ ಹೆಸರಿನಿಂದ ಲಲಿತಾಂಗದೇವನಿಗೆ ಪತ್ನಿಯಾಗಿದ್ದೆನು. ಕೆಲವು ಕಾಲಕ್ಕೆ ನನ್ನ ಪ್ರಿಯನು ಮೃತನಾದನು ; ನಾನು ಆರುತಿಂಗಳು ಜಿನೇಂದ್ರಮಹಿಮೆಯನ್ನು ಮಾಡಿ ಇಲ್ಲಿ ಬಂದು ಜನಿಸಿದೆನು. ಇದೇ ನನ್ನ ವೃತ್ತಾಂತವು [41]

ಲಲಿತಾಂಗದೇವನೂ ಎಲ್ಲಿಯೋ ಹುಟ್ಟಿರಬೇಕು ; ಅವನೊಡನೆ ಸೇರದಿದ್ದರೆ ನನಗೆ ಜೀವಿತದ ಆಶೆಯೂ ಸೇರದು. ಇದನ್ನು ಆರೊಡನೆ ಹೇಳಿದರೆ ತಾನೆ ಏನು ಪ್ರಯೋಜನವೆಂದು ಮೌನವಾಗಿದ್ದೆನು. [42] ಆತನ ರೂಪು ನನ್ನ ಎದೆಯಲ್ಲಿ ಸನ್ನಿಹಿತವಾಗಿ [43] ಸ್ಥಿರವಾಗಿ ನೆಲೆಗೊಂಡಿದೆ. [43ಗ) ನನ್ನ ಇಷ್ಟಾರ್ಥವು ಮಾತ್ರ ಕೈಗೂಡುವಂತಿಲ್ಲ. ಆದುದರಿಂದ ನಮ್ಮ ಅನುರಾಗಸೂಚಕವಾದ ಈ ಚಿತ್ರಪಟವನ್ನು ಬರೆದು ಇಟ್ಟುಕೊಂಡಿರುವೆನು ; ಇದನ್ನು ಪೂಜಿಸುತ್ತ ಕನ್ಯಾವ್ರತದಲ್ಲೆ ಕಾಲವನ್ನು ಕಳೆವೆನು— ಎಂದು ಹೇಳಿದಳು. ಅದೆಲ್ಲವನ್ನೂ ಕೇಳಿ [44] ಪಂಡಿತೆ ಆ ಪಟವನ್ನು ತೆಗೆದುಕೊಂಡು ನೋಡಿ [45] ಅದರ ಸಾಹಾಯ್ಯದಿಂದ ಅವಳ ಪ್ರಾಣಪ್ರಿಯನನ್ನು ಹುಡುಕಿ ತಂದು ಕೊಡುವುದಾಗಿ ಹೇಳಿ ಆ ಪಟದಲ್ಲಿ ಬರೆಯದೆ ವಂಚಿಸಿದ್ದ ಕೆಲವು ರಹಸ್ಯಗಳನ್ನು ತಿಳಿದುಕೊಂಡು ಅಲ್ಲಿಂದ ಹೊರಟು ಮಹಾಪೂತಜಿನಾಲಯಕ್ಕೆ ಹೋಗಿ ಅಲ್ಲಿ ಆ ಪಟವನ್ನು ಹರಹಿ ಇಟ್ಟುಕೊಂಡು ನಿಜಾಭಿಲಷಿತ ಕಾರ್ಯಸಿದ್ಧಿಯನ್ನು ನಿರೀಕ್ಷಿಸುತ್ತಿದ್ದಳು.

[46] ಇತ್ತ ವಜ್ರದಂತನು ದಿಙ್ಮಂಡಲವನ್ನು ಜಯಿಸಿ ರಾಜಧಾನಿಯನ್ನು ಪ್ರವೇಶಿಸಿ ಮೂರ್ಧಾಭಿಷಿಕ್ತನಾದನು. ಅನಂತರದಲ್ಲಿ ತನ್ನ ಮಗಳನ್ನು ಕರೆಯಕಳುಹಿದನು. [47] ಅವಳು ಬಂದು ತಂದೆಗೆ ವಂದಿಸಿ [47ಗ] ಆತನ ಆಶೀರ್ವಾದಗಳನ್ನು ತಳೆದು ಸಮೀಪದಲ್ಲಿ ನಿಂತುಕೊಂಡಳು. ಹಾಗೆ ನಿಂತ ಮಗಳನ್ನು ನೋಡಿ 'ನಾಳೆನಾಡಿದರಲ್ಲಿಯೆ ನೀನು ನಿನ್ನ ಪ್ರಾಣಕಾಂತನೊಡನೆ ಕೂಡುವೆ ' ಯೆಂದು ಹೇಳಿ ಅವಳ ಮತ್ತು ತನ್ನ ಜನ್ಮಾಂತರದಕಥೆಗಳನ್ನು ಹೀಗೆಂದು ಹೇಳಿದನು: —

[50ಗ] ನಮ್ಮ ಯಶೋಧರಗುರುಗಳ ಜ್ಞಾನೋತ್ಪತ್ತಿಯಲ್ಲಿ ಉಂಟಾದ ಸ್ಥಿರಭಕ್ತಿಯಿಂದ ನನಗೆ ಅವಧಿಜ್ಞಾನವು ಉತ್ಪನ್ನವಾಯಿತು. ಅದರ ಪ್ರಭಾವದಿಂದ ನಿನ್ನ ಮತ್ತು ನಿನ್ನ ಕಾಂತನ ಜನ್ಮಾಂತರಗಳನ್ನು ತಿಳಿದುಕೊಂಡೆನು. ಅವುಗಳನ್ನು ನಿನಗೆ ಹೇಳುವೆನು ಕೇಳು. ನಾನು ಈ ಜನ್ಮಕ್ಕೆ ಹಿಂದೆ ಐದನೆಯ ಜನ್ಮದಲ್ಲಿ ಪುಂಡರೀಕಿಣಿಯಲ್ಲಿ ಶೀಶವಮಹೀಶನಿಗೆ ಚಂದ್ರಕೀರ್ತಿ ಎಂಬ ಮಗನಾಗಿ ಹುಟ್ಟಿದ್ದೆನು. ನನಗೆ ಜಯಕೀರ್ತಿ ಎಂಬ ಸ್ನೇಹಿತನಿದ್ದನು. ನಾವಿಬ್ಬರೂ ಗೃಹಸ್ಥಧರ್ಮ

ದಲ್ಲಿದ್ದೆವು. ನಾನು ಜೀವಿತಾವಸಾನಕಾಲದಲ್ಲಿ ಪ್ರೀತಿವರ್ಧನೋದ್ಯಾನದಲ್ಲಿ ಚಂದ್ರಸೇನಾಚಾರ್ಯರಬಳಿ ಸನ್ನ್ಯಸನವಿಧಿಯಿಂದ ಆಹಾರವನ್ನು ತೊರೆದು ದೇಹತ್ಯಾಗಮಾಡಿ ಮಹೇಂದ್ರಕಲ್ಪದಲ್ಲಿ ಸಾಮಾನಿಕದೇವನಾದೆನು. ಜಯಕೀರ್ತಿಯೂ ತನ್ನ ವಿಭವಾನುಗುಣವಾಗಿ ಅಲ್ಲಿಯೇ ಹುಟ್ಟಿದನು. ಅಲ್ಲಿ ಕೆಲವು ಕಾಲ ಜೀವಿಸಿ ಬಳಿಕ ನಾವು ಅಲ್ಲಿಂದ ಪರಿಚ್ಯುತರಾಗಿ ಮಂಗಳಾವತೀವಿಷಯದ ರತ್ನಸಂಚಯಪುರದ ಶ್ರೀಧರಮಹಾರಾಜನ ಪುತ್ರರಾಗಿ ಜನಿಸಿದೆವು. ನಮ್ಮ ತಂದೆ ನಮಗೆ ಅಧಿರಾಜಯುವರಾಜಪದವಿಗಳನ್ನು ಕೊಟ್ಟು ದೇವಲೋಕಕ್ಕೆ ಸಂದನು. [51ಗ] ನಮ್ಮ ಮಾತೆಯೂ ಅನೇಕವ್ರತಗಳನ್ನು ಮಾಡಿ ಜೀವಿತಾಂತ್ಯದಲ್ಲಿ ಶ್ರೀಪ್ರಭವಿಮಾನದಲ್ಲಿ ಲಲಿತಾಂಗದೇವನಾದಳು. [52] ಕೆಲವು ದಿವಸಕ್ಕೆ ನನ್ನತಮ್ಮನು ಮೃತನಾದನು. ಅದರಿಂದ ನಾನು ವಿಶೇಷವಾಗಿ ಶೋಕಿಸುತ್ತಿದ್ದೆನು. [52ಗ-56] ಆಗ ಲಲಿತಾಂಗದೇವನು ಬಂದು ನನಗೆ ವೈರಾಗ್ಯವನ್ನು ಉಪದೇಶಿಸಿದನು. [57-5ಗ] ನಾನು ಯುಗಂಧರಮುನೀಂದ್ರರಲ್ಲಿ ತಪಸ್ಸನ್ನು ಕೈಕೊಂಡು ಜೀವಿತಾಂತ್ಯದಲ್ಲಿ ಅಚ್ಯುತೇಂದ್ರಕಲ್ಪದಲ್ಲಿ ಅಚ್ಯುತೇಂದ್ರನಾದೆನು. [58ಗ] ನನ್ನ ಆ ವಿಭವಕ್ಕೆ ಲಲಿತಾಂಗನೇ ಕಾರಣವೆಂದು ತಿಳಿದು ಅವನನ್ನು ಕರೆದುಕೊಂಡು ಹೋಗಿ ಪೂಜಿಸಿದೆನು. ಕೆಲವು ಕಾಲಕ್ಕೆ ಅವನು ಶರೀರವನ್ನು ತೊರೆದು ವಾಸವನೆಂಬ ಗಂಧರ್ವರಾಜನಿಗೆ ಮಹೀಧರನೆಂಬ ಮಗನಾದನು. ನಾನು ಅವನನ್ನು ಕಂಡು [60-64] ಅವನಿಗೆ ವೈರಾಗ್ಯವನ್ನು ಬೋಧಿಸಿದೆನು. [65] ಕೂಡಲೆ ಅವನು ರಾಜ್ಯವನ್ನು ತನ್ನ ಮಗನಿಗೆ ಕೊಟ್ಟು ಜಗನ್ನಂದನಗುರುಗಳಲ್ಲಿ ಶಿಷ್ಯನಾಗಿ ಸತ್ತು ಪ್ರಾಣತೇಂದ್ರನಾಗಿ ಜನಿಸಿ ಆಯುರವಸಾನದಲ್ಲಿ ಮೃತನಾಗಿ [65] ಗಂಧಿಳವಿಷಯದ ಅಯೋಧ್ಯಾಧಿಪನಾದ ಜಯವರ್ಮನ ಸತಿ ಸುಪ್ರಭೆಯ ಗರ್ಭದಲ್ಲಿ ಅಜಿತಂಜಯನೆಂಬ ಹೆಸರಿನಿಂದ ಹುಟ್ಟಿ ಬಳೆದು ಚಕ್ರವರ್ತಿಪದದಲ್ಲಿದ್ದನು. ಆಗ ನಾನು ಅಲ್ಲಿಗೆ ಹೋಗಿ [66-72] ಪುನಃ ವೈರಾಗ್ಯವನ್ನುಪದೇಶಿಸಿದೆನು. [72ಗ] ನನ್ನ ಮಾತಿನಿಂದ ಅವನು ವೈರಾಗ್ಯವನ್ನವಲಂಬಿಸಿ ಮಂದರಸ್ಥವಿರರೆಂಬ ಮುಮುಕ್ಷುಗಳ ಬಳಿಯಲ್ಲಿ ಮೋಕ್ಷಮಾರ್ಗವನ್ನು ಅಂಗೀಕರಿಸಿ ಮಹೀಯುಜನನೀಚರ ಗುರುಗಳ ಉಪದೇಶದಿಂದ ನೋಂತು, ಮಹಾಬಳಖೇಚರನಾದ ಭವದಲ್ಲಿ ಸ್ವಯಂಬುದ್ಧೋಪದೇವನ್ನು ಪಡೆದು ಈಶಾನಕಲ್ಪದ ಶ್ರೀಪ್ರಭವಿಮಾನದಲ್ಲಿ ಲಲಿತಾಂಗದೇವನಾಗಿ ಹುಟ್ಟಿದನು. ನೀನು ಅವನಿಗೆ ಪತ್ನಿಯಾಗಿದ್ದೆ [73] ಆಕಾಲದ ಒಂದು ರಹಸ್ಯವನ್ನು ಹೇಳುವೆನು ಕೇಳು. ಆಕಾಲದಲ್ಲಿ ನಾವು ಅಚ್ಯುತೇಂದ್ರನಿಂದ ಯುಗಂಧರಜಿನೋಪಾಖ್ಯಾನವನ್ನು ಕೇಳಿದೆವು. [73ಗ] ಅದೆಂತೆಂದರೆ—ಪೂರ್ವವಿದೇಹದ ಸೀತಾನದಿಯ ದಕ್ಷಿಣತೀರದ ಸುಸೀಮಾನಗರವನ್ನು ಆಳುವ ಅಜಿತಂಜಯನ ಮಂತ್ರಿಗೂ ಆತನ ಸತಿ ಸತ್ಯಭಾಮೆಗೂ ಪ್ರಹಸಿತನೆಂಬ ಮಗನಾದನು. ಅವನಿಗೆ ವಿಕಸಿತನೆಂಬ ಮಿತ್ರನಿದ್ದನು. [74-75] ಅವರಿಬ್ಬರೂ ಬಹಳ ಪಂಡಿತರಾಗಿದ್ದರು. [75ಗ] ಅವರು ಒಂದುದಿನ ತಮ್ಮ ವಿದ್ಯಾಗರ್ವದಿಂದ ಮತಿಸಾಗರಮುನಿಗಳಲ್ಲಿ ವಾದಮಾಡಿ ಸೋತು ಅವರಿಗೆ ಶಿಷ್ಯರಾದರು. [76]

ಬಳಿಕ ಮಹಾವ್ರತಗಳನ್ನು ಕೈಕೊಂಡು ಸಮಾಧಿಯನ್ನು ಮಾಡಿ ಮಹಾಶುಕ್ರಕಲ್ಪದಲ್ಲಿ ಇಂದ್ರಪ್ರತೀಂದ್ರರಾಗಿ ಜನಿಸಿದರು ಅಲ್ಲಿ ಚಿರಕಾಲಜೀವಿಸಿ [76ಗ] ಪರಿಚ್ಯುತರಾಗಿ ಧಾತಕೀಷಂಡದ ಪೂರ್ವವಿದೇಹದ ಪುಷ್ಕಳಾವತಿಯ ಪುಂಡರೀಕಿಣಿಪುರವನ್ನು ಆಳುತ್ತಿದ್ದ ಧನಂಜಯ ನರಸಿಯರಪ್ಪ ಜಯಮತಿ ಜಯಸೇನೆಯರಿಗೆ ಮಹಾಬಳಾತಿಬಳರೆಂಬ ಮಕ್ಕಳಾದರು [77] ಅತಿಬಲನು ಮೃತನಾಗಲು ಮಹಾಬಲನು ಮೃತನಾಗಿ ಪ್ರಾಣತದಲ್ಲಿ [77ಗ] ಪುಷ್ಪಚೂಳನೆಂಬನಾಗಿ ವಿಂಶತಿಸಮುದ್ರೋಪಮಾಯುಷ್ಯಾವಸಾನದಲ್ಲಿ ವತ್ಸಕಾವತಿಯ ಪ್ರಭಾವತೀಪುರದರಸು ಮಹಾಸೇನನಿಗೂ ವಸುಂಧರೆಗೂ ಜಯಸೇನನೆಂಬ ಮಗನಾದನು ಅಲ್ಲಿ[78]ತನಗೆ ಬಂದ ರಾಜ್ಯವನ್ನು ತೊರೆದು [78ಗ] ಸೀಮಂಧರಜಿನೇಶರಲ್ಲಿ ದಿಗ್ವಾಸನಾದಿಭಾವನೆಗಳನ್ನು ಭಾವಿಸಿ ನಿಜಜೀವಿತಾವಸಾನದಲ್ಲಿ ಸೌಮನಸವೆಂಬಗ್ರೈವೇಯಕದಲ್ಲಿ ಅಹಮಿಂದ್ರನಾಗಿದ್ದು [79] ಬಳಿಕ ಭೂಮಿಗಿಳಿದು ಪೂರ್ವವಿದೇಹದ ಮಂಗಳಾವತೀವಿಷಯದ ರತ್ನಸಂಚಯಪುರವನ್ನು ಆಳುವ ಅಜಿತಂಜಯಭೂಪಾಲನಿಗೂ ಅವನರಸಿ ವಸುಮತಿಗೂ ಮಗನಾಗಿ ಯುಗಂಧರನೆಂಬ ಹೆಸರಿನಿಂದ ಜನಿಸಿದನು. [80-81]ಅವನು ಈಗ ಜೈನದೀಕ್ಷೆಯನ್ನು ಹೊಂದಿ ಆರ್ಹಂತ್ಯಲಕ್ಷ್ಮಿಯನ್ನು ಪಡೆದು ಪ್ರಖ್ಯಾತನಾಗಿದ್ದಾನೆ, [82]ಎಂದು ಅವನ ಚರಿತೆಯನ್ನು ಹೇಳಿ ತಾವು ಪಿಹಿತಾಸ್ರವ ಭಟ್ಟಾರಕರ ಕೇವಲ ಜ್ಞಾನೋತ್ಪತ್ತಿ ಯೊಸಗೆಮಾಡಿ ಬಂದುದನ್ನು ಜ್ಞಾಪಿಸಿ [83] ಮೇರುನಗದಲ್ಲಿ ವನಕೇಳಿಯನ್ನೂ ಸ್ವಯಂಭೂರಮಣಸಮುದ್ರದಲ್ಲಿ ಜಲಕೇಳಿಯನ್ನೂ ಆಡಿದುದು ಜ್ಞಾಪಕವುಂಟೆ? ಎಂದನು ಅವಳು ಜ್ಞಾಪಕವುಂಟೆಂದು ಹೇಳಿ[83ಗ]ಲಲಿತಾಂಗದೇವನು ಹುಟ್ಟಿರುವ ಸ್ಥಾನವು ತಿಳಿಯದೆ ಕಳವಳಿಸುವೆನು, ಅದನ್ನು ತಿಳಿಸಬೇಕೆಂದು ಪ್ರಾರ್ಥಿಸಿದಳು.—ಲಲಿತಾಂಗನು ಉತ್ಪಳಖೇಟವನ್ನು ಆಳುವ ನನ್ನ ಮೈದುನನಾದ ವಜ್ರಬಾಹುಗೂ ನನ್ನ ತಂಗಿ ವಸುಂಧರೆಗೂ ವಜ್ರಜಂಘನೆಂಬ ಹೆಸರಿನಿಂದ ಮಗನಾಗಿ ಹುಟ್ಟಿರುವನು [84] ಅವನು ಕ್ಷಿಪ್ರದಲ್ಲಿಯೇ ಬರುವನು ಈ ಸಂಗತಿಯನ್ನು ಪಂಡಿತೆಯೂ ಬಂದು ತಿಳಿಸುವಳು [84ಗ] ಎಂದು ಹೇಳಿ ಅವಳನ್ನು ಕನ್ಯಾಂತಃಪುರಕ್ಕೆ ಕಳುಹಿಸಿದನು ಆ ವೇಳೆಗೆ ಪಂಡಿತೆ ಬಂದು ಶ್ರೀಮತಿಯನ್ನು ಕಂಡು [86ಗ]—ನಿನ್ನ ಚಿತ್ರಪಟವನ್ನು ತೆಗೆದುಕೊಂಡುಹೋಗಿ ಮಹಾಪೂತಜಿನಾಲಯದ ಮುಂದೆ ಇಡಲು [87] ಎಲ್ಲರೂ ಆಶ್ಚರ್ಯದಿಂದ ನೋಡುತ್ತಿದ್ದರು. [87ಗ] ಆಗ ಅಲ್ಲಿದ್ದ ವಾಸವದುರ್ದಂತರೆಂಬಿಬ್ಬರಲ್ಲಿ ವಾಸವನು [88] ಅದೆಲ್ಲಾ ತನ್ನವೃತ್ತವೆಂದು ಆಟವಾಡಿದನು [88ಗ] ದುರ್ದಂತನು ಅಶೋಕೋಪಚಾರವನ್ನು ಮಾಡಿದನು ಅದನ್ನೆಲ್ಲಾ ನೋಡಿ ನಾನು ಅಲ್ಲಿಗೆ ಹೋಗಿ [89] ಇದಕ್ಕೆ 'ಇಷ್ಟುಚಿಂತೆಯೇನು ? ಇದು ನಮ್ಮ ಮಗಳ ಪಟ. ಈಕೆಯಲ್ಲಿ ಪೂರ್ವಭವಾನುರಾಗವಿದ್ದರೆ ಒಂದೆರಡು ರಹಸ್ಯಗಳನ್ನು ಹೇಳಿ' ಎಂದೆನು. ಅವರು ಹೇಳಲಾರದೆ ನಾಚಿಕೊಂಡು ಓಡಿಹೋದರು [90ಗ] ಬಳಿಕ ಅಲ್ಲಿಗೆ ಒಬ್ಬ ರಾಜಕುಮಾರನು ಬಂದನು

---

## IV. ಆಶ್ವಾಸಂ. ಚಾರಣಯುಗಳದಾನೋತ್ಸವವರ್ಣನಂ.

ಆತನು [1] ಜಿನಭವನವನ್ನು ಮೂರುಸಲ ಪ್ರದಕ್ಷಿಣೆಮಾಡಿ [2] ತ್ರಿಕರಣಶುದ್ಧಿಯಿಂದ ಜಿನನನ್ನು ಸ್ತುತಿಸಿ ಅಕ್ಷತೆಯನ್ನು ಕೊಂಡು [3] ಅಲ್ಲಿಂದ ಹೊರಗೆ ಬಂದು ಇದಿರಲ್ಲಿ ನಿಂತಿದ್ದ ಗುಂಪನ್ನು ಕಂಡು [3ಗ] ಏನೆಂದು ನೋಡುವುದಕ್ಕಾಗಿ ಅಲ್ಲಿಗೆ ಬಂದು ಚಿತ್ರಪಟವನ್ನು ಕಂಡನು [4] ಅದನ್ನು ಹಾಗೆಯೇ ನೋಡುತ್ತಿರುವಾಗ [5]ಅವರಲ್ಲಿ ಲಿಖಿತವಾದ ವಿಷಯಗಳು ಪೂರ್ವಸಂಸ್ಕಾರವನ್ನು ಅವನ ನೆನಪಿಗೆ ತಂದುವು [5ಗ] ಒಡನೆ ಅವನು ಸುರಲೋಕಸುಖಗಳನ್ನು ನೆನೆದು [6] ಅದು ಶ್ರೀಪ್ರಭವೆಂದೂ[7]ಆ ಸ್ತ್ರೀ ಸ್ವಯಂಪ್ರಭೆಯೆಂದೂ ತಿಳಿದು [8-15] ನಾನಾವಿಧವಾದ ತನ್ನ ಪೂರ್ವದ ಸೌಖ್ಯಗಳನ್ನು ಹಂಬಲಿಸುತ್ತ [16] ಹಾ ! ಸ್ವಯಂಪ್ರಭೇ ! ಎಂದು ಕೂಗುತ್ತ ಮೂರ್ಛೆಹೋದನು [17] ಕೂಡಲೆ ಅವನ ಪರಿಜನರು ಶೀತಲೋಪಚಾರಮಾಡಿ ಅವನನ್ನು ಎಚ್ಚರಗೊಳಿಸಿದರು [17ಗ] ಆತನೆ ಲಲಿತಾಂಗದೇವನೆಂದು ತಿಳಿದು ನಾನು ಅವನ ಬಳಿಗೆ ಹೋಗಿ [18] ಈಗ ' ನನ್ನ ಪ್ರತಿಜ್ಞೆಯೂ ನೆರವೇರಿತು. ಶ್ರೀಮತೀ ವಜ್ರಜಂಘರ ರಾಗೋತ್ಸವವೂ ಸಫಲವಾಯಿತು ' ಎಂದು ಹೇಳಿದನು [18ಗ] ಅದು ಹೇಗೆಂದು ಆತನು ಕೇಳಿದನು [19–21ಗ] ನಾನು ನಿನ್ನ ಸಂಗತಿಯನ್ನೆಲ್ಲವನ್ನೂ ಸಮಗ್ರವಾಗಿ ತಿಳಿಸಿದೆನು. [22] ಎಲ್ಲವನ್ನೂ ಕೇಳಿ ಆತನು ನಿನ್ನ ಪಟವನ್ನು ತೆಗೆದುಕೊಂಡು ಈ ಪಟವನ್ನು ನಿನಗೆ ಕೊಡುವಂತೆ ಕಳುಹಿಸಿರುವನು, ಎಂದು ಸಾಭಿಜ್ಞಾನಪಟವನ್ನು ಕೊಟ್ಟಳು. ಶ್ರೀಮತಿ ಅದನ್ನು ತೆಗೆದುಕೊಂಡು ನೋಡಿ ನೋಡಿ [23] ಆನಂದಪರವಶಳಾಗಿದ್ದಳು.

ಆವೇಳೆಗೆ [23] ಶ್ರೀಮತೀವಜ್ರಜಂಘರ ಜನ್ಮಾಂತರಸ್ನೇಹವೂ ಚಿತ್ರಪಟವ್ಯತಿಹಾರವೂ ವಜ್ರಬಾಹುಮಹಾರಾಜನಿಗೆ ತಿಳಿಯಿತು. ಆತನು ತನ್ನ ಪುತ್ರನಿಗೆ ಆ ಕನ್ನಿಕೆಯನ್ನೇ ವಿವಾಹಮಾಡಬೇಕೆಂದು ನಿಶ್ಚಯಿಸಿಕೊಂಡು ಕನ್ಯಾರ್ಥಿಯಾಗಿ ಪುಂಡರೀಕಿಣಿಗೆ ಪ್ರಯಾಣಮಾಡಿದನು. [24]ಆ ಸಮಾಚಾರವನ್ನು ಕೇಳಿ ವಜ್ರದಂತನು ಇದಿರುಗೊಂಡುಹೋಗಿ [24ಗ-25ಗ] ಸನ್ಮಾನದಿಂದ ಒಡಗೊಂಡು ಬಂದು ಸತ್ಕರಿಸಿ ಬಳಿಕ ಬಂದಕಾರ್ಯವನ್ನು ಕೇಳಿದನು. [26] ' ನಮ್ಮ ವಜ್ರಜಂಘನಿಗೆ ನಿಮ್ಮ ಪುತ್ರಿಯನ್ನು ಕೊಟ್ಟು ವಿವಾಹಮಾಡಿಕೊಡಬೇಕೆಂದು ಪ್ರಾರ್ಥಿಸಲು ಬಂದೆನು ' ಎಂದು ಆತನು ಹೇಳಿದನು. ಆ ಅರ್ಥಕ್ಕೆ ವಜ್ರದಂತನೂ ಒಡಂಬಟ್ಟನು. ಕೂಡಲೆ ಜೋಯಿಸರನ್ನು ಕರೆಯಿಸಿ ಲಗ್ನವನ್ನು ನಿರ್ಣಯಿಸಹೇಳಿದನು ಆದೇ ಶುಭಮುಹೂರ್ತವೆಂದು ತಿಳಿಯಬಂದಿತು. ಒಡನೆ ವಿವಾಹಮಂಟಪವು [30ಗ-34] ಅಲಂಕೃತವಾಯಿತು [34-35] ದಾನಗಳೂ ಅನೇಕವಾಗಿ ನಡೆದುವು. ಬಳಿಕ [35ಗ–41]ವಜ್ರಜಂಘನಿಗೆ ಮಂಗಳಸ್ನಾನವನ್ನು ಮಾಡಿಸಿ ಅಲಂಕರಿಸಿದರು. ಶ್ರೀಮತಿಗೂ [41ಗ—47] ಮಂಗಳಸ್ನಾನವೂ ಮಂಗಳಪ್ರಸಾಧನವೂ ಸೌಭಾಗ್ಯವನ್ನು ಹೆಚ್ಚಿಸಿದುವು. ಆ ವಧೂವರರಿಬ್ಬರನ್ನೂ ಹಸೆ

ಯಲ್ಲಿ ಕುಳ್ಳಿರಿಸಿ [48] ವಜ್ರದಂತನು ಧಾರೆಯೆರೆದು ವಿವಾಹಪ್ರಸ್ತುತವನ್ನು ಬಹಳ ವಿಜೃಂಭಣೆಯಿಂದ ನಡೆಯಿಸಿದನು. ವಧೂವರರು ಸಂತೋಷವಾಗಿ ಅಲ್ಲಿಯೇ ಕೆಲವುಕಾಲ ಇರುತ್ತಿದ್ದರು

[53] ಬಳಿಕ ವಜ್ರಜಂಘನ ತಂಗಿಯಾದ ಸುಂದರಿಗೂ ಶ್ರೀಮತಿಯ ಸಹೋದರನಾದ ಅಮಿತತೇಜನಿಗೂ ಮದುವೆಯಾಯಿತು.

ಅನಂತರದಲ್ಲಿ ವಜ್ರದಂತನು ಮಗಳನ್ನು ಅಳಿಯನೊಡನೆ ಕಳುಹಿಸಿಕೊಡಲೆಂದು ಬಗೆದು (54 54) ಬೇಕಾದವಾಗಿ ಬಳುವಳಿಗಳನ್ನು ಕೊಟ್ಟು (55) ಅಳಿಯನಿಗೆ ಹಿತೋಕ್ತಿಯನ್ನೂ (56) ಮಗಳಿಗೆ ಬುದ್ಧಿವಾದವನ್ನೂ ಹೇಳಿ ಕಳುಹಿಸಿಕೊಟ್ಟನು.

[57] ಇತ್ತ ವಜ್ರಬಾಹುರಾಜನು ಮಗನನ್ನೂ ಸೊಸೆಯನ್ನೂ ಕರೆದುಕೊಂಡು [58] ಉತ್ಪಲಖೇಟವೆಂಬ ತನ್ನ ರಾಜಧಾನಿಗೆ ಬಂದು [ 59 ] ಪುರಪ್ರವೇಶವನ್ನು ಮಾಡಿದನು. ಶ್ರೀಮತೀ ವಜ್ರಜಂಘರು ತಮ್ಮ ರಾಜಮಂದಿರದಲ್ಲಿ ಸುಖವಾಗಿರುತ್ತಿದ್ದರು. ಕೆಲವು ಕಾಲಕ್ಕೆ ಶ್ರೀಮತಿ ಗರ್ಭವಾಗಿ 49 ಅವಳಿಮಕ್ಕಳನ್ನು ಪ್ರಸವಿಸಿದಳು.

ಹೀಗೆ ಇರುತ್ತಿರಲು [65] ಒಂದಾನೊಂದು ದಿವಸ ವಜ್ರಬಾಹು ಅರಮನೆಯ ಉಪ್ಪರಿಗೆಯಲ್ಲಿ ನಿಂತು ಗಗನವನ್ನು ನೋಡುತ್ತ ಅಲ್ಲಿ ಮನೋಹರಾಕೃತಿಯುಳ್ಳ ಒಂದು ಮೇಘವನ್ನು ಕಂಡನು; ಅದರಂತೆ ಒಂದು ಜಿನಮಂದಿರವನ್ನು ಕಟ್ಟಿಸಬೇಕೆಂಬ ಇಚ್ಛೆಯುಂಟಾಯಿತು ಆದುದರಿಂದ ಅದರಂತೆ ಚಿತ್ರವನ್ನು ಬರೆದಿಡಬೇಕೆಂದು [63] ಚಿತ್ರಫಲಕೆಯನ್ನೂ ಬಣ್ಣಿಗೆಯನ್ನೂ ತರಹೇಳಿ ಪರಿಜನರಿಗೆ ನಿಯಮಿಸಿದನು. ಅವರು ಅದನ್ನು ತರುವಷ್ಟರಲ್ಲಿ ಅದು ಕರಗಿ ಹೋಯಿತು. ಅದೇ [64-67] ಅವನಿಗೆ ವೈರಾಗ್ಯನಿಮಿತ್ತವಾಗಿ [ 67ಗ ] ಅವನು ವಜ್ರಜಂಘನಿಗೆ ರಾಜ್ಯವನ್ನು ಕೊಟ್ಟು [67ಗ] ನಿಜಪತ್ನಿಯೊಡನೆಯೂ ಪುತ್ರರೊಡನೆಯೂ [68] ಯಮಧರಮುನಿಗಳ ಪಾದಪದ್ಮದಲ್ಲಿ ಜಾತರೂಪಧರನಾಗಿ ಮೋಕ್ಷಕ್ಕೆ ನಡೆದನು

ಅತ್ತ [68ಗ] ವಜ್ರದಂತಚಕ್ರವರ್ತಿ ಒಂದುದಿವಸ ಸಿಂಹಾಸನಾರೂಢನಾಗಿದ್ದಾಗ [69] ಉದ್ಯಾನಪಾಲಕನು ಒಂದು ಮನೋಹರವಾದ ಹೊಂದಾವರೆಯನ್ನು ಕಾಣಿಕೆಯಾಗಿ ತಂದು ಒಪ್ಪಿಸಿದನು. ಅದನ್ನು ಚಕ್ರವರ್ತಿ ಕೈಯಲ್ಲಿ ಹಿಡಿದುಕೊಂಡು [70] ಅದರ ಪರಿಮಳವನ್ನು ಅಭಿನಂದಿಸಿ ಲೀಲೆಯಿಂದ ತಿರುಗಿಸುತ್ತಿದ್ದನು. ಆಗ [71] ಅದರೊಳಗಿನಿಂದ ಒಂದು ಮೃತವಾದ ತುಂಬಿ ಹೊರಗೆ ಬಿದ್ದಿತು. ಅದನ್ನು ನೋಡಿ ಆತನು ವಿಸ್ಮಯಪಟ್ಟು [72-74] ಈ ಭ್ರಮರವು ಘ್ರಾಣೇಂದ್ರಿಯವೊಂದಕ್ಕೆ ಸೋತು ಈ ದುರವಸ್ಥೆಗೆ ಬಂದಿತು ಅನೇಕೇಂದ್ರಿಯಗಳಿಗೆ ವಶರಾದ ನಮ್ಮಂಥವರ ಪಾಡೇನು ಎಂದು ಬಗೆದು [74-78] ವೈರಾಗ್ಯವನ್ನು ಅವಲಂಬಿ

ಸಿ [78ಗ] ಸಕಲಸಾಮ್ರಾಜ್ಯವನ್ನೂ ತನ್ನ ಅಗ್ರಪುತ್ರನಿಗೆ ಕೊಡಲುದ್ಯುಕ್ತನಾದನು. [79–80] ಅಗ್ರಪುತ್ರನು ರಾಜ್ಯವನ್ನು ಒಲ್ಲೆನೆಂದನು, ಅವನ ತಮ್ಮಂದಿರೂ ಅಂಗೀಕರಿಸದೆ ಹೋದರು. [81ಗ] ಬಳಿಕ ವಜ್ರದಂತನು ಅಮಿತತೇಜನ ಶಿಸುವಾದ ಪುಂಡರೀಕನೆಂಬ ಬಾಲಕನಿಗೆ ಪಟ್ಟವನ್ನು ಕಟ್ಟಿ ಯಶೋಧರಮುನೀಂದ್ರರ ಪಾದಪದ್ಮೋಪಾಂತದಲ್ಲಿ ಮೋಕ್ಷಲಕ್ಷ್ಮಿಯನ್ನು ವರಿಸಿದನು. ಲಕ್ಷ್ಮೀಮತಿಯೂ ಅನುಂಧರಿಯೂ ಪುಂಡರೀಕನನ್ನು ಪರಿಪಾಲಿಸುತ್ತಿದ್ದರು.

ಹೀಗೆ ರಾಜ್ಯವು [82ಗ] ಬಲನಾಯಕವಾಗಲು ಮಂಡಲಿಕರು ಕಪ್ಪವನ್ನೂ ಕೊಡದೆಯೂ ಆಟವಿಕರು ಅಡಗಿರದೆಯೂ ಪಾರ್ಷ್ಣಿಗ್ರಾಹಕರು ವಿರೋಧಿಗಳಾಗಿಯೂ ಪ್ರಬಲಿಸುತ್ತಿದ್ದರು. ಆಗ ಲಕ್ಷ್ಮೀಮತೀಮಹಾದೇವಿ ಮಂತ್ರಿಗಳೊಡನೆ ಆಲೋಚಿಸಿ ತನ್ನ ಅಳಿಯನಾದ ವಜ್ರಜಂಘನನ್ನು ಕರೆಯಕಳುಹಬೇಕೆಂದು ನಿಶ್ಚಯಿಸಿ [ 83 ] ಲೇಖನವನ್ನು ಬರೆಯಿಸಿ [84ಗ] ಉಪಾಯನಗಳೊಡನೆ ಕೊಟ್ಟು ಚಿಂತಾಗತಿ ಮನೋಗತಿಯೆಂಬ ವಿದ್ಯಾಧರದೂತರನ್ನು ಕಳುಹಿಸಿದಳು. ಅವರಿಬ್ಬರೂ ವಿಮಾನಾರೂಢರಾಗಿ ಹೊರಟು [86ಗ] ಉತ್ಪಲಖೇಟವನ್ನು ಸೇರಿ ವಜ್ರಜಂಘನನ್ನು ಕಂಡು ತಾವು ತಂದ ಲೇಖನವನ್ನೂ ಉಪಾಯನಗಳನ್ನೂ ಮುಂದೆ ಇಟ್ಟರು ಆತನು ಆ ಲೇಖನವನ್ನು ವಾಚಿಸಿ ನೋಡಿ ವಿಸ್ಮಯಾಕ್ರಾಂತನಾಗಿ [ 87-88ಗ ] ಚಕ್ರಿಯನ್ನೂ ತನ್ನಂದನರನ್ನೂ ಶ್ಲಾಘಿಸಿ ನಿಜಪತ್ನಿಯ ಬಳಿಗೆ ಬಂದು ಆ ಸಂಗತಿಯನ್ನು ಹೇಳಿದನು. ಅದನ್ನು ಕೇಳಿ ಅವಳು ಬಹಳವಾಗಿ ಶೋಕಿಸಿದಳು. ಉಪಚಾರೋಕ್ತಿಗಳಿಂದ ಅವಳ ದುಃಖವನ್ನು ಶಮನಮಾಡಿ [ 89ಗ ] ಅಲ್ಲಿಂದ ಬಂದು ಮಂತ್ರಿಗಳೊಡನೆ ಆಲೋಚಿಸಿ [90] ಪುಂಡರೀಕಿಣಿಗೆ ಪ್ರಯಾಣಮಾಡಬೇಕೆಂದು ನಿಶ್ಚಯಿಸಿದನು ಒಡನೆ ಸೈನ್ಯವು ಸಿದ್ಧವಾಯಿತು ಬಳಿಕ [91–92] ಸೈನ್ಯದೊಡನೆಯೂ ನಿಜಾಂತಃಪುರಸ್ತ್ರೀಯರೊಡನೆಯೂ ಹೊರಟು ಮಾರ್ಗದಲ್ಲಿ ಹೋಗುತ್ತ ಹೋಗುತ್ತ [93–95] ಮನೋಹರವಾದ ಒಂದು ಸರಸ್ಸನ್ನು ಕಂಡು ಅಲ್ಲಿ ಬೀಡು ಬಿಟ್ಟನು. [95ಗ] ಆಗ ಅಲ್ಲಿ ಧರ್ಮಪರಸಾಗರಸೇನರೆಂಬ ಗಗನಚಾರಣರು ಕಾಂತಾರಚರ್ಯಾಮಾರ್ಗದಲ್ಲಿ ಅವರ ಶಿಬಿರಕ್ಕೆ ಬಂದರು. ಅವರನ್ನು ಶ್ರೀಮತಿಯೂ ವಜ್ರಜಂಘನೂ ಇದಿರುಗೊಂಡು ನಿಲಿಸಿ ದಾನವನ್ನು ಕೊಟ್ಟರು [98-99] ಆದಾನಪ್ರಭಾವದಿಂದ ಪಂಚಾಶ್ಚರ್ಯವುಂಟಾಯಿತು.

## V ಆಶ್ವಾಸಂ. ಸುವಿಧಿಮಹಿಮೋತ್ಪತ್ತಿವರ್ಣನಂ.

ಅನಂತರ [1] ಚಕ್ರಿ ತನ್ನ ಪತ್ನಿಯೊಡನೆ ಪುನಃ ಮುನೀಶ್ವರಗಳ ಸಮೀಪಕ್ಕೆ ಹೋಗಿ ತಮಗೆ ಅವರಲ್ಲಿ ಪ್ರೀತಿಯುಂಟಾಗಲು ಕಾರಣವೇನೆಂದು ಕೇಳಿದನು. [2] ಆಗ ವೃದ್ಧ ಕಂಚುಕಿ—'ಇವರು ನಿಮ್ಮ ಮಕ್ಕಳೆಂದು' ಹೇಳಿದನು [2ಗ] ಅವನನ್ನು ಸುಮ್ಮನಿರಹೇಳಿ ಆ ಮುನಿಗಳ ಸಮೀಪದಲ್ಲಿ ಉಪಶಮಭಾವವನ್ನು ತಳೆದು ನೋಡುತ್ತಿದ್ದ

ಶಾರ್ದೂಲವರಾಹಗೋಲಾಂಗೋಲನಕುಲಂಗಳನ್ನು ನೋಡುತ್ತ ರಾಜನು ತನ್ನ ಮಂತ್ರಿ ಸೇನಾನಾಯಕ ಪುರೋಹಿತ ಶ್ರೇಷ್ಠಿಗಳ ಭವಾಳಿಯನ್ನು ಬೆಸಗೊಂಡನು. [3] ಅವರು ಇಂತೆಂದರು:—

[3] ಈ ಮತಿವರನು ಈ ಭವಕ್ಕೆ ಐದನೆಯ ಭವದಲ್ಲಿ ಜಂಬೂದ್ವೀಪದ ಪೂರ್ವ ವಿದೇಹದ ವತ್ಸಕಾವತಿಯ ಪ್ರತಿಬದ್ಧಪ್ರಭಾಕರೀಪುರದಲ್ಲಿ ಮತಿವೃದ್ಧನೆಂಬ ಅರಸಾಗಿ [4] ಮಹಾಲೋಭದಿಂದ ಸತ್ತು [5] ಹುಲಿಯಾಗಿ ಜನಿಸಿ ಒಂದು ಗಿರಿಯಲ್ಲಿದ್ದನು. ಪ್ರೀತಿವರ್ಧನನೆಂಬ ಆ ಮಂಡಲಾಧಿಪನು ದಿಗ್ವಿಜಯಮಾಡಿಕೊಂಡು ಸೇನಾಸಮೇತನಾಗಿ ಬಂದು ಆಪರ್ವತದ ಒಳಿಯಲ್ಲಿ ಬೀಡುಬಿಟ್ಟನು [6] ಆಗ ಉಂಟಾದ ಶುಭನಿಮಿತ್ತಗಳನ್ನು ನೋಡಿ ಆನೃಪನ ಪುರೋಹಿತನು ಋಷಿಗಳು ಚರ್ಯೆಗೆ ಬರುವರೆಂದೂ ಸುವರ್ಣಪ್ರಾಪ್ತಿಯಾಗುವುದೆಂದೂ ನುಡಿದನು. [7–10] ಆ ಋಷಿಗಳು ನಗರಪ್ರವೇಶಮಾಡದಂತೆ ಮಾರ್ಗದಲ್ಲಿ ನೀರು ಚೆಲ್ಲಿ ಸಮೃದ್ಧಿಯಾಗಿ ಪುಷ್ಪಗಳನ್ನು ಎರಚಿ ರಾಜನು ಋಷಿಗಳ ಆಗಮನವನ್ನು ನಿರೀಕ್ಷಿಸುತ್ತಿದ್ದನು. [10] ಬಳಿಕ ಒಂದು ತಿಂಗಳಿಗೆ ಪಿಹಿತಾಸ್ರವರೆಂಬ ಮುನಿ ಬಂದು ನೋಡಿ ಆ ಪುಷ್ಪಗಳನ್ನು ತುಳಿದರೆ ಜೀವಹಿಂಸೆಯಾಗುವುದೆಂದು ನಗರಮಾರ್ಗವನ್ನು ತೊರೆದು ರಾಜನ ಶಿಬಿರಕ್ಕೆ ಬಂದರು. [11] ರಾಜನು ಇದಿರುಗೊಂಡು ಹೋಗಿ ಅವರನ್ನು ನಿಲಿಸಿ ದಾನಮಾಡಿದನು. ಕೂಡಲೆ ಪಂಚಾಶ್ಚರ್ಯವಾಯಿತು. [11ಗ] ಆಗ ಆಪರ್ವತದಲ್ಲಿದ್ದ ಶಾರ್ದೂಲವು ಜಾತಿಸ್ಮರನಾಗಿ ಅಲ್ಲಿಗೆ ಬಂದು ಉಪಶಾಂತನಾಗಿದ್ದಿತು. ಮುನಿಪನು ಆಗಿರಿಯ ತಟದಲ್ಲಿದ್ದ ಸುವರ್ಣಪೂರ್ಣಕಟಾಹಗಳನ್ನು ತೋರಿಸಿದನು. [12] ಆ ಹುಲಿ ಹದಿನೆಂಟುದಿವಸ ವ್ರತಮಾಡಿ [13] ಸಮಾಧಿಯನ್ನು ಹೊಂದಿ ಈಶಾನಕಲ್ಪದಲ್ಲಿ ದಿವಾಕರವಿಮಾನದಲ್ಲಿ ದಿವಾಕರಪ್ರಭಾವನೆಂಬ ದೇವನಾಯಿತು. ಆ ಪ್ರೀತಿವರ್ಧನನು ಅಮೃತಪದವಿಯನ್ನು ಪಡೆದನು ಆತನ ಸೇನಾನಾಯಕನು ಪ್ರಭಾಕರನೆಂದೂ, ಮಂತ್ರಿ ಕನಕಪ್ರಭನೆಂದೂ, ಪುರೋಹಿತನು ಪ್ರಭಂಜನನೆಂದೂ, ಬೇರೆ ಬೇರೆ ವಿಮಾನಗಳಲ್ಲಿ ಜನಿಸಿ ನಿನ್ನ ಲಲಿತಾಂಗಜನ್ಮದಲ್ಲಿ ನಿನಗೆ ಪರಿವಾರದೇವರಾದರು. ಈ ಜನ್ಮದಲ್ಲಿ ಆ ಶಾರ್ದೂಲನೇ ಮತಿವರಮಂತ್ರಿಯಾಗಿಯೂ, ಆಪ್ರಭಾಕರನೇ ಸೇನಾನಾಯಕನಕಂಪನನಾಗಿಯೂ, ಆಕನಕಪ್ರಭನೇ ಪುರೋಹಿತನಾನಂದನಾಗಿಯೂ, ಆ ಪ್ರಭಂಜನನೇ ನಿಜಶ್ರೇಷ್ಠಿಧನಮಿತ್ರನಾಗಿಯೂ, ಆ ಸ್ವಯಂಪ್ರಭಾದೇವಿಯೇ ಶ್ರೀಮತಿಯಾಗಿಯೂ ಜನಿಸಿ ನಿನ್ನನ್ನು ಸೇರಿರುವರು ಆದುದರಿಂದ ಇವರಲ್ಲಿ ನಿನಗೆ ಮೈತ್ರಿ ಹೆಚ್ಚಾಯಿತು. ಮುಂದೆ ಈ ಭವಕ್ಕೆ ಎಂಟನೆಯ ಭವದಲ್ಲಿ ನೀನು ಭರತದಲ್ಲಿ ಆದಿತೀರ್ಥನಾಗುವ ಕಾಲದಲ್ಲಿ, ಶ್ರೀಮತಿ ಶ್ರೇಯಾಂಸನಾಗಿಯೂ ಉಳಿದವರು ನಿನ್ನ ಮಕ್ಕಳಾಗಿಯೂ ಹುಟ್ಟುವರು. [14] ಬಳಿಕ ಅಲ್ಲಿದ್ದ ಹುಲಿ, ಹಂದಿ, ಕೋಡಗ, ಮುಂಗುಸಿ—ಇವುಗಳ ಜನ್ಮವನ್ನು ಹೀಗೆಂದು ತಿಳಿಸಿದರು. [14ಗ] ಈ ಹುಲಿ ಪ್ರಾಗ್ಜನ್ಮದಲ್ಲಿ ಈದೇಶದ ಹಸ್ತಿನಾಪುರದಲ್ಲಿ ಉಗ್ರಸೇನನೆಂಬ ಹರದನಾಗಿ ಅಪ್ರತ್ಯಾಖ್ಯಾನಕ್ರೋಧದಿಂದ ತಿರ್ಯಗಾಯುಷ್ಯವನ್ನು ಪಡೆದು [15]

ಅರಸನ ಕೋಷ್ಠಾಗಾರದಲ್ಲಿ ಚೌರ್ಯಮಾಡಿದನು ರಾಜನು ಇವನನ್ನು ಹಿಡಿದು ತರಹೇಳಿ ದೂತಂಗೆ ಆಜ್ಞಾಪಿಸಲು, ಇವನು ಚಪೇಟಿಕಾಘಾತದಿಂದ ಸತ್ತು ಇಲ್ಲಿ ಹುಲಿಯಾಗಿ ಹುಟ್ಟಿದನು. ಈ ವರಾಹನು ಈ ರಾಜ್ಯದ ವಿಜಯಪುರದಲ್ಲಿ ವರಿಕಾಂತನೆಂಬ ರಾಜಪುತ್ರನಾಗಿ ಅಪ್ರತ್ಯಾಖ್ಯಾನಮಾನದಿಂದ ತಂದೆಗೆ ಅವಿನೀತನಾಗಿ [17] ಶಿಲೆಯಲ್ಲಿ ತಲೆಯನ್ನು ತಾಟಿಸಿ ಒಡೆದುಕೊಂಡು ಸತ್ತು ವರಾಹನಾದನು [17ಗ] ಈ ವಾನರನು ಪೂರ್ವಜನ್ಮದಲ್ಲಿ ಧಾನ್ಯಪುರದಲ್ಲಿ ನಾಗದತ್ತನೆಂಬ ವಣಿಜನಾಗಿ ಅಪ್ರತ್ಯಾಖ್ಯಾನಮಾಯೆಯಿಂದ[18]ತನ್ನ ಅನುಜೆಯ ಧನವನ್ನು ಅಪಹರಿಸಿ ಈ ಜನ್ಮದಲ್ಲಿ ಕಪಿಯಾದನು [18ಗ] ಈ ನಕುಲನು ಅಪ್ರತ್ಯಾಖ್ಯಾನಲೋಭದಿಂದ ಕಲ್ಲುಟಿಗನಾಗಿ, ರಾಜನಿಗಾಗಿ ಇಟ್ಟಿಗೆಗಳನ್ನು ಕೊಂಡುಕೊಳ್ಳುತ್ತ ಒಂದು ಇಟ್ಟಿಗೆಯನ್ನು ಒಡೆಸಿ ನೋಡಿ ಅದು ಸ್ವರ್ಣಮಯವಾಗಿರಲು ಪ್ರತಿದಿನವೂ ತನ್ನ ಸ್ವಂತಕ್ಕೆ ಇಟ್ಟಿಗೆಗಳನ್ನು ಕೊಂಡುಕೊಳ್ಳುತ್ತ ಇದ್ದನು ಒಂದು ದಿವಸ ತಾನು ಪರಸ್ಥಳಕ್ಕೆ ಹೋಗಬೇಕಾಗಿದ್ದುದರಿಂದ ತನ್ನ ಮಗನಿಗೆ ಇಟ್ಟಿಗೆಯನ್ನು ಕೊಂಡುಕೊಳ್ಳುವಂತೆ ಹೇಳಿ ಹೊರಟುಹೋದನು ಪುನಃ ಬಂದು ನೋಡುವಾಗ ಮಗನು ಕೊಂಡುಕೊಂಡಿರಲಿಲ್ಲ ಅದರಿಂದ ಕುಪಿತನಾಗಿ ಮಗನನ್ನು ಕೊಡಲಿಯಿಂದ ಹೊಡೆದು ಕೊಂದು ಅರಮನೆಯವರು ತನ್ನನ್ನು ಶಿಕ್ಷೆಮಾಡುವರೆಂದು ಭಯಪಟ್ಟು ತನ್ನ ಕಾಲುಗಳನ್ನೂ ಒಡೆದುಕೊಂಡನು. ಆದರೂ ರಾಜನು ಅವನನ್ನು ದಂಡಿಸಿದನು ಅಲ್ಲಿ ಸತ್ತು ಇದೋ ಇಲ್ಲಿ ಮುಂಗುಸಿಯಾಗಿದ್ದಾನೆ. ಇವರೆಲ್ಲರೂ ಮುಂದೆ ನಿನ್ನ ಉದರದಲ್ಲಿ ಜನಿಸುವರು

ಆ ತರುವಾಯ [20ಗ] ವಜ್ರಜಂಘನೂ ಶ್ರೀಮತಿಯೂ ಪಯಣಹೊರಟು ಪುಂಡರೀಕಿಣಿಗೆ ಬಂದು ಸೇರಿ, ಅಲ್ಲಿ ಬಂಧುಜನಗಳ ದುಃಖವನ್ನು ಸಮಾಧಾನಮಾಡಿ [21] ಸೋದರದಳಿಯನ ರಾಜ್ಯವನ್ನು ನಿಷ್ಕಂಟಕಮಾಡಿ ಮಂತ್ರಿಮಂಡಳಕ್ಕೆ ವಹಿಸಿ ನಿಜರಾಜಧಾನಿಗೆ ತೆರಳಿ ಬಂದು [22] ಸುಖದಿಂದಿರುತ್ತಿದ್ದರು [22ಗ] ಹೀಗೆ ಅನೇಕ ಸಂವತ್ಸರಗಳು ಕಳೆದು ಹೋದವು ಬಳಿಕ ಒಂದು ದಿವಸ ರಾತ್ರಿ ಶ್ರೀಮತೀವಜ್ರಜಂಘರು ಶಯ್ಯಾಗೃಹದಲ್ಲಿ ಮಲಗಿರುವಾಗ ಅಲ್ಲಿ ಧೂಪದ ಧೂಮವು ತುಂಬಿಕೊಂಡಿತು ಉಸಿರಾಡುವುದಕ್ಕೆ ಮಾರ್ಗವಿಲ್ಲದೆ ಅವರಿಬ್ಬರೂ ಮಲಗಿದ್ದಂತೆಯೇ ಮೃತರಾದರು. ಅದನ್ನು ಕೇಳಿ [27ಗ] ರಾಜ್ಯವೇ ಗೋಳಾಡಿತು. ಮಂತ್ರಿವರಾದಿಗಳು ಪುರಜನದ ದುಃಖವನ್ನು ಸಮಾಧಾನಮಾಡಿ ಆದಂಪತಿಗಳಿಗೆ ಉತ್ತರಕ್ರಿಯೆಗಳನ್ನು ನೆರವೇರಿಸಿ ಶ್ರೀಮತಿಯ ಪುತ್ರನಾದ ವಜ್ರಬಾಹುವಿಗೆ ರಾಜ್ಯಭಾರವನ್ನು ವಹಿಸಿ ತಾವು ತಪಸ್ಸಿಗೆ ಹೊರಟುಹೋಗಿ ಕೆಲವುಕಾಲ ತಪಸ್ಸುಮಾಡಿ ಜೀವಿತಾಂತ್ಯದಲ್ಲಿ ಪರಿಚ್ಯುತರಾದರು.

## (4) ಭೋಗಭೂಮಿಜಜನ್ಮಕಥೆ.

[28–30] ಭೋಗಭೂಮಿವರ್ಣನೆ [31-40] ದಶಾಂಗಕಲ್ಪವೃಕ್ಷವರ್ಣನೆ [41-42] ಭೋಗಭೂಮಿಜರ ವರ್ಣನೆ.—ಇತ್ತ ವಜ್ರಜಂಘ ಶ್ರೀಮತಿಗಳು ಪಾತ್ರ

ದಾನದ ಫಲದಿಂದ ಭೋಗಭೂಮಿಯಲ್ಲಿ ಅವತರಿಸಿದರು. ಆ ಸತಿಪತಿಗಳು ಅಲ್ಲಿ ಒಂದು ದಿವಸ [45] ಒಂದು ಮಾವಿನಮರದ ಸೌಂದರ್ಯವನ್ನು ನೋಡುತ್ತಿದ್ದರು. [45ಗ] ಆ ಕಾಲದಲ್ಲಿ ಅಂತರಿಕ್ಷದಲ್ಲಿ ಸೂರ್ಯಪ್ರಭನೆಂಬ ದೇವನ ವಿಮಾನವು ಹೋಗುತ್ತಿದ್ದಿತು. ಅದನ್ನು ಕಂಡು ಅವರಿಗೆ ಪೂರ್ವಜನ್ಮಸ್ಮರಣೆಯುಂಟಾಯಿತು. ಕೂಡಲೆ ಚಾರಣಯುಗಳವು ಇಳಿದುಬಂದಿತು. [46ಗ] ಆ ಯುಗಳನ್ನು ಉಪಚರಿಸಿ [47] ತಮಗೆ ಆ ಮುನಿಗಳಲ್ಲಿ ಪ್ರೀತಿಯುಂಟಾಗಲು ಕಾರಣವೇನೆಂದು ಅವರು ಪ್ರಶ್ನೆಮಾಡಿದರು. [47ಗ] ಅದಕ್ಕೆ ಆಗ್ರಮುನಿ ನಕ್ಕು 'ನೀನು ಮಹಾಬಲನಾಗಿದ್ದಂದು ನಾನು ನಿನಗೆ ಸಚಿವನಾಗಿದ್ದೆನು. ನಾನು ಸ್ವಯಂಬುದ್ಧನು. ನಿನ್ನ ವಿಯೋಗದಿಂದ ತಪಸ್ಸುಮಾಡಿ ಮಣಿಚೂಡಾಮರನಾಗಿ ಜನಿಸಿ ಬಳಿಕ ಈ ಜನ್ಮದಲ್ಲಿ ಪ್ರೀತಿಂಕರನಾದೆನು' ಎಂದು ತಿಳಿಸಿ [25-64] ಅವರಿಗೆ ಸಮ್ಯಗ್ದರ್ಶನಸ್ವರೂಪವನ್ನು ಬೋಧಿಸಿ ಗಗನಮಾರ್ಗಕ್ಕೆ ಹೊರಟುಹೋದನು. [65-69ಗ] ಅವರು ಆ ಗಗನಚಾರಣರ ಗುಣಗಳನ್ನು ಹೊಗಳಿ ತಾವು ಸಮ್ಯಗ್ದರ್ಶನದಲ್ಲಿ ನಿಂತು ಪಲ್ಯೋಪಮತ್ರಯಾಯುಷ್ಯಾವಸಾನದಲ್ಲಿ ಕ್ಷುತವಿಜೃಂಭಣವ್ಯಾಜದಿಂದ ಮೃತರಾದರು

## (5). ಶ್ರೀಧರ ಜನ್ಮಕಥೆ.

[70ಗ]. ಬಳಿಕ ವಜ್ರಜಂಘನು ಈಶಾನಕಲ್ಪದಲ್ಲಿ ಶ್ರೀಪ್ರಭವಿಮಾನದಲ್ಲಿ ಶ್ರೀಧರನೆಂಬ ದೇವನಾಗಿ ಹುಟ್ಟಿದನು. ಶ್ರೀಮತಿ ಸಮ್ಯಕ್ತ್ವಮಹಿಮೆಯಿಂದ ಸ್ತ್ರೀರೂಪವನ್ನು ಬಿಟ್ಟು ಸ್ವಯಂಪ್ರಭವಿಮಾನದಲ್ಲಿ ಸ್ವಯಂಪ್ರಭನೆಂಬ ಹೆಸರಿನಿಂದ ಜನಿಸಿ ಶ್ರೀಧರನಿಗೆ ಸಾಮಾನಿಕದೇವನಾದಳು. ಮಂತ್ರಿಯೇ ಮೊದಲಾದವರೂ ಬೇರೆ ಬೇರೆ ವಿಮಾನಗಳಲ್ಲಿ ಜನ್ಮವೆತ್ತಿದರು ಹೀಗಿರಲು ಒಂದು ದಿವಸ ಶ್ರೀಧರನು ಅವಧಿಬೋಧದಿಂದ ಪ್ರೀತಿಂಕರಾರ್ಯರ ಕೇವಲಜ್ಞಾನೋತ್ಪತ್ತಿಯನ್ನು ಅರಿತು ಉತ್ತುಂಗಶ್ರೀಪ್ರಭಾಚಲಕ್ಕೆ ಹೋಗಿ [72] ಅವರಿಗೆ ವಂದಿಸಿ [74] ತಾನು ಅಂಬರಚರನಾಗಿದ್ದ ಕಾಲದಲ್ಲಿ ತನಗೆ ಮಂತ್ರಿಗಳಾಗಿದ್ದ ಮೂವರ ಸ್ಥಿತಿಯನ್ನೂ ಕೇಳಿದನು. [76] ಅದಕ್ಕೆ ಅವರು—ಸಂಭಿನ್ನಮತಿ ನಿಗೋದವೆಂಬ ನರಕದಲ್ಲೂ [77] ಶತಮತಿ ದ್ವಿತೀಯನರಕದಲ್ಲೂ ಇರುವನೆಂದು ಹೇಳಿ ಬಳಿಕ [79-81] ಅಧರ್ಮಸ್ವರೂಪವನ್ನೂ [81ಗ-94] ನರಕಗಳ ಸ್ವರೂಪವನ್ನೂ ವಿವರಿಸಿ [94ಗ] ಶತಮತಿ ಘೋರನರಕದಲ್ಲಿರುವನೆಂದು ತಿಳಿಸಿದರು. ಅದನ್ನು ಕೇಳಿ ಶ್ರೀಧರನು ದುಃಖಿತನಾಗಿ ಅಲ್ಲಿಗೆ ಹೋಗಿ [98] ಶತಮತಿಗೆ ಸಮ್ಯಕ್ತ್ವವನ್ನು ಬೋಧಿಸಿದನು [96] ಅವನು ಅದನ್ನು ಧರಿಸಿ [97] ಬೇರೆ ಬೇರೆ ಜನ್ಮಗಳನ್ನು ಪಡೆದು ಕೊನೆಗೆ ಬ್ರಹ್ಮೇಂದ್ರನಾದನು. ಇತ್ತ ಶ್ರೀಧರನು ದಿವದಿಂದ ಪರಿಚ್ಯುತನಾಗಿ ಜಂಬೂದ್ವೀಪದ ಪೂರ್ವವಿದೇಹದ ವತ್ಸಕಾವತೀವಿಷಯದ ಸುಸೀಮಾನಗರವನ್ನು ಆಳುವ ಸುದೃಷ್ಟಿರಾಜನಿಗೂ ಸುನಂದೆಗೂ ಸುವಿಧಿಯೆಂಬ ಮಗನಾದನು

# VI. ಆಶ್ವಾಸಂ. ನಾಭಿರಾಜರಾಜ್ಯಲಾಭವರ್ಣನಂ.

## (6). ಸುವಿಧಿಜನ್ಮಕಥೆ.

[2] ಸುವಿಧಿ ತನ್ನ ತಂದೆಯ ಮಾತನ್ನು ಮೀರಲಾರದೆ ಅಭಯಘೋಷಚಕ್ರಿಯ ಮಗಳಾದ ಮನೋರಮೆಯನ್ನು ಮದುವೆಯಾಗಿ ರಾಜ್ಯಭಾರವನ್ನು ವಹಿಸಿದನು. [2ಗ] ಹಿಂದೆ ಶ್ರೀಮತಿಯಾಗಿದ್ದ ಸ್ವಯಂಪ್ರಭಾದೇವನು ದೇವಲೋಕದಿಂದಿಳಿದು [3] ಕೇಶವ ನೆಂಬ ಮಗನಾಗಿ ಹುಟ್ಟಿದನು. [3ಗ] ಇತರರೂ ಯಥಾಯೋಗ್ಯವಾಗಿ ಜನಿಸಿದರು. [4ಗ] ಒಂದುದಿವಸ ಅಭಯಘೋಷಚಕ್ರಿ ವಿಮಳವಾಹನಜಿನಚರಣವಂದನೆಗೆ ಹೋದನು. ಸುವಿಧಿಯೂ ತನ್ನ ಮಗನನ್ನು ಕರೆದುಕೊಂಡು ಅಲ್ಲಿಗೆ ಹೋದನು. ಚಕ್ರಿ ಧರ್ಮಾಮೃತರಸಾಸ್ವಾದನದಿಂದ [5] ವಿರಕ್ತನಾಗಿ ದೀಕ್ಷೆಯನ್ನು ವಹಿಸಿ ದನು. [6] ಸುವಿಧಿಯೂ ವೈರಾಗ್ಯವನ್ನು ಅವಲಂಬಿಸಿ ಉಪಾಸಕನಾಗಿ [7] ಪಂಚಾ ಣುವ್ರತಗಳನ್ನೂ [8] ಮೂರುಗುಣವ್ರತಗಳನ್ನೂ [9] ನಾಲ್ಕು ಶಿಕ್ಷಾವ್ರತಗಳ ನ್ನೂ [10–11] ಏಕಾದಶನಿಳಯವನ್ನೂ ಅಂಗೀಕರಿಸಿ ಚಾರಿತ್ರವ್ರತವನ್ನು ತಳೆದು [11ಗ] ಜೀವಿತಾವಸಾನದಲ್ಲಿ ಸಮಾಧಿವಿಧಿಯಿಂದ ಶರೀರಪರಿತ್ಯಾಗಮಾಡಿದನು

## (7). ಅಚ್ಯುತೇಂದ್ರ ಜನ್ಮಕಥೆ.

ಬಳಿಕ ಅಚ್ಯುತಕಲ್ಪದಲ್ಲಿ ಅಚ್ಯುತೇಂದ್ರನಾದನು. [12ಗ] ಕೇಶವನೂ ರಾಜ್ಯ ವನ್ನು ತೊರೆದು ಪ್ರತೀಂದ್ರನಾದನು. [13] ಇತರರೂ ತಕ್ಕ ತಕ್ಕ ಜನ್ಮಗಳನ್ನು ಪಡೆ ದರು. ಅಚ್ಯುತೇಂದ್ರನು [13-17] ದಿವ್ಯಭೋಗಗಳನ್ನು ಆಸ್ವಾದಿಸಿ ಆಯುರವ ಸಾನದಲ್ಲಿ [20] ಜಿನಪದಧ್ಯಾನಾಸಕ್ತಮನನಾಗಿ ಪರಿಚ್ಯುತನಾದನು.

## (8). ವಜ್ರನಾಭಿಜನ್ಮಕಥೆ

[21] ಬಳಿಕ ವಜ್ರನಾಭಿಯೆಂಬ ನಾಮದಿಂದ ಜಂಬೂದ್ವೀಪದ ಪ್ರಾಗ್ವಿದೇಹದ ಸೀತಾನದಿಯ ಬಡಗಣ ತಡಿಯ ಪುಷ್ಕಳಾವತೀವಿಷಯದ ಪ್ರತಿಬದ್ಧಪುಂಡರೀಕಿಣೀಪುರದ ವಜ್ರಸೇನವಿಭುವಿಗೂ ಶ್ರೀಕಾಂತೆಗೂ ಪುತ್ರನಾದನು. ಇವನಿಗೆ ಯೌವನೋದಯವಾ ಗಲು [24] ಪಟ್ಟಕ್ಕೆ ಯೋಗ್ಯನಾದನೆಂದು ಬಗೆದು ವಜ್ರಸೇನನು ಇವನಿಗೆ ರಾಜ್ಯವನ್ನು ಒಪ್ಪಿಸಿ ತಪಸ್ಸಿಗೆ ಹೋದನ. [26] ಕೆಲಕಾಲಕ್ಕೆ ವಜ್ರನಾಭಿಯೂ ವೈರಾಗ್ಯವನ್ನು ತಳೆದು [26ಗ] ನಿಜಾಗ್ರಸುತನಾದ ವಜ್ರದಂತನಿಗೆ ವಸುಂಧರಾಭಾರವನ್ನು ಕೊಟ್ಟು ನಿಜ ಗುರುಸಮೀಪದಲ್ಲಿ [27] ನಿಜದ ರೂಪವನ್ನೂ ನಿರ್ಗ್ರಂಥರೂಪವನ್ನೂ ವಹಿಸಿ [28ಗ] ಪಂಚಮಹಾವ್ರತಗಳನ್ನೂ [28] ಪಂಚಸಮಿತಿಯನ್ನೂ [29] ಗುಪ್ತಿತ್ರಯ ವನ್ನೂ [30-34ಗ] ಇತರ ತಪಸ್ಸುಗಳನ್ನೂ ಆಚರಿಸಿ ಶರೀರಪರಿತ್ಯಾಗಮಾಡಿದನು.

[ 34ಗ—42 ] ಸರ್ವಾರ್ಥಸಿದ್ಧಿಯವರ್ಣನೆ. [48] ಅಲ್ಲಿ ಅಹಮಿಂದ್ರನು ಸುಖವಾಗಿರುತ್ತಿದ್ದನು.

ಇತ್ತ ಜಂಬೂದ್ವೀಪದಲ್ಲಿ — [ 48ಗ ] ಕಾಲಸ್ವರೂಪಪ್ರಮಾಣಾದಿಗಳ ವರ್ಣನೆ. [ 49–51 ] ಜಘನ್ಯಭೋಗಭೂಮಿಯ ಚರಮಸ್ಥಿತಿವರ್ಣನೆ.—ಆಗ [51–ಗ52] ಸೂರ್ಯಚಂದ್ರಬಿಂಬಗಳು ಉದಿಸಿದುವು. [ 52ಗ ] ಅವುಗಳನ್ನು ಕಂಡು ಜನರು ಭೀತರಾದರು. [ 53 ] ಅವರ ಭಯವನ್ನು ಬಿಡಿಸಿ ಪ್ರತಿಶ್ರುತಿಯೆಂಬ ಮೊದಲನೆಯ ಮನು ಅವರನ್ನು ಸಂತೈಸಿದನು. [ 53ಗ ] ಸನ್ಮತಿಯೆಂಬ ಎರಡನೆಯ ಮನುವಿನ ಕಾಲದಲ್ಲಿ [ 54-55 ] ಉದಯಾಸ್ತಮಯಗಳೂ ನಕ್ಷತ್ರಗಳೂ ಉಂಟಾದುವು [56–56ಗ] ಬಳಿಕ ಮೂರನೆಯ ಮನುವಾದ ಕ್ಷೇಮಂಕರನು ದುಷ್ಟಮೃಗಗಳನ್ನು ವಶಮಾಡಿಕೊಳ್ಳುವ ಉಪಾಯಗಳನ್ನು ಕಲಿಸಿದನು. ಕ್ಷೇಮಂಧರನೆಂಬ ನಾಲ್ಕನೆಯ ಮನು ಲಕುಟಯಷ್ಟ್ಯಾದಿಗಳಿಂದ ಪಾಪಸತ್ತ್ವಗಳನ್ನು ಶಿಕ್ಷಿಸುವ ಉಪಾಯವನ್ನು ತಿಳಿಸಿದನು [ 57 ] ಸೀಮಾವಿವಾದವನ್ನು ನಿವಾರಿಸಿ ಐದನೆಯ ಮನು ಸೀಮಂಕರನಾದನು. [58] ಆಸ್ಫೋಟಶುದ್ಧಿಮಾಡಿ ಆರನೆಯ ಮನು ಸೀಮಂಧರನಾದನು. [58] ಏಳನೆಯ ಮನುವಾದ ವಿಮಳವಾಹನನು ವಾಹನಗಳನ್ನು ಕಲ್ಪಿಸಿದನು. [59] ಎಂಟನೆಯ ಮನುವಾದ ಚಕ್ಷುಷ್ಮಂತನು ಸುತಮುಖಕಮಳಾಲೋಕನಯುಕ್ತಿಯನ್ನು ಬೋಧಿಸಿದನು. [ 60 ] ಯಶಸ್ವಿ ಹೆಸರಿಡುವುದನ್ನು ಹೇಳಿಕೊಟ್ಟನು. [60ಗ] ಅಭಿಚಂದ್ರನು ಚಂದ್ರನನ್ನು ತೋರಿ ಮಕ್ಕಳಾಡಿಸುವುದನ್ನು ಉಪದೇಶಿಸಿದನು. [61] ಸೂರ್ಯಚಂದ್ರರು ಹಿಮದಿಂದ ಮರೆಯಾಗಲು ಭಯಪಟ್ಟ ಜನರನ್ನು ಭದ್ರಾಭನು ಸಂತೈಸಿದನು. [ 61ಗ—63 ] ಮರುದೇವನು ಸೋಪಾನಾದಿಗಳನ್ನು ಕಟ್ಟಿ ಗಿರಿದುರ್ಗಗಳನ್ನು ಹತ್ತುವ ಯುಕ್ತಿಯನ್ನೂ ದ್ರೋಣಿಯಾನಪಾತ್ರಾದಿಗಳಿಂದ ಜಲದುರ್ಗೋತ್ತರಣವನ್ನೂ ಕಲಿಸಿದನು. [65] ಪ್ರಸೇನಜಿತ್ತೆಂಬನು ಜರಾಯುಪಟಲವಿಮೋಚನಕ್ರಮವನ್ನು ಅರುಹಿದನು. [67] ಹದಿನಾಲ್ಕನೆಯ ಮನುವಾದ ನಾಭಿರಾಜನು ಅರ್ಭಕರ ನಾಭಿನಾಳಪ್ರಕರ್ತನೋಪಾಯವನ್ನು ವಿಶದೀಕರಿಸಿದನು. [67—70] ನಾಭಿರಾಜವರ್ಣನೆ. [71—72] ವೃಷ್ಟಿವರ್ಣನೆ. [73–78] ಮಳೆಯಿಂದ ವ್ರೀಹ್ಯಾದಿಗಳು ಬೆಳೆದರೂ ಕ್ಷುತ್ಪೀಡೆಯಿಂದ ನವೆಯುತ್ತಿದ್ದ ಜನರಿಗೆ ನಾಭಿ ಅವುಗಳ ಉಪಯೋಗವನ್ನು ಕಲಿಸಿಕೊಟ್ಟನು. ಈ ನಾಭಿರಾಜನಿಗೆ ಮರುದೇವಿಯೆಂಬ ಪತ್ನಿಯಿದ್ದಳು. [80] ಅವಳ ಸೌಂದರ್ಯವರ್ಣನೆ. [81–88] ಆದಂಪತಿಗಳ ಗರ್ಭದಲ್ಲಿ ತೀರ್ಥಕರಾವತಾರವಾಗುವುದೆಂದು ಇಂದ್ರನು [88ಗ] ಅಯೋಧ್ಯಾಪುರವನ್ನು ನಿರ್ಮಿಸಿದನು. [89-106]. ಪುರವರ್ಣನೆ. ಅಲ್ಲಿ ಮನೋಹರವಾದ ರಾಜಾಲಯದಲ್ಲಿ [107] ಅವರು ಪುರುದೇವನ ಅವತರಣವನ್ನು ನಿರೀಕ್ಷಿಸುತ್ತಿದ್ದರು.

ಪುತ್ರನಿಗೆ ವಿವಾಹವಮಾಡಬೇಕೆಂದು ಆಲೋಚಿಸಿ [8ಗ-15] ಅವನ ಬಳಿಗೆ ಹೋಗಿ ನಾನಾ ವಿಧವಾಗಿ ನೀತಿಯನ್ನು ಬೋಧಿಸಿ ಅವನನ್ನು ಅನುಮತಿಪಡಿಸಿದನು. [15ಗ-22] ಕೂಡಲೆ ಮದುವೆಯ ಮಂಟಪವು ಅಲಂಕೃತವಾಯಿತು. [22ಗ] ಬಹಳ ಸಂಭ್ರಮದೊಡನೆ ಯಶಸ್ವತಿಸುನಂದೆಯೆಂಬ ಕನ್ನಿಕೆಗಳನ್ನು ಮದುವೆ [23ಗ-25] ಯಾಗಿ ಅವರೊಡನೆ ಸಂಸಾರಸುಖವನ್ನು ಸೇವಿಸುತ್ತಿದ್ದನು. ಹೀಗೆ ಕೆಲವು ಕಾಲ ಕಳೆಯಲು ಯಶಸ್ವತಿ ಗರ್ಭಿಣಿಯಾದಳು. [31—33] ಗರ್ಭದೌಹೃದಾದಿ ವರ್ಣನೆ. [34] ಬಳಿಕ ನವಮಾಸ ತುಂಬಿ ಶುಭಮೂಹೂರ್ತದಲ್ಲಿ [34] ಪುತ್ರರತ್ನವನ್ನು ಹೆತ್ತಳು [35—36ಗ] ಜನ್ಮೋತ್ಸವವರ್ಣನೆ [37] ಆ ಮಗುವಿಗೆ ಭರತನೆಂದು ನಾಮಕರಣಮಾಡಿದರು [38—44.] ಕುಮಾರನ ಬಾಲಲೀಲಾದಿವರ್ಣನೆ. ಆಕೆ ಹೀಗೆಯೇ [44ಗ] ನೂರ್ವರು ಪುತ್ರರನ್ನೂ ಬ್ರಾಹ್ಮಿಯೆಂಬ ಪುತ್ರಿಯನ್ನೂ ಪಡೆದು [45] ಅಗ್ರಮಹಿಷೀಪದವನ್ನು ಅಲಂಕರಿಸಿದಳು. ಆಗಲೆ [45ಗ] ಸುನಂದಾದೇವಿಯೂ ಗರ್ಭಿಣಿಯಾದಳು. [46—48] ವರ್ಣನೆ. [49] ಬಳಿಕ ಸಕಾಲದಲ್ಲಿ ಒಂದು ಗಂಡುಮಗುವನ್ನು ಪಡೆದಳು. [50] ಜನ್ಮೋತ್ಸವದಲ್ಲಿ ಆಮಗುವಿಗೆ [50ಗ] ಬಾಹುಬಲಿಯೆಂದು ಹೆಸರಿಟ್ಟರು [50ಗ—53] ಆತನ ಶೈಶವಯವ್ವನಾದಿವರ್ಣನೆ [54] ಕೆಲವುಕಾಲಕ್ಕೆ ಅವನಿಗೆ ಸೌಂದರಿಯೆಂಬ ತಂಗಿ ಹುಟ್ಟಿದಳು. [54ಗ—55] ಭರತೇಶ್ವರನು ಆ ಮಕ್ಕಳನ್ನು ನೋಡಿ ಸಂತೋಷಿಸಿ ಅವರವರಿಗೆ ಉಚಿತವಾದ ಆಭರಣಾದಿಗಳನ್ನು ಕಲ್ಪಿಸಿಕೊಟ್ಟನು [55ಗ] ಒಂದಾನೊಂದುದಿವಸ ಭರತೇಶ್ವರನು ವಿದ್ಯೆಗಳನ್ನು ಉಪದೇಶಿಸಬೇಕೆಂದು ಆಲೋಚಿಸುತ್ತಿದ್ದ ಕಾಲದಲ್ಲಿ [56] ಪುತ್ರಿಯರಿಬ್ಬರೂ ಬಂದು ನಮಸ್ಕಾರಮಾಡಿದರು [57] ಅವರಿಬ್ಬರನ್ನೂ ತನ್ನ ತೊಡೆಯಲ್ಲಿ ಕುಳ್ಳಿರಿಸಿಕೊಂಡು [59—6ಗ] ಬ್ರಾಹ್ಮಿಗೆ ಸಿದ್ಧಂ ನಮಃ—ಎಂದು ತೋರಿಸಿ ಲಿಪಿಗಳನ್ನು ದಕ್ಷಿಣಹಸ್ತದಲ್ಲಿ ಉಪದೇಶಿಸಿದನು. [60] ಸೌಂದರಿಗೆ ಗಣಿತವನ್ನು ಎಡಗೈಯಲ್ಲಿ ಬರೆದು ತೋರಿಸಿ [60ಗ] ಸ್ವಾಯಂಭುವಾಭಿಧಾನ ಪದವಿದ್ಯಾಛಂದೋವಿಚಿತ್ರ್ಯಲಂಕಾರಗಳೆಂಬಿವೇ ಮೊದಲಾದ ಸಮಸ್ತವಿದ್ಯೆಗಳನ್ನೂ ಬೋಧಿಸಿ ಇಬ್ಬರನ್ನೂ ವಿದ್ಯಾಪರಿಪೂರ್ಣೆಯರನ್ನು ಮಾಡಿದನು. ಬಳಿಕ ಉಳಿದ ಗಂಡುಮಕ್ಕಳಿಗೆ ಭರತ ಅರ್ಥಶಾಸ್ತ್ರ ಗಾಂಧರ್ವಶಾಸ್ತ್ರ ಮೊದಲಾದ ಲೋಕೋಪಕಾರಿಗಳಾದ ಶಾಸ್ತ್ರಗಳನ್ನು ಉಪದೇಶಿಸಿ ಸುಖದಿಂದಿರುತ್ತಿದ್ದನು. [61] ಹೀಗೆಯೇ ಆತನಿ ಇಪ್ಪತ್ತುಲಕ್ಷ ಪೂರ್ವಕಾಲಗಳು ಕಳೆದುಹೋದುವು [61ಗ] ಆಪ್ರಸ್ತಾವದಲ್ಲಿ ಪೈರು ಪಕ್ಕೆಗಳು ವಿರಳವಾಗಿ ಜನರು ಆಧಿವ್ಯಾಧಿಗಳಿಂದ ಸಂಕಟಪಡುತ್ತ [62] ಅವನ ಬಳಿಗೆ ಬಂದು ಶರಣಾಗತರಾದರು [62ಗ] ಅವರಿಗೆ ಅಭಯವನ್ನು ಕೊಟ್ಟು ಇಂದ್ರನನ್ನು ಬರಿಸಿ [63ಗ] ಕ್ಷೇತ್ರವಿಭಾಗಗಳನ್ನು ದೇಶವಿಭಾಗಗಳನ್ನೂ ಪಶ್ವಾದಿಗಳನ್ನು ವಶಮಾಡಿಕೊಳ್ಳುವ ಉಪಾಯಗಳನ್ನೂ ಉಪಯೋಗಕರವಾದ ಅನೇಕವಿದ್ಯೆಗಳನ್ನೂ ಕಲಿಸಿದನು [64] ಬಳಿಕ ಆದಿಬ್ರಹ್ಮನು ಅಸಿಮಷಿಕೃಷಿಗಳನ್ನು ಕಲ್ಪಿಸಿ ತಾನು ಪಡೆದ ಕ್ಷತ್ರಿ

ಯ ವಣಿಕ್ಛೂದ್ರರೆಂಬ ಮೂರುವರ್ಣಗಳಲ್ಲಿ ಕ್ಷತ್ರಿಯರಿಗೆ ಶಸ್ತ್ರಕರ್ಮವನ್ನೂ ವಣಿಗ್ವಂಶಕ್ಕೆ ಪಾಶುಪಾಲ್ಯಕೃಷಿಪಣ್ಯಕರ್ಮಗಳನ್ನೂ ಸ್ಪೃಶ್ಯಾಸ್ಪೃಶ್ಯಕಾರುಗಳೆಂಬೆರಡುವಿಧದ ಶೂದ್ರರಿಗೆ ಶುಶ್ರೂಷಾನಿಯೋಗವನ್ನೂ ಉಪದೇಶಿಸಿ ವರ್ಣಸಂಕರವಾಗಲೀಯದೆ ತಮ್ಮತಮ್ಮ ಜಾತಿಗಳಲ್ಲಿ ನಂಟನ್ನೂ ಹೆಣ್ಣುತರುವ ಕೊಡುವ ಬಳಕೆಯನ್ನೂ ನಿಯೋಜಿಸಿದನು. [66] ಇದು ಭಗವತ್ಕೃತವಾದುದರಿಂದ ಇದಕ್ಕೆ ಕೃತಯುಗವೆಂಬ ಹೆಸರಾಯಿತು. [66ಗ—71] ಬಳಿಕ ಇಂದ್ರಾದಿಗಳು ಆದಿಬ್ರಹ್ಮನಿಗೆ ರಾಜ್ಯಾಭಿಷೇಕವನ್ನು ಮಾಡಿದರು. ಆಗ [72ಗ] ಆದಿಬ್ರಹ್ಮನು ಹಿಂದೆ ತಾನು ಪಡೆದ ವರ್ಣತ್ರಯಕ್ಕೂ ಮುಂದೆ ಭರತನಿಂದ ಉಂಟಾಗುವ ವಿಪ್ರವರ್ಣಕ್ಕೂ ಯಥೋಚಿತವೃತ್ತಿಗಳನ್ನು ತಿಳಿಸಬೇಕೆಂದು ಬಗೆದು [ 73 ] ಈ ಮತಗಳು ತಮ್ಮ ತಮ್ಮ ಕಾರ್ಯದಿಂದ ಉಂಟಾದುವೆಂದು ತಿಳಿಸಿ [73ಗ] ದ್ವಿಜನ್ಮವರ್ಣಕ್ಕೆ ಅಧ್ಯಯನಾಧ್ಯಾಪನದಾನಪ್ರತಿಗ್ರಹಯಜನಯಾಜನವಿಶಿಷ್ಟವೃತ್ತಿಯನ್ನೂ ಕ್ಷತ್ರಿಯಜಾತಿಗೆ ಸತ್ಯತ್ಯಾಗಪ್ರಜಾಪಾಲನಶರಣಾಗತರಕ್ಷಣಾಪ್ರಹರಣಕ್ಷಮಾದಿಗುಣಾಚರಣವನ್ನೂ, ವಣಿಗ್ವಂಶಕ್ಕೆ ಜಳಸ್ಥಳಯಾತ್ರಾಸಂವೃತಮರ್ಘಪ್ರವರ್ತನವನ್ನೂ ಶೂದ್ರಾನ್ವಯಕ್ಕೆ ಬ್ರಾಹ್ಮಣಾದಿವರ್ಣತ್ರಯಕ್ಕೂ ಶುಶ್ರೂಷಾನ್ವಿತಕರ್ಮಕರಣೋಪಜೀವನವನ್ನೂ ಕಲ್ಪಿಸಿ [ 74 ] ಇದಕ್ಕೆ ವ್ಯತಿರಿಕ್ತವಾಗಿ ನಡೆದವರಿಗೆ ದಂಡನೆಯನ್ನು ನಿಯಮಿಸಿ [73ಗ] ದಂಡಧರರಿಲ್ಲದಿದ್ದರೆ ಜನರು ಸ್ವಚ್ಛಂದವಾಗಿ ನಡೆವರೆಂದು ತಿಳಿದು ಅವರನ್ನು ನಿಯಮಿಸುವುದಕ್ಕಾಗಿ ಕುರುವಂಶ, ಹರಿವಂಶ, ನಾಥವಂಶ, ಉಗ್ರವಂಶವೆಂಬ ರಾಜವಂಶಗಳನ್ನೂ ನಿಯಮಿಸಿದನು ಹೀಗೆ ಅರುವತ್ತುಮೂರುಲಕ್ಷ ಪೂರ್ವಕಾಲರಾಜ್ಯವಾಳಿ ಕರ್ಮಭೂಮಿಪ್ರಸರಕ್ಕೆ ಆದಿಯಾಗಿ ಸಾಕೇತಸಿಂಹಾಸನಾಸೀನನಾಗಿರುತ್ತಿದ್ದನು.

## IX. ಪರಿನಿಷ್ಕ್ರಮಣಕಲ್ಯಾಣವರ್ಣನಂ.

ಆದಿಬ್ರಹನು ಒಂದಾನೊಂದುದಿವಸ [2-6] ಒಡ್ಡೋಲಗದಲ್ಲಿ [7—8] ಸಿಂಹಾಸೀನನಾಗಿರುವಾಗ [8ಗ] ಇಂದ್ರನು — ಆದಿದೇವನ ಪರಿನಿಷ್ಕ್ರಮಣಕಲ್ಯಾಣವು ಅತ್ಯಾಸನ್ನವೆಂದು ನಿಜಾವಧಿಬೋಧದಿಂದರಿದು ಸಂಗೀತಪ್ರಸಂಗದಿಂದ ಆರಾಧಿಸಲೆಂದು ಅಲ್ಲಿಗೆ ಬಂದನು. [9—3] ಅಲ್ಲಿ ಅನುಮತಿಯನ್ನು ಪಡೆದು [14—15] ಗೀತದಿಂದ ಉಪಚರಿಸಿದನು. ಬಳಿಕ [18—40] ನೀಲಾಂಜನೆಯ ನಾಟ್ಯವು ಆನಂದವನ್ನುಂಟುಮಾಡುತ್ತಿದ್ದಿತು. [ 41 ] ಆಕೆ ನೃತ್ಯವಾಡುತ್ತ ಆಡುತ್ತ ಆಯುರವಸಾನವಾಗಲು ಹಾಗೆಯೇ ಅದೃಶ್ಯವಾದಳು. [ 43 ] ರಸಭಂಗವಾಗದಂತೆ ಇಂದ್ರನು ಆರಿಗೂ ತಿಳಿಯದಂತೆ ಪಾತ್ರಾಂತರವನ್ನು ನಿಯೋಜಿದನು. ಆದರೂ ಆದಿದೇವನು ಅದನ್ನು ತಿಳಿದು [ 34—60ಗ ] ದೇಹಾನಿತ್ಯತೆಯನ್ನು ಭಾವಿಸಿ ಮುಕ್ತಿಕಾಂತಾವರನಾಗಲ ಬಯಸಿದನು. [70ಗ—73] ಆವೇಳೆಗೆ ಲೋಕಾಂತಿಕದೇವರು ಬಂದು ' ನೀನು ಧರ್ಮ

ವನ್ನು ವಿಶದಮಾಡಬೇಕು’-ಎಂದು ಪ್ರತಿಬೋಧಿಸಿದರು. [63ಗ] ಬಳಿಕ ಇಂದ್ರನು ಪರಿವಾರಸಮೇತನಾಗಿ ಬಂದು ಅಭಿಷೇಕಮಾಡಿದನು ಪರಮನು ಭರತರಾಜನನ್ನು ಬರಿಸಿ ರಾಜ್ಯಾಭಿಷೇಕಮಾಡಿ [65] ಬಾಹುಬಲಿಗೆ ಯುವರಾಜ್ಯಪದವಿಯನ್ನು ಕೊಟ್ಟು. ಅಯೋಧ್ಯಾಪತ್ತನದಲ್ಲೂ ಪೌದನಪುರದಲ್ಲೂ ಅವರನ್ನು ನಿಲ್ಲಿಸಿದನು [66—72] ವರ್ಣನೆ. [72ಗ] ಬಳಿಕ ಉಳಿದಮಕ್ಕಳಿಗೂ ಯಥಾಯೋಗ್ಯವಾಗಿ ರಾಜ್ಯವನ್ನು ವಿಭಾಗಮಾಡಿ ಕೊಟ್ಟು, ನಾಭಿರಾಜಾದಿಗಳನ್ನು ಬೀಳ್ಕೊಂಡು ಸೌಧರ್ಮೇಂದ್ರಹಸ್ತವನ್ನು ಅವಲಂಬಿಸಿ ಶಿಬಿಕೆಯನ್ನು ಹತ್ತಿದನು ಅದನ್ನು ಕಂಡು ಪ್ರಜೆಗಳು [74—75] ದುಃಖಪಟ್ಟರು. [76] ಯಶಸ್ವಿಯೂ ಸುನಂದೆಯೂ ಹಿಂದೆಯೇ ಅಳುತ್ತ ಹೋದರು. ಅವರನ್ನು ಅಂತಃಪುರವೃದ್ಧರು ಸಮಾಧಾನಪಡಿಸಿ ಹಿಂದಕ್ಕೆ ಕರೆದುಕೊಂಡುಹೋದರು. ಭರತಾದಿಗಳು ಮಾತ್ರ ಸಂಗಡಲೇ ಹೋದರು. ಇತ್ತ ಇಂದ್ರಾದಿಗಳು ಶಿಬಿಕೆಯನ್ನು ಹೊತ್ತುಕೊಂಡು ಅಯೋಧ್ಯಾಪುರದ ಸಮೀಪದ ಸಿದ್ಧಾರ್ಥವನದ ನಡುವಣ ಚಂದ್ರಶಿಲಾತಳದಲ್ಲಿ ಇಳಿಸಿದರು. ಅಲ್ಲಿ ಪರಮನು ಪೂರ್ವಾಭಿಮುಖವಾಗಿ ಪಲ್ಯಂಕಾಸನದಲ್ಲಿದ್ದು [77] ಕೇಶವನ್ನು ಪರಿದು [79] ದೀಕ್ಷೆಯನ್ನು ಕೈಕೊಂಡನು. ಬಳಿಕ ಇಂದ್ರನು ಪರಿನಿಷ್ಕ್ರಮಣಕಲ್ಯಾಣವನ್ನು ನೆರವೇರಿಸಿ ಪೂಜೆಯನ್ನು ಮಾಡಿ ತನ್ನ ನೆಲೆಗೆ ಹೊರಟುಹೋದನು. ಭರತನೂ ತನ್ನ ರಾಜಧಾನಿಗೆ ಹೋದನು. ಆದರೆ ಕಚ್ಛಮಹಾಕಚ್ಛರೂ ಭರತನ ಮಗನಾದ ಮರೀಚಿಯೇ ಮೊದಲಾದ ನಾಲ್ಕುಸಾವಿರ ರಾಜಪುತ್ರರೂ ಹೋಗಲೊಲ್ಲದೆ [81] ಜಾತರೂಪವನ್ನು ಅಂಗೀಕರಿಸಿದರು. [82—88] ಪರಮನ ತಪೋವರ್ಣನ ಹಾಗೆ ಆದಿಬ್ರಹ್ಮನು ತಪಸ್ಸುಮಾಡುತ್ತಿರಲು [88ಗ] ಕಚ್ಛಪಾದಿಗಳು ಕ್ಷುತ್ಪಿಪಾಸಾದಿಪರೀಷಹಗಳನ್ನು ಸೈರಿಸಲಾರದೆ [92ಗ] ಬಿಟ್ಟುಹೋದರೆ ಭರತನು ಅಪಮಾನಮಾಡುವನೆಂದಂಜಿ ಹೋಗಲೂ ಆರದೆ [93ಗ] ಬೇರೆಬೇರೆ ವೇಷಧಾರಿಗಳಾಗಿ ಕೌಪೀನಧಾರಿಗಳೂ, ಭಸ್ಮೋದ್ಧೂಳಿತಾಂಗರೂ, ಜಟಾಧರರೂ ಆಗಿ ವನಪ್ರವೇಶಮಾಡಿ ಫಲಾಶಿಗಳಾಗಿದ್ದರು. ಆಗ ಮರೀಚಿ ಪರಿಗೃಹೀತಪರಿವ್ರಾಜಕನಾಗಿ ಅಪಸಿದ್ಧಾಂತಭಾಷಿತಗಳಿಂದ ಮಿಥ್ಯಾತ್ವವನ್ನು ವೃದ್ಧಿಮಾಡಿ ತಾನು ಉಪನ್ಯಾಸಮಾಡಿದ ಕಾಪಿಳಸಿದ್ಧಾಂತವನ್ನೂ ಯೋಗಶಾಸ್ತ್ರವನ್ನೂ ತೋರಿಸಿ ಲೋಕವು ಸಮ್ಯಜ್ಞಾನಪರಾಙ್ಮುಖವಾಗುವಂತೆ ಮಾಡಿದನು. ಇತ್ತ ಆದಿತೀರ್ಥಕರನು ಇನ್ನೂ ತಪಸ್ಸಿನಲ್ಲೇ ಇದ್ದನು [94-96] ಅವನ ವರ್ಣನೆ—[97] ತಪೋಮಹಿಮೆಯು ವರ್ಣನೆ. [97ಗ] ಆಕಾಲದಲ್ಲಿ ಅಲ್ಲಿಗೆ ಕಚ್ಛಮಹಾಕಚ್ಛರ ಮಕ್ಕಳಾದ ನಮಿವಿನಮಿಗಳು ಬಂದು ಆದಿಪುರುಷನಿಗೆ ವಂದಿಸಿ [98—99] ತಮಗೂ ಭೂಭಾಗವನ್ನು ಕೊಡಿಸಿಕೊಡಬೇಕೆಂದು ಕಾಡಿ ಯೋಗವ್ಯಾಘಾತವನ್ನು ಮಾಡಿದರು [99ಗ] ಅದನ್ನು ತಿಳಿದು ಧರಣೇಂದ್ರನು ಬಂದು [101—104] ತಪೋವಿಘ್ನಮಾಡಬೇಡವೆಂದು ನಮಿವಿನಮಿಗಳಿಗೆ ಎಷ್ಟೋಬಗೆಯಾಗಿ ಹೇಳಿದನು. ಆದರೂ ಅವರು ಕೇಳಲೊಲ್ಲದೆ ಧರಣೇಂದ್ರನನ್ನೇ [105—109] ಧಿಕ್ಕರಿಸಿದರು. [110—111] ಆಗ ಅವನು ನಿಜರೂಪದಿಂದ ಅವರಿಗೆ ಪ್ರತ್ಯಕ್ಷವಾಗಿ ಬೋ

ಧಿಸಿದನು. ಆದರೂ ಅವರು ಕೇಳದಿರಲು [112] ವಿಕ್ರಿಯೆಯಿಂದ ಪರಮನೇ ಬೆಸಸುವಹಾಗೆ ಮಾಡಿ ಆವರನ್ನು ಕಳುಹಿಸಿ [112ಗ] ಬಳಿಕ ಪರಮನನ್ನು ನಿಜವಿಮಾನದಲ್ಲಿ ಕುಳ್ಳಿರಿಸಿ ರಜತಾಚಲಕ್ಕೆ ಕರೆದುಕೊಂಡು ಹೋದನು. [113—121] ರಜತಾಚಲವರ್ಣನೆ [121ಗ] ಅಲ್ಲಿ ಅವರನ್ನು ಬಿಟ್ಟು [122ಗ] ನಿಜಲೋಕಕ್ಕೆ ಹೊರಟುಹೋದನು. [123] ಆದಿಭಟ್ಟಾರಕರು ಅಲ್ಲಿ ಆರುತಿಂಗಳು ತಪಸ್ಸುಮಾಡಿ [124ಗ] ಚರ್ಯಾಮಾರ್ಗದಲ್ಲಿ ನಡೆದು ಜನಪದಗಳಲ್ಲಿ ತಿರುಗಿ ಆರುತಿಂಗಳುಕಳೆದು [129ಗ] ಕುರುಜಾಂಗಳದ ಹಸ್ತಿನಾಪುರಕ್ಕೆ ಬಂದರು. ಆಪುರದ ರಾಜಪುತ್ರನಾದ ಶ್ರೇಯಾಂಸನು ಇವರ ಆಗಮನವನ್ನು ಸ್ವಪ್ನದಿಂದರಿತು ಇದಿರುಗೊಂಡು ಹೋಗಿ ಅವರನ್ನು ನಿಲಿಸಿದನು.

## X. ಕೇವಲಜ್ಞಾನೋತ್ಪತ್ತಿ ವರ್ಣನಂ.

ಹಾಗೆ ನಿಲಿಸಿ [1ಗ] ಭಕ್ತಿಯಿಂದ ಅವರ ಪಾಣಿಪುಟದಲ್ಲಿ ಕಬ್ಬಿನ ಹಾಲನ್ನು ಎರೆದನು. [2–4] ಕೂಡಲೆ ಪಂಚಾಶ್ಚರ್ಯಗಳು ಉಂಟಾದುವು. ಅದಾದಮೇಲೆ [4ಗ] ಆಕಬ್ಬಿನ ಹಾಲಿನಿಂದ ಅವರು ಕಾಯಸ್ಥಿತಿಯನ್ನು ನಿರ್ವರ್ತಿಸಿ [6] ಆರಾಜಪುತ್ರನನ್ನು ಆಶೀರ್ವದಿಸಿ ಹೊರಟು ಹೋದರು [7ಗ] ಈಸಮಾಚಾರವನ್ನು ಭರತೇಶ್ವರಾದಿಗಳು ಕೇಳಿ ಅಲ್ಲಿಗ ಬಂದು ಆರಾಜಪುತ್ರನೇ ಧನ್ಯನೆಂದು ಅವನನ್ನು ಪೂಜಿಸಿದರು [8ಗ–13] ಅವನು ದಾನದ ಮಹಿಮೆಯನ್ನು ವಿಸ್ತರಿಸಿದನು. [13] ಇತ್ತ ವೃಷಭಯೋಗೀಂದ್ರನು ಜಿನಕಲ್ಪವೆಂಬ ಆಚರಣವನ್ನು ಅಂಗೀಕರಿಸಿ ಯೋಗಯೋಗ್ಯಸ್ಥಳಗಳಲ್ಲಿ ವಿಹರಿಸುತ್ತ ಸಂವತ್ಸರಸಹಸ್ರವನ್ನು ಕಳೆದ ಪುರಿಮತಾಳಪುರದ ಬಹಿರ್ಭಾಗನಿಕಟೋದ್ಯಾನದ ವಟವಿಟಪಿಯ ಕೆಳಗೆ ಪೂರ್ವಾನುಮುಖನಾಗಿ ಪಲ್ಯಂಕಾಸನದಲ್ಲಿ [14] ತಪಸ್ಸನ್ನು ಕೈಕೊಂಡನು [14ಗ] ತಪೋಭೇದಾದಿನಿರೂಪಣ. [ 4] ಮೊದಲು ಕೈವಲ್ಯಲಕ್ಷ್ಮಿಯೂ ಬಳಿಕ [15—16) ಕೇವಲಜ್ಞಾನವೂ ಉಂಟಾದುವು. [17ಗ] ಆಗ ಸೌಧರ್ಮೇಂದ್ರನು ಇಂದ್ರಾಣಿಯೊಡನೆ ಅಲ್ಲಿಗೆ ಬಂದನು. [18—20] ತದಾಗಮನವರ್ಣನೆ. ಬಂದು [21ಗ] ತನ್ನ ಆಜ್ಞಾನುಸಾರವಾಗಿ ಹಿಂದೆಯೇ ಧನದನು ನಿರ್ಮಿಸಿದ್ದ ಸಮವಸರಣವನ್ನು ನೋಡಿದನು. [21ಗ—44.] ಸಮವಸರಣವರ್ಣನೆ. ನೋಡಿ ಅದರಲ್ಲಿದ್ದ ಗಂಧಕುಟಿಯನ್ನು ಮೂರುಪ್ರದಕ್ಷಿಣೆಮಾಡಿ ನಮಸ್ಕರಿಸಿ [45—46] ಅರ್ಚಿಸಿದನು. [46ಗ] ಆಗ ಪುರಿಮತಾಳಪುರಾಧೀಶ್ವರನು ಬಂದು ವೃಷಭೇಶ್ವರನನ್ನು ಪೂಜಿಸಿ [47ಗ] ದೀಕ್ಷೆಯನ್ನು ವಹಿಸಿ ಪ್ರಥಮಗಣಧರನಾದನು. ಈಸಮಾಚಾರವೂ ಪುತ್ರಜನನದ ಸಂಗತಿಯೂ ಚಕ್ರರತ್ನೋತ್ಪತ್ತಿಯ ವೃತ್ತಾಂತವೂ, ಭರತನಬಳಿಗೆ ಏಕಕಾಲದಲ್ಲಿ ಬಂದುವು. ಭರತನು ಗುರುಪೂಜೆಯೇ ಪ್ರಥಮಕಾರ್ಯವೆಂದು ಬಗೆದು ಅಯೋಧ್ಯೆಯಿಂದ [50—50ಗ] ಪರಿಜನದೊ

ಡನೆ ಬಂದು ಪರಮನನ್ನು ಅರ್ಚಿಸಿ [51—59] ನಾನಾವಿಧವಾಗಿ ಸ್ತುತಿಸಿ [59ಗ] ನಿಜೋಚಿತಸ್ಥಾನದಲ್ಲಿ ಕುಳಿತುಕೊಂಡು [60] ಅಖಿಳವಸ್ತುಸ್ಥಿತಿಯನ್ನು ಬೆಸಗೊಂಡ ನು [61ಗ] ಆಯೋಗೀಂದ್ರನು ಎಲ್ಲವನ್ನೂ ಸಂಕ್ಷೇಪವಾಗಿ ವಿವರಿಸಿದನು. [64ಗ] ಅದನ್ನು ಆಕರ್ಣಿಸಿ ಅನೇಕರು-ಗಣಧರರೂ ಪರಿವ್ರಾಜಿಕೆಯರೂ ಆದರು. ಭರತೇಶ್ವ ರನೂ ಬಾಹುಬಲಿಯೂ ಜಿನನಿಗೆ ನಮಸ್ಕರಿಸಿ ತಮ್ಮತಮ್ಮ ರಾಜಧಾನಿಗಳಿಗೆ ತೆರ ದರು. ಇತ್ತ ಸೌಧರ್ಮೇಂದ್ರನು ಭಗವದ್ವಿಹಾರವನ್ನು ಅವಧಿಯಿಂದ ತಿಳಿದು [65-66] ಬಿನ್ನೈಸಿದನು. [66ಗ] ಕೂಡಲೆ ಸಮವಸರಣವು ಅಂತರಿಕ್ಷದಲ್ಲಿ ನಡೆಯುತೊಡಗಿತು. ಹೀಗೆ ಆದಿತೀರ್ಥಕರನು [6] ಕಕಕಾಶ್ಮೀರಾದಿದೇಶಗಳ ವಿನೇಯಜನಗಳಿಗೆಲ್ಲ ಉತ್ಸವ ವನ್ನು ಮಾಡುತ್ತ ಧರ್ಮಕ್ಷೇತ್ರಗಳಲ್ಲಿ ವಿಹಾರಿಸುತ್ತ ಬಂದು ಕೈಲಾಸದಲ್ಲಿ ನೆಲಸಿದನು.

## XI ದಿಗ್ವಿಜಯ ಪ್ರಾರಂಭ ನಿರೂಪಣೆ.

ಆಬಳಿಕ ಇತ್ತ [1] ಭರತನು [2-3] ಚಕ್ರರತ್ನವನ್ನೂ [3ಗ] ಅದರೊಡನೆ ಜನಿಸಿದ ಇತರ ಜೀವಾಜೀವರತ್ನಗಳನ್ನೂ ಪೂಜಿಸಿ [4—5] ತನ್ನ ಅಗ್ರಸುತನ ಜನ್ಮೋತ್ಸವವನ್ನು ನೆರವೇರಿಸಿದನು ಆವೇಳೆಗೆ [5ಗ—9] ಶರತ್ಸಮಯವು ಬಂ ದೊದಗಿತು ಅದನ್ನು ಕಂಡು [1ಗ—10] ಇನ್ನು ದಿಗ್ವಿಜಯಸಮಯವು ಪ್ರಾಪ್ತ ವಾಯಿತೆಂದು ತಿಳಿದು ಸೇನೆ ಸನ್ನದ್ಧವಾಗುವಂತೆ ವಿಜಯಪ್ರಸ್ಥಾನಭೇರಿಯನ್ನು ಹೊಯ್ಸಿದನು. [10ಗ— ] ಬಳಿಕ ಜ್ಯೋತಿಷ್ಕರು ಸೂಚಿಸಿದ ಶುಭಮುಹೂರ್ತ ದಲ್ಲಿ ಬಂದು ನಿಂತ ರಥದಲ್ಲಿ ಕುಳಿತು ರಾಜಮಾರ್ಗದಲ್ಲಿ ತನ್ನನ್ನು ನೋಡುವ ಆತುರದಿಂದ ಬಂದು ಸೇರಿದ್ದ [16—23] ಪುರಾಂಗನೆಯರಿಗೆ ನೇತ್ರಾನಂದವನ್ನು ಉಂಟುಮಾಡುತ್ತ ನಡೆದು ಊರಹೊರಗೆ ಕಾದಿದ್ದ [24ಗ] ಸೈನ್ಯವನ್ನೂ [25] ರಾಜರನ್ನೂ ನೋಡಿ [26] ನಿಜಶಿಬಿರವನ್ನು ಪ್ರವೇಶಿಸಿದನು. ಅಲ್ಲಿ [26ಗ—27] ಭೋಜನಮಾಡಿ [27] ತಾಂಬೂಲವನ್ನು ಸೇವಿಸುತ್ತ ವಿಶ್ರಮಿಸಿಕೊಂಡು [28ಗ] ಮರುದಿ ನ ಮಂಗಳವಾದ್ಯರಭಸದೊಡನೆ ಪೂರ್ವಾಭಿಮುಖನಾಗಿ (29ಗ) ಹೊರಟನು [29-38] ಹಸ್ತ್ಯಶ್ವರಥಪದಾತಿಗಳೂ ಸಂಗಡ ಹೊರಟವು (83—47] ಕೂಡಲೆ ಭರತನ ಪರಿ ವಾರಸ್ತ್ರೀಯರೂ ಅಂತಃಪುರಸ್ತ್ರೀಯರೂ ನಾಗಿಬಂದರು ಹೀಗೆ ಪ್ರಯಾಣಮಾಡು ವಾಗ (48—54) ಶರತ್ಕಾಲದ ಬಿಸಲಿನ ತಾಪದಿಂದ ಎಲ್ಲರೂ ಬಳಲಿ [55—56] ಮೆಲ್ಲಗೆ ಗಂಗಾತೀರಕ್ಕೆ ಬಂದು (75—59) ಆನದಿಯ ಸೌಂದರ್ಯವನ್ನೂ [60-69] ತತ್ತಟವನದ ಮನೋಜ್ಞತೆಯನ್ನೂ ನೋಡಿ ಅಲ್ಲಿ ಬೀಡು ಬಿಟ್ಟರು. [ 71—82 ] ಅಲ್ಲಿ ಸ್ತ್ರೀಯರು ಯಥಾಯೋಗ್ಯವಾಗಿ ಲತಾಗೃಹಾದಿಗಳಲ್ಲಿ ವಿಶ್ರಮಿಸಿಕೊಂಡು ಶಾರದಾತಪವನ್ನೂ ಕಳೆದು ಬಳಿಕ (83—137) ವನದ ಸೌಂದ ರ್ಯವನ್ನು ನೋಡುತ್ತ ಪುಷ್ಪಾಪಚಯವಿನೋದದಲ್ಲಿ ಖಳಲುತ್ತ ಚಿರಕಾಲ ವನವಿಹಾರನು

ಖದಿಂದ ಸುಖಿಸಿ [ 139ಗ—157 ] ಜಲಕೇಳೀರಸಲೋಲರಾಗಿ ಗಂಗಾನದಿಯಲ್ಲಿ ವಿಹರಿಸಿದರು.

## XII. ಮಾಗಧದರ್ಪದಳನ.

ಆವೇಳೆಗೆ [1—2] ಸೂರ್ಯಾಸ್ತಮಯಸಮಯವಾಯಿತು. [2ಗ] ಭರತನು ಸಂಧ್ಯಾಸಮಯೋಚಿತವಾದ ಜಿನೇಂದ್ರವಂದನೆಯನ್ನು ನೆರವೇರಿಸಿದನು. [4] ಕೂಡಲೆ ಸಂಧ್ಯಾರಾಗವು ಪ್ರಸರಿಸಿತು [5—11] ಬಳಿಕ ಚಂದ್ರೋದಯವಾಗಿ ದಿಶಾಭಾಗಗಳೆಲ್ಲವೂ ಬೆಳದಿಂಗಳಿಂದ ಬೆಳ್ಳಗೆ ಕಂಗೊಳಿಸಿದುವು ಆಗ ವಿಜಯಕಟಕಗದ ಸ್ತ್ರೀಪುರುಷರು [12—46] ಕೌಮುದೀಮಹೋತ್ಸವವನ್ನು ಆಸ್ವಾದಿಸಿದರು. [47—48] ಭರತನು ಆವಿನೋದಗಳನ್ನು ನೋಡಿಕೊಂಡು ಅಂತಃಪುರಕ್ಕೆ ಬಂದು ಸುಖಶಯನದಲ್ಲಿ ನಿದ್ರಿಸಿದನು. ಮರುದಿವಸ [49—53] ಮಂಗಳಪಾಠಕರವದಿಂದೆಚ್ಚತ್ತು [56] ಪ್ರಭಾತಕಾಲಕೃತ್ಯಗಳನ್ನು ಕೈಕೊಂಡು [56ಗ—61] ವಿಜಯಗಜೇಂದ್ರಾರೂಢನಾಗಿ [63] ಗಂಗಾತೀರದಲ್ಲಿ ಸೈನ್ಯದೊಡನೆ ನಡೆದು ಮಾರ್ಗದಲ್ಲಿ [25—28] ಅಲ್ಲಲ್ಲಿಯ ರಾಜರು ತಂದಿತ್ತ ಕಪ್ಪಗಳನ್ನು ಸ್ವೀಕರಿ [ 68ಗ ] ಗಂಗಾದ್ವಾರದಲ್ಲಿ ಬೀಡುಬಿಡಿಸಿದನು [74] ಅಲ್ಲಿ ಮೂರುರಾತ್ರಿವಾಸಮಾಡಿ [75] ಅಲ್ಲಿಂದ ಮುಂದೆ ಹೊರಟು ಗಂಗಾದ್ವಾರದಿಂದ ಲವಣಜಲಧಿಯನ್ನು ಪ್ರವೇಶಿಸಿ [76—79ಗ] ಸಮುದ್ರದ ಸೌಂದರ್ಯವನ್ನು ನೋಡುತ್ತ [80—84ಗ] ಸಮುದ್ರದಮೇಲೆ ರಥವನ್ನು ನಡಿಸಿಕೊಂಡು ಹನ್ನೆರಡು ಯೋಜನದವರೆಗೂ ಹೋದನು. ರಥವು [85] ಅಲ್ಲಿಂದ ಮುಂದೆ ನಡೆಯದೆ ನಿಂತುಕೊಂಡಿತು. ಆದುದರಿಂದ [87ಗ] ಮಾಗಧನನ್ನು ಅಲ್ಲಿಂದಲೆ ಸಂಹರಿಸುವೆನೆಂದು ಧನುವನ್ನು ಏರಿಸಿ ಟಂಕಾರಮಾಡಿ ಮಾಗಧನ ಪಟ್ಟಣಕ್ಕೆ ಹೊಡೆದನು. [92—103] ಅದನ್ನು ನೋಡಿ ಮಾಗಧನು ಕೋಪಾವಿಷ್ಟನಾಗಿ ಶತ್ರುಸಂಹಾರಮಾಡುವೆನೆಂದು ಆರ್ಭಟಿಸುತ್ತಿದ್ದನು. ಅವನ ಮಾತುಗಳನ್ನು ಕೇಳಿ ಕುಲವೃದ್ಧರು ಬಂದು [ 906 ] ‘ಇದು ಸಾಮಾನ್ಯಶರವಲ್ಲ, ಈವಿಷಯದಲ್ಲಿ ಸಾಮವೇ ಸಾಧು’ ವೆಂದು ಉಪದೇಶಮಾಡಿ ಅವನಿಗೆ ಬುದ್ಧಿಗಲಿಸಿದರು ]109] ಆಮಾತಿಗೆ ಒಪ್ಪಿಕೊಂಡು ಮಾಗಧನು ನಿಜನಗರದಿಂದ ಉಪಾಯನಗಳನ್ನು ತೆಗೆದುಕೊಂಡು ಹೊರಟುಬಂದು ಚಕ್ರಿಗೆ ಪದಾನತನಾಗಿ ಕಾಣಿಕೆಗಳನ್ನು ಒಪ್ಪಿಸಿದನು. ಚಕ್ರವರ್ತಿ ಅವನನ್ನು ಮನ್ನಿಸಿ ನಿಜನಗರಿಗೆ ಕಳುಹಿಸಿಕೊಟ್ಟು ನಿಜಶಿಬಿರಾಭಿಮುಖನಾಗಿ ಹೊರಟುಬಂದು ಸೇನಾನಿವೇಶವನ್ನು ಪ್ರವೇಶಿಸಿದನು.

# XIII. ಷಟ್ಖಂಡಮಂಡಳವಿಜಯಂ.

[ 1-3ಗ] ಬಳಿಕ ಭರತನು ದಕ್ಷಿಣದಿಶಾಭಿಮುಖನಾಗಿ ಹೊರಟು ಲವಣಜಲಧಿಮಧ್ಯದಲ್ಲಿದ್ದ ವರತನುವನ್ನು ಜಯಿಸಿ ಕಪ್ಪವನ್ನು ತೆಗೆದುಕೊಂಡು [ 3ಗ ] ಲವಣಸಮುದ್ರೋಪಸಮುದ್ರದ ನಡುವೆ ಇದ್ದ [ 4 ] ಪ್ರಭಾಸಾಮರನನ್ನು ಜಯಿಸಿ ಸಿಂಧುತೀರಕ್ಕೆ ಬಂದನು. [ 5–7 ] ಆವೇಳೆಗೆ ವಸಂತಕಾಲವು ಪ್ರಾಪ್ತವಾಯಿತು [ 8 ] ಆ ಕಾಲದಲ್ಲಿ [ 9-10 ] ವಿಜಯಾರ್ಧಪರ್ವತದ ಬಳಿಗೆ ಬಂದು ಅದರ ಸೌಂದರ್ಯವನ್ನು ನೋಡುತ್ತ ಅದರ ವನವೇದಿಕಾಪ್ರದೇಶಕ್ಕೆ ಸೇರಿ ಅಲ್ಲಿ [ 11ಗ ] ಶಿಬಿರನಿವೇಶನವನ್ನು ಮಾಡಿದನು [ 12-18 ] ಆಸಂಗತಿಯನ್ನು ಕೇಳಿ ಆಪರ್ವತದಲ್ಲಿದ್ದ ವಿಜಯಾರ್ಧನೆಂಬವನು ಬಂದು ಇದಿರುಗೊಂಡು ಭರತನಿಗೆ ಪುಣ್ಯೋದಕಸ್ನಾನವನ್ನು ಮಾಡಿಸಿ ತಾನು ತಂದಿದ್ದ ಸಾರವಸ್ತುಗಳನ್ನು ಕಾಣಿಕೆಕೊಟ್ಟು ಆಜ್ಞಾವಿಧೇಯನಾಗಿ ತನ್ನ ಸ್ಥಾನಕ್ಕೆ ಹೋದನು. [ 20 ] ಆಬಳಿಕ ಭರತನು ಅಲ್ಲಿಂದ ಪ್ರಯಾಣ ಮಾಡಿ ವಿಜಯಾರ್ಧವನ ವೇದಿಕೆಗೆ ಆಸನ್ನವಾದ ವಿಶಾಲಪ್ರದೇಶದಲ್ಲಿ ಬೀಡುಬಿಟ್ಟನು. [22] ಅಲ್ಲಿಗೆ ಕುರುರಾಜಾದಿಮೂರ್ಧಾಭಿಷಿಕ್ತರು ಬಂದು ಕಾಣಿಸಿಕೊಂಡು ಉತ್ತರಾರ್ಧವನ್ನೂ ಜಯಿಸಬೇಕೆಂದು ಚಕ್ರವರ್ತಿಗೆ ವಿಜ್ಞಾಪಿಸಿದರು. [ 23-31ಗ ] ಆವೇಳೆಗೆ ಕೃತಮಾಳನೆಂಬ ಒಬ್ಬ ವ್ಯಂತರಾಮರನು ಅಲ್ಲಿಗೆ ಬಂದು ಅಮೂಲ್ಯವಾದ ರತ್ನಗಳನ್ನು ಅರ್ಪಿಸಿ ವಿಜಯಾರ್ಧಗುಹಾದ್ವಾರಪ್ರವೇಶದ ಉಪಾಯವನ್ನು ತಿಳಿಸಿ ಸನ್ಮಾನಿತನಾಗಿ ಹೊರಟುಹೋದನು ಕೂಡಲೆ [32-41ಗ] ಭರತನು ಆವುಪಾಯವನ್ನು ಸೇನಾನಾಯಕನಿಗೆ ತಿಳಿಸಿ ತಮಿಸ್ರಗುಹೆಯ ಕವಾಟವನ್ನು ತೆರೆದು ಪಶ್ಚಿಮವಾದ ಮ್ಲೇಚ್ಛಖಂಡವನ್ನು ವಶಮಾಡುವಂತೆ ಆಜ್ಞಾಪಿಸಿದನು. ಆತನು ದಂಡರತ್ನವನ್ನೂ ಕತಿಪಯಪರಿಜನವನ್ನೂ ಸಂಗಡ ತೆಗೆದುಕೊಂಡುಹೋಗಿ ಮ್ಲೇಚ್ಛಖಂಡವನ್ನು ಜಯಿಸಿ ಕೆಲರಾಜರನ್ನು ಸೆರೆವಿಡಿದು ತಂದು ಚಕ್ರವರ್ತಿಯ ಮುಂದೆ ನಿಲಿಸಿದನು [42–44ಗ] ಬಳಿಕ ಭರತನು ಉತ್ತರಭರತವನ್ನು ಸ್ವವಶಮಾಡಿಕೊಳ್ಳಬೇಕೆಂದು ಹೊರಟು [45ಗ] ತನ್ನೊಡನೆ ಬಂದು ಸೇರಿದ ಆಂಧ್ರಕರ್ಣಾಟಾದಿಸೇನಾಸಮೇತನಾಗಿ ನಡೆದು [ 46ಗ ] ವಿಜಯಾರ್ಧಾಚಳದ ತಮಿಸ್ರಗುಹಾದ್ವಾರವನ್ನು ಪ್ರವೇಶಿಸಿ [ 47–53ಗ ] ಉತ್ತರಗುಹಾದ್ವಾರದಿಂದ ಹೊರಗೆ ಬಂದು [ 54-56 ] ಆ ಪರ್ವತದ ಉಪಕಂಠದಲ್ಲಿದ್ದ ವನದಲ್ಲಿ ಬೀಡುಬಿಟ್ಟನು. [56ಗ] ತರುವಾಯ ಪಶ್ಚಿಮಖಂಡವನ್ನು ಸ್ವಾಧೀನಮಾಡಿಕೊಂಡು ಮಧ್ಯಮಖಂಡಕ್ಕೆ ಮುತ್ತಿಗೆ ಹಾಕಿದನು. [ 57-67 ] ಆಗ ಚಿಳಾತಾವರ್ತರೆಂಬ ಇಬ್ಬರು ಮ್ಲೇಚ್ಛರಾಜರು ಯುದ್ಧಕ್ಕೆ ಬಂದು ಘಾತಪಾತಗಳನ್ನು ಮಾಡಿದರು. ಅವರನ್ನು ಜಯಕುಮಾರನು ಜಯಿಸಿ ಚಕ್ರವರ್ತಿಗೆ ವಶವರ್ತಿಗಳಾಗಿ ಮಾಡಿದನು. ಅನಂತರ ಚಕ್ರವರ್ತಿ ಅಲ್ಲಿಂದ ಹೊರಟು ಹಿಮವತ್ಪರ್ವತವನ್ನು [72-77ಗ] ಕಳೆದು ವೃಷಭಾಚಲಕ್ಕೆ ಹೋಗಿ ಸೇರಿ ಅಲ್ಲಿ ತನ್ನ ಪ್ರಶಸ್ತಿಯನ್ನು ಬರೆಯಿಸಿ ಅಲ್ಲಿಂದ ದಕ್ಷಿಣಾಭಿಮುಖನಾಗಿ

ನಡೆದು ವಿಜಯಾರ್ಧದಲ್ಲಿ ಬೀಡುಬಿಟ್ಟನು. ಅಲ್ಲಿ ಸೇನಾಪತಿ ಮ್ಲೇಚ್ಛಖಂಡವನ್ನು ಸಾಧಿಸಿ ದಕ್ಷಿಣೋತ್ತರಶ್ರೇಣಿಗಳ ವಿದ್ಯಾಧರರಾಜರಾದ ನಮಿವಿನಮಿಗಳನ್ನು ಕೈಸೆರೆಹಿಡಿದು ತಂದನು. ಅವರು ಚಕ್ರವರ್ತಿಗೆ ತಮ್ಮ ಸೋದರಿಯಾದ ಸುಭದ್ರೆಯನ್ನು ಕೊಟ್ಟು ವಿವಾಹಮಾಡಿದರು. ಬಳಿಕ ಭರತನು ಗುಹಾದ್ವಾರದಿಂದ ಹೊರಗೆ ಹೊರಟು ಬಂದು ಪೂರ್ವದಿಗ್ಭಾಗದ ಮ್ಲೇಚ್ಛಖಂಡವನ್ನು ಜಯಿಸಿ ಸಿದ್ಧದಿಗ್ವಿಜಯನಾಗಿ ಕೈಲಾಸಶೈಲಕ್ಕೆ ಬಂದುಸೇರಿದನು. ಅಲ್ಲಿ [82ಗ] ಮಾಳಿಗಾಳಮೊದಲುಗೊಂಡು ವೃಷಭನಾಥನಾಸ್ಥಾನಮಂಟಪವನ್ನು ನೋಡುತ್ತ ಬಂದು ಸುರಾಸುರಸಭೆಯನಡುವೆ ಸಿಂಹಾಸನಾಸೀನನಾಗಿದ್ದ ಜಗತ್ತ್ರಯತಿಲಕನ ಪಾದಪದ್ಮಕ್ಕೆ ನಮಸ್ಕರಿಸಿ [ 83-90 ] ಅನೇಕಸ್ತವನಗಳಿಂದ ಸ್ತುತಿಸಿ ಪೂಜಿಸಿದನು.

## XIV. ದಿಗ್ವಿಜಯಧ್ವಜಾರೋಹಣಂ.

ಬಳಿಕ ಭರತನು [ 1ಗ ] ಸಮವಸರಣದಿಂದ ಹೊರಟು ನಿಜವಿಜಯಕಟಕಕ್ಕೆ ಬಂದು [ 2 ] ದಿಗ್ವಿಜಯದಲ್ಲಿ ಅರುವತ್ತುಸಾವಿರವರ್ಷಗಳು ಕಳೆದುಹೋದುವೆಂದು ಯೋಚಿಸಿ ಅಯೋಧ್ಯಾಪುರಾಭಿಮುಖನಾಗಿ ಪ್ರಯಾಣಮಾಡಿದನು. [ 3 ] ಪುರದ್ವಾರಕ್ಕೆ ಬಂದು ಪ್ರವೇಶಮಾಡುವ ಕಾಲದಲ್ಲಿ ಚಕ್ರರತ್ನವು ಪ್ರವೇಶಮಾಡದೆ ನಿಂತುಬಿಟ್ಟಿತು. ಅದನ್ನು ನೋಡಿ [ 4-6 ] ಕುಪಿತನಾಗಿ [ 6ಗ ] ಪುರೋಹಿತನನ್ನು ಕರಿಸಿ [7—9] ಅದರ ಕಾರಣವನ್ನು ಕೇಳಿದನು ಅವಕ್ಕೆ ಪುರೋಹಿತನು [9ಗ—17] ಬಾಹುಬಲಿ ಮೊದಲಾದ ಅವನ ಅನುಜರು ಮದೋದ್ಧತರಾಗಿರುವರೆಂದು ತಿಳಿಸಿದನು. [ 18—30 ] ಅವನ್ನು ಕೇಳಿ ಅವರನ್ನು ಜಯಿಸದಿದ್ದರೆ ತನ್ನ ದಿಗ್ವಿಜಯವೇ ವ್ಯರ್ಥವೆಂದು ಹೇಳಿ ಅವರಿಗೆ ದೂತರನ್ನು ಅಟ್ಟಿದನು. [ 31ಗ ] ಅವರು ತಮ್ಮ ಬಳಿಗೆ ಬಂದ ದೂತನ ವಾಕ್ಯವನ್ನೂ ರಾಜಾದೇಶವನ್ನೂ ಕೇಳಿ [ 32—39 ] ಅಗ್ರಜನಿಗೆ ಅಧೀನರಾಗದೆ ರಾಜ್ಯವನ್ನು ತೊರೆದು ಸಮವಸರಣಕ್ಕೆ ಹೋಗಿ ದೀಕ್ಷೆಯನ್ನು ವಹಿಸಿದರು. [ 43ಗ ] ಬಳಿಕ ಬಾಹುಬಲಿಗೆ ಲೇಖನವನ್ನು ಅಟ್ಟಿದನು. ದೂತನು ಅದನ್ನು ತಗೆದುಕೊಂಡುಹೋಗಿ ಬಾಹುಬಲಿಗೆ ಒಪ್ಪಿಸಿದನು. [ 46 ] ಬಾಹುಬಲಿ ಅದನ್ನು ಓದಿಸಿ ನೋಡಿ ಭರತನ ವಿಜಯವನ್ನೆಲ್ಲಾ ಬಿನ್ನವಿಸುವಂತೆ ದೂತನಿಗೆ ಆಜ್ಞಾಪಿಸಿದನು. ಆತನು ಸಾಂಗವಾಗಿ ವಿವರಿಸಿ [ 50-63 ] "ನನ್ನ ತಮ್ಮನೆ ನನಗೆ ನಮಸ್ಕರಿಸದಮೇಲೆ ಸಾಮ್ರಾಜ್ಯವೇ ನಿಷ್ಫಲವು" ಎಂದು ಯೋಚಿಸಿ ಚಕ್ರಿ ನನ್ನನ್ನು ಇಲ್ಲಿಗೆ ಕಳುಹಿಸಿದನೆಂದು ವಿಜ್ಞಾಪಿಸಿದನು. [63ಗ—81] ಅದಕ್ಕೆ ಬಾಹುಬಲಿ ಕುಪಿತನಾಗಿ ವಕ್ರೋಕ್ತಿಗಳಿಂದ ಅಗ್ರಜನ ದೋಷಗಳನ್ನು ಉದ್ಘಾಟಿಸಿ ಯುದ್ಧದಲ್ಲಿ ತನ್ನನ್ನು ಜಯಿಸಿದರೆ ಪಾದಗಳಿಗೆ ಎರಗುವೆನೆಂದು ಹೇಳಿ ದೂತನನ್ನು ಕಳುಹಿಸಿ ಯುದ್ಧಸನ್ನದ್ಧನಾಗುತ್ತಿದ್ದನು.

ಇತ್ತ ಭರತನು ಬಾಹುಬಲಿಯ ಯುದ್ಧೋದ್ಯಮವನ್ನು ದೂತಮುಖದಿಂದ ತಿಳಿದು ಸೇನಾಸಮೇತನಾಗಿ ಪೋದನಪುರಾಭಿಮುಖನಾಗಿ ಹೊರಟನು. [ 90-92 ]

ಅತ್ತ ಬಾಹುಬಲಿಯೂ ಸನ್ನದ್ಧನಾಗಿ ಯುದ್ಧಭೂಮಿಗೆ ಬಂದು ನಿಂತನು [93—99] ಎರಡು ಸೇನೆಗಳೂ ಒಂದನ್ನೊಂದು ಇದಿರಿಸಿ ಯುದ್ಧಾರಂಭಕ್ಕೆ ಸನ್ನದ್ಧವಾಗಿದ್ದವು [100ಗ] ಆಕಾಲದಲ್ಲಿ ಉಭಯಪಕ್ಷದ ಮಂತ್ರಿಯವರ್ಗದವರೂ ಯುದ್ಧದಿಂದ ಪ್ರಾಣಿವಧೆಯಾಗುವುದೆಂದು ಸಂತಾಪಪಟ್ಟು ಭರತನಲ್ಲಿಗೆ ಬಂದು [101] "ನೀವು ನಿಮ್ಮಿಬ್ಬರ ದೃಷ್ಟಿಯುದ್ಧ ಜಲಯುದ್ಧ ಮಲ್ಲಯುದ್ಧದಲ್ಲಿ ಜಯವನ್ನು ಒಪ್ಪಿಕೊಳ್ಳಿರಿ. ಈ ಜನಕ್ಷಯದಿಂದ ಬರುವ ಪಾಪವನ್ನು ಏತಕ್ಕೆ ಕಟ್ಟಿಕೊಳ್ಳಬೇಕು" ಎಂದು ಹೇಳಿ ಒಡಂಬಡಿಸಿದರು. [104ಗ] ಹಾಗೆಯೇ ಬಾಹುಬಲಿಯನ್ನೂ ಸಮ್ಮತಿಪಡಿಸಿದರು. [105] ಬಳಿಕ ಅದೇ ರೀತಿಯಲ್ಲಿ ದೃಷ್ಟಿಯುದ್ಧ [106—108ಗ] ಜಲಯುದ್ಧ [109—113] ಮಲ್ಲಯುದ್ಧಗಳು ನಡೆದುವು ಮೂರರಲ್ಲೂ ಭರತನಿಗೆ ಸೋಲಾಯಿತು. ಅದಕ್ಕೆ ಭರತನು ಕುಪಿತನಾಗಿ ತಮ್ಮನ ಮೇಲೆ ಚಕ್ರರತ್ನವನ್ನು ಪ್ರಯೋಗಿಸಿದನು. ಅದರಿಂದಲೂ ಏನೂ ಸಾಗಲಿಲ್ಲ. [—126] ಆದರೆ ಬಾಹುಬಲಿ ರಾಜ್ಯವಿಮೋಹವು ಈರೀತಿಯಾದ ದುರ್ವ್ಯಸನಕ್ಕೆ ಅವಕಾಶವನ್ನು ಉಂಟುಮಾಡುವುದೆಂದು ಭಾವಿಸಿ ವೈರಾಗ್ಯವನ್ನವಲಂಬಿಸಿ [133ಗ] ಮಹಾಬಲಿಯೆಂಬ ತನ್ನ ಕುಮಾರನಿಗೆ ಪಟ್ಟಾಭಿಷೇಕಮಾಡಿ [136ಗ] ಕೈಲಾಸದಲ್ಲಿದ್ದ ಪುರುಪರಮೇಶ್ವರನ ಸಮವಸರಣಕ್ಕೆ ಹೋಗಿ ಜಿನದೀಕ್ಷೆಯನ್ನು ಅಂಗೀಕರಿಸಿ ಪ್ರತಿಮಾಯೋಗದಿಂದ ಜ್ಞಾನಾವಿರ್ಭಾವವನ್ನು ಪಡೆದು ಆದಿದೇವನ ಸನ್ನಿಧಿಯಲ್ಲಿ ನಿಂತನು

## XV. ಉಪಾಸಕಾಧ್ಯಯನವರ್ಣನಂ.

ಬಳಿಕ ಭರತಚಕ್ರವರ್ತಿ [1—2] ಪಟ್ಟಾಭಿಷಿಕ್ತನಾಗಿ [3—4] ಭರತಮಂಡಲವನ್ನು ಪಾಲಿಸುತ್ತಿದ್ದನು. [6] ಒಂದುಕಾಲದಲ್ಲಿ ಆತನು ಜಿನಪೂಜೋತ್ಸವವೆಂಬ ಉತ್ಸವವನ್ನು ಮಾಡಿ ಪಾತ್ರವರಿತು ದಾನಮಾಡಬೇಕೆಂದು ಯೋಚಿಸಿದನು. ಋಷಿಗಳು ದಾನವನ್ನು ಕೊಳ್ಳದುದರಿಂದ ಗೃಹಸ್ಥರಲ್ಲಿ ಯೋಗ್ಯರನ್ನು ತಿಳಿವುದಕ್ಕಾಗಿ ಒಂದು ಉಪಾಯವನ್ನು ಮಾಡಬೇಕೆಂದು ಒಂದು ಉತ್ಸವವನ್ನು ಮಾಡಿ [7] ರಾಜಾಂಗಣದಲ್ಲಿ ಫಲಕುಸುಮಪತ್ರಾಂಕುರಾದಿಗಳನ್ನು ಕೆದರಿಸಿ ಜನರನ್ನು ಬರಿಸಿದನು. [8] ಕೆಲವರು ಅವುಗಳನ್ನು ತುಳಿದುಕೊಂಡುಹೋದರು; ಕೆಲವರು ಹೋಗದೆ ಹೊರಗೆ ನಿಂತುಬಿಟ್ಟರು. [9] ಹಾಗೆ ನಿಂತವರನ್ನು ರಾಜನು ಬೇರೆ ಬಾಗಿಲಿಂದ ಬರಿಸಿಕೊಂಡು ಅವರು ಹೊರಗೆ ನಿಂತುದಕ್ಕೆ ಕಾರಣವೇನೆಂದು ಪ್ರಶ್ನೆಮಾಡಿದನು. ಫಲಾದಿಗಳಲ್ಲಿ ಜೀವರಾಶಿಯಿರುವುದರಿಂದ ಪರ್ವದಿನಗಳಲ್ಲಿ ತುಳಿಯಲಾಗದೆಂದು ಅವರು ಹೇಳಿದರು [11ಗ] ಅದನ್ನು ಕೇಳಿ ಭರತನು ಸಂತುಷ್ಟನಾಗಿ ಅವರು ದಾನಸನ್ಮಾನಕ್ಕೆ ಯೋಗ್ಯರೆಂದು ನಿಶ್ಚಯಿಸಿ ತಪನೀಯಸೂತ್ರದಲ್ಲಿ ಏಕಾದಿಯಾಗಿ ಏಕೋತ್ತರದಶವರೆಗೆ ಬ್ರಹ್ಮಸೂತ್ರಾಭಿಧಾನವಾದ ಯಜ್ಞೋಪವೀತದಿಂದ ಅವರನ್ನು ಪವಿತ್ರಗಾತ್ರರಾಗಿಮಾಡಿ [12] ಅವರಿಗೆ ಪೂಜೆಯನ್ನು ಕೊಟ್ಟು ಮನ್ನಿಸಿದನು [13] ಬಳಿಕ ಅವರಿಗೆ ಆರ್ಯಷಟ್ಕರ್ಮಗಳನ್ನು ಉಪದೇಶಿಸಿ [14] ಆ ಷಟ್ಕರ್ಮಗಳನ್ನು

ನಡಿಸುವವರು ದ್ವಿಜರೆಂದೂ [ 15 ] ನಡಿಸದವರು ಅಲ್ಲವೆಂದೂ ಹೇಳಿ [16ಗ —18] ಅವರು ಮಾಡಬೇಕಾದ ಕರ್ಮಗಳನ್ನೆಲ್ಲಾ ಉಪದೇಶಿಸಿದನು. [20] ಅದರಿಂದೀಚೆಗೆ ಬ್ರಾಹ್ಮಣರು ಪ್ರಖ್ಯಾತರಾದರು. ಹೀಗಿರುತ್ತಿರುವಲ್ಲಿ [21ಗ] ಭರತನು ಒಂದು ದಿವಸ ದುಸ್ಸ್ವಪ್ನವನ್ನು ಕಂಡು ಅದರ ಫಲವನ್ನು ವೃಷಭೇಶ್ವರನಲ್ಲಿಗೆ ಹೋಗಿ ಕೇಳಿದನು [ 22—43 ] ಜಿನಮತಕ್ಷಯವಾಗುವುದೇ ಮೊದಲಾದ ಅದರ ಫಲಗಳನ್ನು ಅವನು ವಿವರಿಸಿ ಹೇಳಿದನು. ಅದನ್ನು ತಿಳಿದು ಭರತನು ಅವನನ್ನು ಪೂಜಿಸಿ ಸ್ವಸ್ಥಾನಕ್ಕೆ ಬಂದು ದುಸ್ಸ್ವಪ್ನದೋಷನಿವಾರಣಾರ್ಥವಾಗಿ ಕಲ್ಪವೃಕ್ಷಾದಿಮಹಾಮಹಿಮಗಳನ್ನೂ ಶಾಂತಿಕ್ರಿಯೆಗಳನ್ನೂ ಮಾಡಿಸುತ್ತಿದ್ದನು.

## XVI. ಪರಿನಿರ್ವಾಣಕಲ್ಯಾಣವರ್ಣನಂ.

ಭರತನು ಅನೇಕಚೈತ್ಯಾಲಯಗಳನ್ನು ಕಲ್ಪಿಸಿ ಅವುಗಳಲ್ಲಿ ಆದಿಭಟ್ಟಾರಕನ ಪ್ರತಿಮೆಯೇ ಮೊದಲಾದ ಅನೇಕಬಿಂಬಗಳನ್ನು ಪ್ರತಿಷ್ಠಿಸಿ ಅಭಿಷೇಕಿಸಿ ಅರ್ಚಿಸಿ [3—10] ಕನ್ನಡಪದ್ಯಗಳಿಂದಲೂ [ 1 —36 ] ಸಂಸ್ಕೃತಶ್ಲೋಕಗಳಿಂದಲೂ ಸ್ತುತಿಸಿ ಧರ್ಮದಿಂದ ರಾಜ್ಯಭಾರವಮಾಡುತ್ತಿದ್ದನು [40] ಅದನ್ನು ಕಂಡು 'ಯಥಾ ರಾಜಾ ತಥಾ ಪ್ರಜಾಃ' ಎಂಬರೀತಿಯಲ್ಲಿ ಪ್ರಜೆಗಳೂ ಧರ್ಮಪ್ರಿಯರಾಗಿದ್ದರು

ಅತ್ತ ವೃಷಭನಾಥನು [40ಗ] ಚತುರುತ್ತರಾಶೀತಿಲಕ್ಷಪೂರ್ವಗಳಲ್ಲಿ ಹದಿನಾಲ್ಕು ದಿವಸದಾಯುಷ್ಯವಿರುವಾಗ ಕೈಲಾಸಪರ್ವತದ ಸಿದ್ಧಕೂಟದಲ್ಲಿ ಪೌಷ್ಯಮಾಸದ ಪೂರ್ಣಿಮಾದಿನದಲ್ಲಿ ಯೋಗಪರ್ಯಂಕಾಸನದಲ್ಲಿ ಪೂರ್ವಾಭಿಮುಖನಾಗಿ ಇದ್ದನು.

ಇತ್ತ ಭರತಾದಿಗಳು [41—48] ಸ್ವಪ್ನಗಳನ್ನು ಕಂಡು ಅವುಗಳ ಫಲವನ್ನು ಕೇಳಿದರು. [49] ಅವು ಆದಿದೇವನು ಮೋಕ್ಷವನ್ನು ಹೊಂದುವುದನ್ನು ಸೂಚಿಸುವುವೆಂದು ಪುರೋಹಿತನು ತಿಳಿಸಿದನು [50] ಕೂಡಲೆ ಭರತನು ಅಲ್ಲಿಗೆ ಹೋಗಿ ಭಟ್ಟಾರಕನಿಗೆ ಪ್ರದಕ್ಷಿಣೆಮಾಡಿ ಮಹವೆಂಬ ಪೂಜೆಯನ್ನು ಮಾಡಿದನು. ವೃಷಭನಾಥನೂ ಅನೇಕ ವ್ರತಗಳನ್ನು ಮಾಡಿ [51] ಮಾಘಮಾಸದ ಕೃಷ್ಣಚತುರ್ದಶಿಯಂದು ಅಭಿಜಿನ್ಮುಹೂರ್ತದಲ್ಲಿ ಮೋಕ್ಷಕ್ಕೆ ಸಂದನು. [60] ಆಕಾಲದಲ್ಲಿ ಚತುರ್ವಿಧಾಮರರು ಪರಿನಿರ್ವಾಣಕಲ್ಯಾಣೋತ್ಸವವನ್ನು ಅತ್ಯಾನಂದದಿಂದ ನೆರವೇರಿಸಿ ತಮ್ಮ ತಮ್ಮ ಸ್ಥಾನಗಳಿಗೆ ಹೊರಟುಹೋದರು. ಭರತನು ಅಯೋಧ್ಯೆಗೆ ಬಂದು ರಾಜ್ಯವಾಳುತ್ತಿದ್ದನು. ಅವನಿಗೆ ಮುಪ್ಪು ಬಂದಿತು ಕೂಡಲೆ ರಾಜ್ಯವಿಮುಖನಾಗಿ ಕೈಲಾಸಕ್ಕೆ ನಡೆದು ದೀಕ್ಷೆಯನ್ನು ವಹಿಸಿ ಮೋಕ್ಷವನ್ನು ಹೊಂದಿದನು. ಬಳಿಕ ವೃಷಭಸೇನಗಣಧರರೂ ಪುರುಸುತರೂ ಆಕ್ರಮದಲ್ಲಿಯೇ ದೀಕ್ಷೆಯನ್ನು ಕೈಕೊಂಡರು

ಈ ಗ್ರಂಥವು [76—77] ಶಕವರ್ಷ 863 ನೆಯ ಪ್ಲವಸಂವತ್ಸರದ ಕಾರ್ತಿಕ ಶುಕ್ಲಪಂಚಮಿ ಸೋಮವಾರದಲ್ಲಿ ಪೂರ್ಣವಾಯಿತು.

———oOo———

ಶ್ರೀ

ಪಂಪಮಹಾಕವಿವಿರಚಿತಂ

# ಪಂಪಭಾರತಂ.

## ಪ್ರಥಮಾಶ್ವಾಸಂ.

ಶ್ರೀದೇವೇಂದ್ರಮುನೀಂದ್ರವಂದಿತಗುಣವ್ರಾತಂ[1]ಜಗತ್ಸ್ವಾಮಿ ಸಂ
ಪಾದಿಬ್ರಹ್ಮನಗಾಧಬೋಧನಿಳಯಂ ದುರ್ವಾರಸಂಸಾರವಿ ।
ಚ್ಛೇದೋಪಾಯನಿಯುಕ್ತಸೂಕ್ತಿ ವೃಷಮಾರ್ಗಾಗ್ರೇಸರಂ[2]ಪಾಪಹೃ
ತ್ಪಾದಾಬ್ಜಂ ದಯೆಗೆಯ್ವನಕ್ಕೆಮಗೆ ಮುಕ್ತಿಶ್ರೀಸುಖಾವಾಪ್ತಿಯಂ॥ ೧

ಪಣೆದೆಂಟುಂ[3] ಕಿಲ್ಬಿಷಂಗಳ್ಕಿಡೆ ಕಿಡದ ಗುಣಂ ಪೊರ್ದೆ ಬಂದೆಂಟುಮಾದಂ
ತಣಿವಂ ಕೈಕೊಂಡಮೂರ್ತರ್ಜರಮತನುಸಮಾಕಾರರುದ್ಧೂತಲೇಪರ್
ಪ್ರಣುತರ್ನಿತ್ಯರ್ಜಗನ್ಮಂಗಳನಿಳಯರನಂತತ್ರಿಲೋಕೈಕಚೂಡಾ
ಮಣಿಗಳ್ಸಿದ್ಧರ್ ಸ್ವಕೀಯಪ್ರಭುತೆಯನೆಮಗಂ ಮಾಳ್ಕತಿಪ್ರೀತಿಯಿಂದಂ॥ ೨

ಮೂವತ್ತಾಱುಂ ಗುಣಂಗಳ್ತಮಗಮರ್ದಿರೆ ಸಂದೈದುಮಾಚಾರದೊಳ್ಸ
ದ್ಭಾವಂ ಕೈಗಣ್ಮೆ ಶಿಷ್ಯಾಚರಣವಿಧಿಗಳಂ ತಿರ್ದಿ ಕಾರುಣ್ಯದಿಂದಂ ।
ಸಾವದ್ಯಂ ಸಾರದಂತಾಗಿರೆ ನಿಯಮಿಸುವಾಚಾರ್ಯರಿನ್ನೆಮ್ಮನೇನೋ
ದಾವಂ ತಳ್ತೞ್ವುದಂ[4]ತೋಸರಿಸಿ ಕಳೆಗೆ ಸಂಸಾರಕಾಂತಾರದಿಂದಂ ॥ ೩

ಹೇಯಂಗಳ್ ಖಿಳಕರ್ಮಬಂಧನಕರ[5]ಕ್ರೋಧಾದಿಗಳ್ ಮತ್ತುಪಾ[6]
ದೇಯಂಗಳ್ ದುರಿತೇಂಧನಾನಳಲಸದ್ರತ್ನತ್ರಯಂಗಳ್ ಸುಖೋ ।

---

1ಖ. ಗ.—ಬ್ರಾತಂ. 2ಗ.—ಸ್ವರಂ. 3ಗ.—ದೆಂದುಂ.
4ಕ. ಗ.—ತಳ್ತುಳುರದಂ. 5ಕ. ಖ.—ನರಕ. 6ಕ.—ತಳ್ತುಪಾ.

ಪಾಯಂಗಳ್ಗಡಿವೊಂದು ಭವ್ಯಜನಮಂ ಕಣ್ಣೂಱಿ ಕಲ್ಪಿಪ್ಪುಪಾ
ಧ್ಯಾಯಜ್ಯೋತಿಸು[1]ಗೆಮ್ಮ ಚಿತ್ತಗೃಹದೊಳ್ರತ್ನತ್ರಯಜ್ಯೋತಿಯಂ ॥ ೪
ಬಗೆಯೊಳ್ಪೊಣ್ಮೆ ದಯಾರಸಂ ಚರಿತದೊಳ್ಕೈಗಣ್ಮೆ ಚಾರಿತ್ರಮಾ
ವಗಮಾವಶ್ಯಕದೊಳ್ತಗುಳ್ದು ಪಲವುಂ ಶೀಲಂಗಳಂ ತಾಳ್ದಿ ದಂ ।
ದುಗಮೆಂದುಂ[2]ತಮಗಾಗದಂತೆಸಗುವರ್ಸರ್ವೋತ್ತಮರ್ಸರ್ವಸಾ
ಧುಗಳೋರಂತೆ ಕಳಲ್ಚುಗೆಮ್ಮ ಮನದಿಂ ದುರ್ಮೋಹ[3]ಸಂದೋಹಮಂ ॥ ೫

ಕಾರ್ಯಮೊಮಗಿದುವೆ ಶಿವಪದ
ಪರ್ಯಂತಂ ಬರಮವೋಘಮುದ್ಧರಿಸುಗೆ ತಾ ।
ತ್ಪರ್ಯದಿನರ್ಹತ್ಸಿದ್ಧಾ
ಚಾರ್ಯೋಪಾಧ್ಯಾಯಸರ್ವಸಾಧುಗಳೆಮ್ಮಂ ॥ ೬

ವರದಂ ಪದ್ಮಾಂಕಿತಂ ತೋಳಿರಡು ನಿಶಿತವಜ್ರಪ್ರಭಾಭಾಸುರಂ ತೋ
ಳಿರಡುದ್ಯಚ್ಚಕ್ರಿಚಕ್ರೋಜ್ಜ್ವಳತರತರಳ[4]ಜ್ಯೋತಿ ತೋಳೆಂಟುಗುರ್ವಾ।
ಗಿರೆ ಬಣ್ಣಂ ಪೊನ್ನಬಣ್ಣಕ್ಕೆಣೆಯೆನೆ ಗರುಡಂ ವಾಹಮಾಗಿರ್ಪ ಚಕ್ರೇ
ಶ್ವರಿ ಭಾಸ್ವದ್ಧರ್ಮಚಕ್ರಾಕ್ರಮಿಗಳನಲೆದಾಟಕ್ಕೆ ವಿಕ್ರಾಂತದಿಂದಂ ॥ ೭
ಪರಶುಫಳಾಕ್ಷಸೂತ್ರವರದೋಚಿತಚಿಹ್ನಚತುರ್ಭುಜಂ ಮನೋ
ಹರವೃಷಲಾಂಛನಂ ವೃಷಮುಖಂ ವೃಷವಾಹನನಿಂದುಕುಂದಸುಂ ।
ದರ[5]ತರವರ್ಣನೀವೃಷಭನಾಥಕಥಾರಚನೋಕ್ತಿಯಲ್ಲಿ ಮಾ
ೞ್ಕಿರದೆಮಗಾಗಳುಂ[6] ವೃಷಭಯಕ್ಷನವಿಘ್ನಮನಃಪ್ರವೃತ್ತಿಯಂ ॥ ೮
ಪರಮಜಿನೇಂದ್ರವಾಣಿಯು[7] ಸರಸ್ವತಿ ಬೇಱದು ಪೆಣ್ಣ ರೂಪ[8]ಮಂ
ಧರಿಯಿಸಿ ನಿಂದುದಲ್ತದುವೆ ಭಾವಿಸಿಯೋದುವ ಕೇಳ್ವ ಪೂಜಿಪಾ ।
ದರಿಸುವ ಭವ್ಯಕೋಟಿಗೆ ನಿರಂತರಸೌಖ್ಯಮನೀವುದಾನದ
ರ್ಕೆರೆದಪೆನಾಸರಸ್ವತಿಯೆ ಮಾೞ್ಕೆಮಗಿಲ್ಲಿಯೆ ವಾಗ್ವಿಳಾಸಮಂ ॥ ೯

ಅನುಯೋಗಕುಸುಮಪಾದಪ
ಮನೇಕನಯಲತಿಕಮಂಗಫಲಮಹಿಜಂ ಸ ।

---

1ಗ.—ದ್ಯೋತಿಸು. 2ಕ. ಗ.—ಮೊಂದುಂ. 3ಗ.—ದೆಂದುಂ ಮೋಹ. 4ಗ.—ತರಳತರ.
5ಖ.—ಸಾಂದರ. 6ಖ.—ೞ್ಕೆಮಗಿರದಾಗಳುಂ. 7ಖ.—ವಾಣಿಯೆ. 8ಕ. ಗ.—ರೂಪು.

ದ್ವನಜವನನಮಮಗೆ ವಿಶ್ರಮ[1]
ವನಮಕ್ಕತಿವಿಶ್ರುತಶ್ರುತಸ್ಕಂದವನಂ ॥ ೧೦

ಶ್ರೀವತ್ಸವಂತಭದ್ರ
ಸ್ವಾಮಿಗಳ ಜಗತ್ಪ್ರಸಿದ್ಧಕವಿಪರಮೇಷ್ಠಿ ।
ಸ್ವಾಮಿಗಳ ಪೂಜ್ಯಪಾದ
ಸ್ವಾಮಿಗಳ ಪದಂಗಳೀಗೆ ಶಾಶ್ವತಪದಮಂ ॥ ೧೧

ಆರ್ಯನುತಗೃಧ್ರಪಿಂಛಾ
ಚಾರ್ಯಜಟಾಚಾರ್ಯವಿಶ್ರುತಶ್ರುತಕೀರ್ತ್ಯಾ ।
ಚಾರ್ಯಪುರಸ್ಸರಮಪ್ಪಾ
ಚಾರ್ಯಪರಂಪರೆಯೆ ಕುಡುಗೆ ಭವ್ಯೋತ್ಸವಮಂ ॥ ೧೨

ಎಮಗೆ ಮಲಧಾರಿಸಿದ್ಧಾಂ
ತಮುನೀಶ್ವರಚರಣಸರಸಿಜಾತಂ ದೇವೇಂ ।
ದ್ರಮುನಿಪದಾಬ್ಜಂ ಜಯನಂ
ದಿಮುನಿಕ್ರಮಕಮಳಮೀಗೆ ಬೋಧೋದಯಮಂ ॥ ೧೩

ಮುನಿಜನದೋದಿಸಿದೋಜೆಯೊ
ಳನುವದಿಪ್ಪುದಿದೊಂದೆ[2] ಕೊಂಡಕುಂದಾನ್ವಯನಂ ।
ದನವನಶುಕಮೆಂದೆನಗಿನಿ
ಸನುಗ್ರಹಂಗೆಯ್ಗೆ ಕರುಣದಿಂ ಮುನಿನಿವಹಂ ॥ ೧೪

ಪರಮಜಿನಮಾಲೆ ವರಗಣ
ಧರಮಾಲೆ ಮುನೀಂದ್ರಮಾಲೆ ಮುನಿಮಾಲೆ ನಿರಂ ।
ತರಮೀಗೆ ಭವ್ಯಮಾಲೆಗೆ
ಪರಾರ್ಥ್ಯಗುಣರತ್ನಮಾಲೆಯಂ ದಯೆಯಿಂದಂ ॥ ೧೫

ತಮಮಂ ದ್ಯುಮಣಿಮಯೂಖೋ
ದ್ಗಮಮಳೆವವೊಲಳೆಗೆ ಜಗದ ಮಿಥ್ಯಾತ್ವತಮ ।

---

1 ಕ.—ವಿಶ್ರುತ. 2 ಕ.—ದೊಂದು.

ಸ್ತಮಮನಕಳಂಕದೇವ
ಪ್ರಮಾಣರತ್ನಪ್ರದೀಪರಶ್ಮಿಕಳಾಪಂ || ೧೬

ಮೃದುಪದಗತಿಯಿಂ ರಸಭಾ
ವದ ಪೆರ್ಚಿಂ ಪಣ್ಯವನಿತೆವೋಲ್[1] ಕೃತಿ ಸೌಂದ |
ರ್ಯದ ಚಾತುರ್ಯದ ಕಣಿಯೆನಿ
ವಿದಗ್ಧಬುಧಜನದ ಮನಮನಲೆಯಲೆ ವೇಡಾ[2] || ೧೭

ಕಿವಿಯಿಂ[3] ಬಗೆವುಗುವೊಡೆ ಕೊಂ
ಕುವೆತ್ತ ಪೊಸನುಡಿಯೆ ಪುಗುಗುಮುಳ್ಳದುದು ಸಱುಸ್ತೈ |
ತವಚಱನೆ ಮಾಡಿ ಸಱುಸ್ತೈ
ತು ಪೋಕುಮೇಂ ಬಗೆಯ ಬಟ್ಟೆಯುಂ ಮುಟ್ಟುಗುಮೇ || ೧೮

ಮೃದುಮಧುರವಚನರಚನೆಯೊ
ಳು[4]ದಾತ್ತಮರ್ಥಪ್ರತೀತಿಯುಂ ಕೇಳ್ವ ಜನ |
ಕ್ಕಿದಿರೊಳ್ಕು[5]ಡದಂದದು[6] ಕ
ಬ್ಬದೊಳಿರ್ದುಂ ಕವಿಯ ಮನದೊಳಿರ್ದಂತೆ ವಲಂ[7] || ೧೯

ಕವಿತಾರಹಸ್ಯಮಂ ಸ
ತ್ಕವಿಯಱಿಗುಮನೇಕಮೂಕನೇಡಂ ಜಡನೆಂ |
ಬವನಱಿಗುಮೆ ವಿಟನಱಿಗುಂ
ಕುವಿಟಂ ಸ್ತ್ರೀರತರಹಸ್ಯದೊಳಗಱಿದಪನೇ || ೨೦

ಭಾಷಾವಿದರ್ಕವಿತ್ವವಿ
ಶೇಷಜ್ಞರ್ನಿಕಷರಪ್ಪೊಡಪ್ಪುದು ಸಭೆಯೊಳ್ |
ಮಾಷಮುಖದಂತೆ[8] ದೋಷಗ
ವೇಷಣಪರರಪ್ಪರೆಂದೊಡದು ತೆಗೆಱಿಲ್ತೆ || ೨೧

---

1ಕ.—ಪುಣ್ಯವನಿತೆಯೊಲ್. 2ಖ.—ನಲೆಯಲ್ವೇಡಾ. 3ಗ.—ಕಿವಿಗಿಂ. 4ಖ.—ಯನು. 5ಖ.—ದಿರ್ಗೊಳಿಕು; ದಿಱೊಳಿಕು. 6ಕ.—ದಂದುಂ. 7ಕ.—ಪೊಲಂ. 8ಕ.—ಮಾಷಮುಖರಂತೆ; ಗ.—ಮೋಷಮುಖದಂತೆ.

ಧಿಷಣರ ಕೃತಿಗಳೊಳೆಸೆವಖಿ
ಲಷಿತಗುಣಂಗಳನೆ ಬಿಸುಟು ಮಾತ್ಸರ್ಯಮಹಾ।
ವಿಷಮಮತಿಯಿಂದೆ ದೋಷಾ
ವಿಷಮನೆ[1] ಪೊರ್ದಿಪ್ಪುವಲ್ತೆ ಕುಕವಿಬಕಂಗಳ್॥ ೨೨

*ಕೋಗಿಲೆಯ ಸರವರಣ್ಯದೊ
ಳೇಗೆಯ್ದುದೊ ಮೂರ್ಖಜಡಜನಾರಣ್ಯದೊಳಂ।
ಪೋಗಡಿಸಿದ ಕವಿಶಬ್ದಮ
ದೇಗೆಯ್ದುದರಣ್ಯರುದಿತಮದು ಬಗೆವಾಗಳ್॥ ೨೩

ಇರು ಮರುಳೆ ಶುಷ್ಕವೈಯಾ
ಕರಣಂಗಂ ಶುಷ್ಕತಾರ್ಕಿಗಂಗಂ ಬೆಳ್ಳ।
ಕ್ಕರಿಗಂಗಂ ವಿಷಯಮೆ ಕಾ
ವ್ಯರತ್ನಮತಿಚತುರಕವಿಕದಂಬಕವಿಷಯಂ॥ ೨೪

ಗುರು ದೇವೇಂದ್ರಮುನೀಂದ್ರನಿಂದ್ರನಮಿತಂ ದೇವಂ ಕಥಾನಾಯಕಂ
ಪುರುದೇವಂ ಕಥೆಯುಂ ತದಾದಿಪುರುಷಪ್ರಸ್ತುತ್ಯಜನ್ಮಾಳಿಬಂ।
ಧುರಮೆಂದಂದೆ ಮದೀಯವಾಗ್ವಿಭವವಿನ್ಯಾಸಂ ಬಲಂಬೆತ್ತುದಿ
ನ್ನಿರು ಬಲ್ಲಿತ್ತಱ ಕೋಡು ಕೂರಿತದನಂತಿಂತುಂತೆನಲ್ಬ[2]ರ್ಕುಮೇ॥ ೨೫

ವಿದಿತಂಪ್ರಾತೀತಿಕಂ[3] ಕೋಮಳಮತಿಸುಭಗಂ ಸುಂದರಂ ಸೂಕ್ತಿಗರ್ಭಂ
ಮೃದುಸಂದರ್ಭಂ ವಿಚಾರಕ್ಷಮಮುಚಿತಪದಂ ಶ್ರವ್ಯಮವ್ಯಾಕುಳಂವ್ಯಾ।
ಪ್ತದಿಗಂತಂ ಕಾವ್ಯಮೆಂದನ್ವಿತಸುಕವಿಜನಂ ಮೆಚ್ಚೆ ನಿಚ್ಚಂ ಮನಂಗೊ
ಳ್ವುದಱಿಂದಂನೆಟ್ಟನೀತಂಸುಕವಿಜನಮನೋಮಾನಸೋತ್ತಂಸಹಂಸಂ॥ ೨೬

ಇದು ನಿಚ್ಚಂ ಪೊಸತರ್ಣವಂಬೊಲತಿಗಂಭೀರಂ ಕವಿತ್ವಂ ಜಗ
ಕ್ಕದಱಿಂದಂ ಕವಿತಾಗುಣಾರ್ಣವನಿಳಾಲೋಕೈಕವಿಖ್ಯಾತನ।

---

[1] ಖ.—ಮಹಾ। ವಿಷಮತೆಯಿಂ ಪೊಸಯಿಸಿ ತಾಂ। ವಿಷಮನೆ . . .॥
[2] ಕ.—ನಂತಿಂತೆಂದೆನಲ್ಬ. [3] ಗ.—ವಿದಿತಪ್ರಾತೀತಿಕಂ.
* ಈಪದ್ಯವು ಖ. ಗ. ಗಳಲ್ಲಿಲ್ಲ.

ಭ್ಯುದಯಪ್ರಾಪ್ತಿನಿಮಿತ್ತಮುತ್ತಮಯಶಂ ಸಂಸಾರದೊಳ್ಸಾರವ
ಪ್ಪುದಱಿಂ[1] ಧರ್ಮಮದಂ ನಿಮಿರ್ಚುವುದಱಿಂ ಸಂಸಾರಸಾರೋದಯಂ ||

ಅತಿಸುಭಗಗೆ ಸಂದ ಸರ
ಸ್ವತಿಗೀತನ ಲಲಿತವಾಗ್ವಿಳಾಸಮೆ ದಲಲಂ[2] |
ಕೃತಿಯುವ್ರೊಲೆಸೆದಪ್ಪುದು ಜಗ
ತ್ಪ್ರತೀತನೀತನೆ ಸರಸ್ವತೀಮಣಿಹಾರಂ || ೨೮

*ಕದಳೀಗರ್ಭಶ್ಯಾಮಂ
ಮೃದುಕುಟಿಲಶಿರೋರುಹಂ ಸರೋರುಹವದನಂ |
ಮೃದುಮಧ್ಯಮತನು ಹಿತಮಿತ
ಮೃದುವಚನಂ ಲಲಿತಮಧುರಸುಂದರವೇಷಂ || ೨೯

ವತ್ಸಕುಲತಿಲಕನಭಿಜನ
ವತ್ಸಳನಭಿಮಾನಮೂರ್ತಿ ಸುಕವಿಯಶೋನಿ |
ವರ್ಣತ್ಸರನಮೃತಮಯೋಕ್ತಿ ಶ
ರತ್ಸಮಯಸುಧಾಂಶುವಿಶದಕೀರ್ತಿವಿತಾನಂ || ೩೦

ವನಿತಾಕಟಾಕ್ಷಕುವಲಯ
ವನಚಂದ್ರಂ ಯುವತಿಜಘನಕಾಂಚೀರತ್ನಂ |
ಸ್ತನಭರವಿನಮ್ರಗಣಿಕಾ
ಸ್ತನತಟ[3]ಹಾರಂ ಸರಸ್ವತೀಮಣಿಹಾರಂ || ೩೧

ಕೇರಳವಿಟೀಕಟೀಸೂ
ತ್ರಾರುಣಮಣಿ ಮಲಯಯುವತಿದರ್ಪಣನಾಂಧ್ರೀ |
ನೀರಂಧ್ರಬಂಧುರಸ್ತನ
ಹಾರನುದಾರಂ ಸರಸ್ವತೀಮಣಿಹಾರಂ || ೩೨

---

1ಕ.—ಮಪ್ಪುದುತಾಂ. 2ಕ.—ಸದಲಂ. 3ಕ.—ಸ್ತನಮಣಿ.

*ಕ. ಪದ್ಯಗಳು 31, 32, 30, 29 ಈ ಕ್ರಮದಲ್ಲಿವೆ.
ಗ. ,, 31, 32, 29, 30 ಈ ಕ್ರಮದಲ್ಲಿವೆ.

ದುಂದುಭಿಗಭೀರನಿನದಂ
ದುಂದುಭಿಸಂವತ್ಸರೋದ್ಭವಂ ಪ್ರಕಟಯಶೋ ।
ದುಂದುಭಿ ಸಿಂಹಾಸನಸುರ
ದುಂದುಭಿಪತಿಚರಣಕಮಳಭೃಂಗಂ ಪಂಪಂ ॥ ೩೩

ಎಂದಿಂತು ತಮ್ಮ ತಮ್ಮಱು
ಗಿಂದಂ ಪೆಸರಿಟ್ಟು ಬುಧಸಮೂಹಮಿದಂ ಪೇ ।
ೞೆಂದೊಡೆ ಪೇೞಲ್ಕಂಬಗೆ
ದಂದೆನಿದೆಂನಳವೆ ಗಣಧರೋದಿತಚರಿತಂ ॥ ೩೪

ಪುರುದೇವಾದಿಜಿನೇಂದ್ರಮಾಳೆ ಗಣಭೃತ್ಸಂತಾನಮೊಂದೀಪರಂ
ಪರೆಯಿಂ ವಿಶ್ರುತವೀರಸೇನಜಿನಸೇನಾಚಾರ್ಯಪರ್ಯಂತಮಾ ।
ಗಿರೆ ಬಂದೀಕಥೆ ಗುಣ್ಪುವೆತ್ತುದವರುಂ ಜ್ಞಾನರ್ಧಿಸಂಪನ್ನರೆಂ
ದಿರದಾಂ ಧೃಷ್ಟನೆ[1]ನೀಕಥಾಬ್ಧಿಯುಮನೇನೀಸನ್ಮನಂದಂದೆನೋ ॥ ೩೫

ಕವಿತೆಯೊಳಾಸೆಗೆಯ್ವ ಫಲಮಾವುದೊ ಪೂಜೆ ನೆಗೞ್ತೆ ಲಾಭಮೆಂ
ಬಿವೆ ಪಲಮಿಂದ್ರಪೂಜೆ ಭುವನಸ್ತುತಮಪ್ಪ ನೆಗೞ್ತೆ ಮುಕ್ತಿ ಸಂ।
ಭವಿಸುವಲಾಭಮೆಂಬಿವೆ ಜಿನೇಂದ್ರಗುಣಸ್ತುತಿಯಿಂದೆ ತಾಮೆ ಸಾ
ರವೆ ಪೆಱರೀವುದೇಂ ಪೆಱಱು ಮಾಡುವುದೇಂ ಪೆಱಱಿಂದಮಪ್ಪುದೇಂ ॥ ೩೬

ಪೆಸರ್ಗೊಂಡಿಂದ್ರನರೇಂದ್ರವಂದ್ಯನನೊಱಲ್ದಿತ್ತಾನುಮೋರೊರ್ಮೆ ಚಿಂ
ತಿಸಿದೊಂಗಂ ಪವಣಿಲ್ಲ ಪುಣ್ಯಮೆನೆ ಪೂಣ್ದೊಳ್ಪಿಂದಮೋರಂತೆ ಭಾ ।
ವಿಸಿ ತಾಂ ತನ್ಮಯನಾಗಿ ತಚ್ಚರಿತಮಂ ಕಾವ್ಯಂಗಳೊಳ್ಕೂಡೆ ಬಂ
ಣಿಸಿ ಪೇೞ್ದಾತನ ಕರ್ಮನಿರ್ಜರೆಯನಂತಿಂತುಂತೆನಲ್ಬರ್ಕುಮೋ[2] ॥ ೩೭

ಇದುವೆ ಸುಕವಿಪ್ರಮೋದ
ಪ್ರದಮಿದುವೆ ಸಮಸ್ತಭವ್ಯಲೋಕಪ್ರಮುದ ।
ಪ್ರದಮೆನೆ ನೆಗೞ್ದಾದಿಪುರಾ
ಣದೊಳಱಿವುದು ಕಾವ್ಯಧರ್ಮಮಂ ಧರ್ಮಮುಮಂ ॥ ೩೮

1ಖ.—ದಿರದೋದೃಪ್ತನೆ. 2ಕ. ಗ.—ತಿಂತೆಂದು ಪೇೞ್ವಂತುಟೇ.

ನೆಱವಂ ತಾಳ್ದಿದಪಾಸ್ತದುರ್ನಯತಮೋಬಂಧಂ ಶ್ರುತಸ್ಕಂದಮಾ
ದಱಿವಿಂದಂ ಗಣನಾಯಕರ್ಸಮಱೆ ಭವ್ಯಶ್ರೇಣಿಗವ್ಯಾಜದಿಂ ।
ದಱಿಯ[1]ಲ್ಕಾಲ್ಕನುಯೋಗಮಾದುದದಱೊಳ್ಪ್ರಥಮಾನುಯೋಗಾಬ್ಧಿಯಂ[2]
ಪೊಱಪೊಣ್ಮಿತ್ತದು ವೇಳೆಯಂತೆ ಕಥೆ ಲಂಬೋದ್ದಾಮವೀಚೀಚಯಂ॥ ೩೯

ಪಾಪಹರಂ ಪ್ರಕಾಶಿತವೃಷಂ ವೃಷಭಂ ವೃಷಧ್ವಜಂ ಮಹಾ
ಷ್ಟಾಪದಶೈಲದೊಳ್ವಿಜಿತಘಾತಿಚತುಷ್ಟಯನತ್ಯುದಾರರಾ ।
ಗೋಪನತಾಮರೇಂದ್ರದನುಜೇಂದ್ರನರೇಂದ್ರಪದಂ ಸಮಸ್ತವಿ
ದ್ಯಾಪತಿ ನಾಭಿನಂದನನುಪಾಶ್ರಿ[3]ತಭವ್ಯಜನಾಭಿನಂದನಂ ॥ ೪೦

ಇರೆ ಹರಿಪೀಠದೊಳ್ಭರತನಾದರದಿಂ ಬೆಸಗೊಂಡುದಂ ಜಿನೇ
ಶ್ವರಮತದಿಂದಮಾ[4]ವೃಷಭಸೇನಗಣಾಗ್ರಣಿ ಪೇೞ್ದುದಂ ಸವಿ ।
ಸ್ತರದೊಳೆವರ್ಧಮಾನಜಿನ[5]ಸಂನಿಧಿಯೊಳ್ವಿಪುಳಾದ್ರಿಯೊಳ್ನಿಜಾ
ದರದೊಳೆ ಗೌತಮರ್ಮಗಧನಾಯಕನುಂ ತಿಳವಂತು ಪೇೞ್ದುದಂ ॥ ೪೧

ಪ್ರಾಣಿಹಿತಮಂ ವಿನೇಯ
ಪ್ರೀಣನಕರಮಂ ಜಗತ್ತ್ರಯಪ್ರಕಟಿತಕ ।
ಲ್ಯಾಣಮನೀನೆಗೞ್ದಿಪು
ರಾಣಮನಪರಿಮಿತಭಕ್ತಿಯಿಂ ವಿರಚಿಸುವೆಂ ॥ ೪೨

ವಚನ ॥ ಆಪುರಾಣಕ್ಕಂ ಲೋಕಾಕಾರಕಥನಮುಂ ದೇಶನಿವೇಶೋಪದೇಶಮುಂ ನಗರಸಂಪತ್ಪರಿವರ್ಣನಮುಂ ರಾಜ್ಯರಮಣೀಯಕಾಖ್ಯಾನಮುಂ ತೀರ್ಥಮಹಿಮಸಮರ್ಥನಮುಂ ಚತುರ್ಗತಿಸ್ವರೂಪನಿರೂಪಣಮುಂ ತಪೋದಾನವಿಧಾನವರ್ಣನಮುಂ[6] ತತ್ಫಳಪ್ರಾಪ್ತಿಪ್ರಕಟನಮುಮೆಂದಿಂತವಯವಂಗಳೆಂಟಕ್ಕುಂ.

ಅವಱೊಳ್ಲೋಕಮದೆಂತುಟೆಂದೊಡೆ ಸಮಂತಾವಂಗಮೆತ್ತಿತ್ತ ನೋ
ಡುವೊಡಂ ನೋಡಲನಂತಮಪ್ಪ ವಿಭುವಪ್ಪಾಕಾಶಪದ್ಮಕ್ಕೆ ತಾ ।

---

1ಕ.—ಪ. 2ಕ.—ಯಿಂ. 3ಕ.—ರ್ಜಿ
4ಕ.—ಮತಮಾರ್ಗಮಂ. 5ಕ.—ಮಾನಮುನಿ. 6ಕ.—ತಪೋಧನವ್ಯಾವರ್ಣನಮುಂ.

ನೆ ವಲಂ ಕರ್ಣಿಕೆಯಿಂದಮಾಯ್ತೆನೆ ವಿಯನ್ಮಧ್ಯಸ್ಥಮಂತಸ್ಸ್ವಕ
ರ್ಮವಶಭ್ರಾಮ್ಯದನೇಕಜೀವನಿವಹಕ್ರೀಡೀಕೃತಾಭ್ಯಂತರಂ ॥ ೪೨

ಅದನಾದ್ಯನಿಧನ[1]ಗುಣಯುತ
ಮದಕೃತ್ರಿಮಮಮದು ಮರುತ್ತ್ರಿಕಾವೇಷ್ಟಿತಮಂ ।
ತದು ಸುಪ್ರತಿಷ್ಠ[2]ಕೋಪಮ
ಮದು ಜಿನಮತದೊಳ್ ದ್ವಿಸಪ್ತರಜ್ಜೂತ್ಸೇಧಂ ॥ ೪೪

ಸ್ಫುಟವೈಶಾಖಸ್ಥಾನಂ ಕಟಿ
ತಟವಿನ್ಯಸ್ತಹಸ್ತಯುಗನಾಗಿ ಮಹಾ ।
ಲಟಹಂಬೆರಸಿರ್ದೊಪ್ಪುವ
ನಟನಾಕೃತಿ ತಾನೆ ಲೋಕ[3]ದೊಂದಾಕಾರಂ ॥ ೪೫

ಮಾಡುವ ಕಿಡಿಸುವ ಗಸಣಿಗೆ
ನಾಡೆಯುಮದು ಪೊಱಗು ಸಹಜನಿಯತಸ್ಥಿತಿ ನಾ ।
ಡಾಡಿಯ ನರರ್ಗದು ಬಗೆಯಲ್
ಕೂಡದಧಸ್ತಿರ್ಯಗೂರ್ಧ್ವಭೇದವಿಭಿನ್ನಂ ॥ ೪೬

ವಿತ್ರಸ್ತಕರ್ಮರಿಪುವ ಜ
ಗತ್ತ್ರಯದೀಪಕನ ಕಾಣ್ಕೆಗೊಳಗಾದುದು ಲೋ ।
ಕತ್ರಯಮದನುಕ್ರಮದೊಳ್
ವೇತ್ರಾಸನಝಲ್ಲರೀಮೃದಂಗಸಮಾನಂ ॥ ೪೭

ವ ॥ ಆಲೋಕತ್ರಯಮಧ್ಯದೊಳ್ ಮಧ್ಯಮಲೋಕಮೆಂಬ ಪೆಸರಂ ಪಡೆದು,

ಪರ್ಯಾಯಂದಪ್ಪದೆಂಸುತ್ತಿ ಱಿದುವೊವಳಯಾಕಾರದೊಂದೊಂದನತ್ಯಾ
ಶ್ಚರ್ಯಂ ದ್ವೀಪಾಬ್ಧಿವರ್ಗಕ್ರಮಮದುವುಮಸಂಖ್ಯಾತಮಾಸಂಖ್ಯೆಯೊಳ್ತಾ ।
ತ್ಪರ್ಯಂಗೆಯ್ವಂನವೆಂಬಗ್ಗಳಿಕೆಯಿನೆಸೆದತ್ತೇಕರಜ್ಜುಪ್ರಮಾಣಂ [೪೮
ತಿರ್ಯಗ್ಲೋಕಂ ಸ್ವಯಂಭೂರಮಣಜಳಧಿಪರ್ಯಂತಮಂತಾಗುವನ್ನಂ ॥

---

[1]ಕ.—ದಿ ನಿಧನ. [2]ಕ.—ಸುಪ್ರತಿಷ್ಟ. [3]ಗ —ಭುವನ.

ವ॥ ಆತಿರ್ಯಗ್ಲೋಕದ ನಟ್ಟನಡುವೆ ಲವಣಜಲಧಿಪರಿವೃತಮಾಗಿ ಭರತ, ಹೈಮವತ, ಹರಿವರ್ಷ, ವಿದೇಹ, ರಮ್ಯಕ, ಹೈರಣ್ಯವತೈರಾವತಂಗ ಳೆಂಬೇೞು ಜನಪದಂಗಳಿಂದಂ ಪೂರ್ವಾಪರಾಯತಂಗಳುಂ, ಹೇಮಾರ್ಜುನ ತಪನೀಯವೈಡೂರ್ಯವಜ್ರರಜತಹೇಮಮಯಂಗಳುಂ, ಮಣಿವಿಚಿತ್ರಪಾ ರ್ಶ್ವಂಗಳುಮಧಸ್ಸ್ಥಳೋಪರಿಮತಳಸಮಾನವಿಸ್ತಾರಂಗಳುಮಪ್ಪ ಹಿಮವ ನ್ಮಹಾಹಿಮವನ್ನಿಷಧನೀಳರುಗ್ಮಿಶಿಖರಿಗಳೆಂಬ ವರ್ಷಧರಮಹೀಧರಂಗಳಿಂ ದಂ ಇನ್ನೂಱುಕನಕಗಿರಿಗಳಿಂದಂ ನಾಲ್ಕುನಾಭಿನಗಂಗಳಿಂದಂ ಮೂವತ್ತ ನಾಲ್ಕು[1]ವಿಜಯಾರ್ಧಪರ್ವತಂಗಳಿಂದಮನಿತೆ ವೃಷಭಾದ್ರಿಗಳಿಂದಂ ಚತು ರ್ದಶಮಹಾವಾಹಿನಿಗಳಿಂದಮೆಸೆದು,

ಅತಿವೃತ್ತದೆ ರವಿಬಿಂಬಾ
ಕೃತಿ ಯೋಜನಶತಸಹಸ್ರವಿಷ್ಕಂಭಂ ವಿ।
ಶ್ರುತಜಂಬೂವೃಕ್ಷಮಹಾ
ಪ್ರತೀತಿಯಿಂ ನೆಗೞ್ದುದಿಳೆಗೆ ಜಂಬೂದ್ವೀಪಂ॥ ೪೯

ವ॥ ಆಜಂಬೂದ್ವೀಪದ ನಟ್ಟನಡುವೆ ನವನವತಿಯೋಜನಸಹಸ್ರೋತ್ಸೇ ಧಮುಂ ಯೋಜನಸಹಸ್ರಾವಗಾಹಮುಂ ಸರ್ವರತ್ನಜಾಂಬೂನದವೈಡೂ ರ್ಯಮಯಮುಂ ಅಂತರಾಂತರನಿರಂತರಕಾಂತಸೋ[2]ಮಯಮವರುಣಕುಬೇ ರಪ್ರಮುಖಲೋಕಪಾಲಾಭಿಯೋಗ್ಯದಿಗ್ಗಜೇಂದ್ರದೇವವಿಹಾರಪ್ರಾಸಾದಾಭಿ ರಾಮಮುಂ[3] ಅನೇಕನಾಕನಾಯಕಲೋಕಪಾಳಲೀಲಾಭವನಾಧ್ಯಾಸಿತ ಮುಂ ಪದ್ಮವೇದಿಕಾಪರಿವೃತರತ್ನತೋರಣಾಂಚಿತಜಿನಭವನಪರಿವೃತಮುಂ ಪಂಚರತ್ನಮಯಸುಶ್ಲಿಷ್ಟಾಷ್ಟಾದಶಸಹಸ್ರಲಕ್ಷಣವ್ಯಂಜನಾಂಕಿತಾಷ್ಟಶತಕ ಳಶಭೃಂಗಾರಾದ್ಯುಪಕರಣೋಪಶೋಭಿತಮುಂ ವೈಡೂರ್ಯದಂಡಮು ಕ್ತಾಮಣಿಜಾಳಾಳಂಕೃತರತ್ನಶಲಾಕಾಶತಕಾಂಚನಕುಂಭಬಿಂಬರಜತಚ್ಛದ ಚ್ಛತ್ರವಿಚಿತ್ರಜಿನೇಂದ್ರಪ್ರತಿಕೃತಿಪ್ರಕೀರ್ಣಮುಂ ಭದ್ರಸಾಲಾನಂದನಸೌ ಮನಸಪಾಂಡುಕವನವಿರಾಜಿತಮುಂ ಪಾಂಡುಕಪಾಂಡುಕಂಬಳರಕ್ತಕಂಬ ಳಾತಿರಕ್ತಕಂಬಳವಿಶಾಲರತ್ನಶಿಲಾತಳಪ್ರತಿಷ್ಠಿತಭಗವಜ್ಜನ್ಮಾಭಿಷೇಕಸಿಂ ಹಾಸನಾಳಂಕೃತಮುಮಾಗಿ,

---

[1]ಕ.—ಮೂವತ್ತಾಱು. [2]ಕ.—ಸ್ತೋ [3]ಗ.—ಧಾರಾಮಮುಂ.

ನೆಲಸಿರ್ದಪ್ಪುದಧಸ್ಸ್ಥಳಂಬಿಡಿದಧೋಲೋಕಂ ಸಮಂತೆಯ್ದೆ ಸು
ತ್ತಲುಮಿರ್ದಪ್ಪುದು ಮಧ್ಯಲೋಕಮೆಸೆದಿದಾ[1]ಚೂಳಿಕಾಭಾಗದಾ।
ದಲೆಯೊಳ್ನಿಂದಪುದೂರ್ಧ್ವಲೋಕಮೆನೆ ಮೂಲೋಕಕ್ಕೆ ಪೆಂಪಿಂದಗುಂ
ದಲೆಯಾಗಿರ್ದುದು ದೇವದಂಪತಿರತಶ್ರೀಸುಂದರಂ ಮಂದರಂ॥ ೫೦

ವ॥ ಆಮಂದರದ ಪೂರ್ವಾಪರದಿಗ್ವಿಭಾಗಂಗಳೊಳ್ ವಿದೇಹಂಗಳಿರ್ದು
ವಲ್ಲಿ,

ಪದನಂ ಕಾಣಿಸಿ ಕೊಳ್ವವಲ್ಲಿ ಮಠೆಗಳ್ ಷಡ್ಭಾಗಮಂ ಕೊಂಡು ತ
ಪ್ಪದೆ ಭೂಪರ್ ಪ್ರತಿಪಾಳಿಪರ್ ಪ್ರಜೆಗಳಂ ಶ್ರೀಜೈನಧರ್ಮಂ ಪೊದ।
ಪ್ದಿದವೃತ್ತಿರ್ಪುದು ಮತ್ತಿನನ್ಯಸಮಯಕ್ಕುತ್ಪತ್ತಿಯಿಲ್ಲೊಂದಱೊಳ್
ಪದಿನಾಱಾಗಿ ನಿರಂತರಂ ಸೊಗಯಿಕುಂ ಮೂವತ್ತೆರಡುನಾ[2]ಡುಗಳ್॥ ೫೧

ತೊಲಗದು[2] ಪುಬ್ಬಕೋಟಿಪರಿಸಂಖ್ಯೆವರಂ ಪರಮಾಯುಮುಕ್ಕೆ ಸರಾ
ಯಿಲಮಱಿಯೇಱು ಮಾರಿ ಪಸವಿಟ್ಟ ಬಱಂ ಪೆಱವುಂ ಭಯಂಗಳಾ।
ಕುಲಿತೆಗಳಿಲ್ಲ ಧಾತ್ರಿ ಪುಸಿವೋಗದು ಪಂಚಧನುಶ್ಶತಂ ಪಪ
ಣ್ಣೆಲೆ[3] ನರರ್ಗೆಂದೊಡಿನ್ನಿಮಿರೆ[4] ಬಣ್ಣಿಸಲಾನಱಿಯೆಂ ವಿದೇಹಮಂ॥ ೫೨

ಉತ್ತಮತಪಂಗಳಿಂದ
ತ್ಯುತ್ತಮದೇಹರ್ ವಿದೇಹರಪ್ಪುದಱಿಂ[5]ಮಿ।
ಯ್ವೆತ್ತನ್ವರ್ಥತೆಯಂ ತಾ
ಳ್ದಿತ್ತು ವಿದೇಹಂ ವಿದೇಹಮೆಂಬೀಪೆಸರಂ॥ ೫೩

ವ॥ ಅಲ್ಲಿ ಪಶ್ಚಿಮವಿದೇಹಮಧ್ಯಭೂಭಾಗ[6]ಕ್ಕಳಂಕಾರಮಾಗಿ ಪಂಚಶತ
ಯೋಜನಪ್ರಮಾಣವಿಸ್ತೀರ್ಣಮುಮಪ್ಪ,

ಪ್ರಿಯಹಂಸೀಯುತಹಂಸನಾದೆಯ ಮಹಾಕುತ್ಕೀಲಕೂಟಪ್ರಭೇ
ದೆಯ ತೀರಸ್ಥಲವಂಗಚೂತಲವಲೀಪುಷ್ಪಾಸವಾಸ್ವಾದಿತೋ।
ದ[7]ಯುತೋನ್ಮಾದೆಯ ತದ್ವಿದೇಹಜನತಾಸ್ವಾಂತಾರ್ಪಿತೋದ್ವೃತ್ತಪ್ರಮೋ
ದೆಯ ಸೀತೋದೆಯ ಪೋಲ್ವೆಗಿಲ್ಲ[8] ತೊಱೆಗಳ್ ವಿಶ್ವಂಭರಾಭಾಗದೊಳ್॥ ೫೪

---

1ಕ.—ಮೆನಿಸಿದಾ. 2ಕ.—ಗದೆ. 3ಖ.—ಶ್ಶತಪ್ರಮಾಣ್ಣೆಲೆ.
4ಖ.—ಡಿನ್ನರಿಯೆ ಬಣ್ಣಿಸ. 5ಕ.—ಪ್ಪುದರೊಳ್ಮೆ. 6ಖ. ಗ.—ಮಧ್ಯಮಭೂಮಿಭಾಗ.
7ಗ.—ಸ್ವಾದಿತಾಳಿ. 8ಗ.—ಪೋಲ್ವುದಿಲ್ಲ.

ಅದು ನೀರೇಭಕರಾಭಿಘಾತವಿಚಳದ್ವಾ[1]ರಾಶಿಯೊಳ್ ಪೋಗಿ ಕೂ
ಡಿದೊಡಾವಾರ್ಧಿಯ ಪೆಂಪುಮಾತೊಱೆಯೊಳಾ[2]ಯ್ತ್ತಂತಾ[3]ದಪೆಂಪಿಂದಮು ।
ರ್ಬಿದ[4] ಗುಣ್ಪಿಂದಮಿದಬ್ಧಿಗಗ್ಗಳಮೆನಲ್ ಕುಂದೊಂದು ಕಣ್ಗೆತ್ತಿದಂ[5]
ತಿದು ದಲ್ ನೇರ್ಗಿಱಿದೆಂದೊಡಾವ ತೊಱೆಯುಂ ಸೀತೋದೆಯಂ ಪೋಲ್ಗುಮೇ[6]

ವ॥ ಆ ಸೀತೋದಾನದಿಯ ತೆಂಕಣ ಬಡಗಣ ತಡಿವಿಡಿದಿರ್ದುವೆಂಟುನಾಡ್ಗಳ್. ಅಲ್ಲಿ—

ಬಡಗಣ ತಡಿಯೊಳಮೇೞನೆ
ಯೆಡೆಯದು ನೀಳಾಚಳಕ್ಕೆ ತೆಂಕಣದು ಬೆಡಂ ।
ಗೊಡರಿಪ ವಕ್ಷಾರಾದ್ರಿಗೆ
ಪಡುವಣದದು ಸುಜನನಿಳಯಮುಪಗತವಿಳಯಂ ॥ ೫೬

ಅಳಿಕುಳರುತಿ[7]ಗಳಿನವನತ
ಫಲತರುಗಳಿನುಚಿತಕುಸುಮಗಂಧದಿನಬಳಾ ।
ವಿಳಸನದಿಂದೀವುದು ಗಂ
ಧಿಳವಿಷಯಂ ಸಕಳವಿಷಯರಸರಸಿಕತೆಯಂ ॥ ೫೭

ಬಕಕುರರ[8]ಪಕ್ಷವಿಕ್ಷಿ
ಪ್ತಕಂಜಕಿಂಜಲ್ಕಪುಂಜಪಿಂಜರಿತಾಚ್ಛೋ ।
ದಕಪರಿಪೂರ್ಣತಟಾಕ
ಪ್ರಕರಸರೋನಿಕರರಂಜಿತಾಶಾವಳಯಂ ॥ ೫೮

ಪಸರಿಸಿ ದುಗ್ಧಾಬ್ಧಿಜಳ
ಪ್ರಸರಮನೊಡವೇಱು ಬಂದು ಕಱೆವುವು ಮೇಘ ।
ಪ್ರಸರಂಗಳಲ್ಲಿಯೆನೆ ರಸ
ಮೊಸರ್ವುವು ಪುಂಡ್ರೇಕ್ಷುವಾಟಿಕೋಟಿಗಳದಱೊಳ್ ॥ ೫೯

ಮಡಿಗ[9]ಳೊಳಗಲರ್ದ ನೆಯ್ದಿಲ
ಕಡುಗಂಪುಮನಿವಱ ಕಂಪು[10]ಗೆಲ್ದುವು ಸಾಸಿ ।

---

1ಗ.—ವಿಳಸದ್ವ್ಯಾ. 2ಗ.—ತೊಱೆಯಿನಾ. 3ಕ.—ಯ್ತ್ತಂತಾದ. 4ಕ.—ದಗುರ್ಬಿದ.
5ಕ. ಗ.—ಕುಂದೇಂದು ಕಣ್ಗೆತ್ತಿದಂ. 6ಕ.—ಪೋಲ್ಕುಮೆ. 7ಗ.—ತತಿ.
8ಕ.—ಕುರವ. 9ಗ.—ಮಡುಗ. 10ಗ.—ಕಂಪೆ.

ಮರ್ಡಿಯೆನೆ ಪೊಂಬಣ್ಣದ ಕೆಂ
ಪಿಡಿದಿರೆ ಸೊಗಯಿಪುವು[1] ಗಂಧಶಾಳಿವನಂಗಳ್ ॥ ೬೦

ಮತ್ತಮಲ್ಲಿ—

ಕೊಂಕಿದ ಕೊಂಕು ತದ್ವಿಷಯಕಾಂತೆಯ ಪುರ್ವಿನ ಕೊಂಕಿನಂತೆ ಚೆ
ಲ್ವಂ ಕುಡೆ ತಳ್ತರೆಟ್ತಡಿಯ ಪೂಮರದಿಂ ಕೞಿವೂಗಳತ್ತಮಿ ।
ತ್ತಂ ಕವಿದಲ್ಲಿ ಮೆಲ್ಲನುಗೆ ತೀಂಕುವ ಪೂವಿನ ಸಂಕರಂಗಳಂ
ನೂಂಕುವುವೂರ್ಮಿಮಾಳಿನಿಯ ತುಂಗತರತ್ತರಳೋರ್ಮಿಮಾಲೆಗಳ್ ॥ ೬೧

ಕನಕಾಂಭೋಜರಜಂ ನಿಜಾಂಗರುಚಿಯಂ ಕನ್ನೆಯ್ದಿಲಿಂದಂ ಕಱಿ
ಲ್ದಿನಿಸಂ ತೊಳ್ದು ತೆರಳ್ದಸಳ್ನಯನಮಂ ಕಂಪಂ ಕೊಳಲ್ಬರ್ಪ ಭೃಂ ।
ಗನಿಕಾಯಂ ನಿಜಕೇಶಪಾಶರುಚಿಯಂ ಕೈಕೊಳ್ವಿನಂ ಮೆಲ್ಲಮೆ
ಲ್ಲನೆ ನೋಟಕ್ಕೆ ಸದೇಹಮಾಗಿ ಸುೞಿಯುತ್ತಿರ್ಕುಂ ವಿದೇಹಾನಿಳಂ ॥ ೬೨

ವ ॥ ಅಂತನೇಕನದ್ಯುದ್ಯಾನನಾನಾಜನಪದಜನಾನುರಾಗರಸರಮಣೀಯಮಪ್ಪ ಗಂಧಿಳವಿಷಯದ ನಡುವೆ ತನ್ಮಹೀವಿಳಾಸಿನಿಯ ಮೇಲ್ಕೊಂಡ ದುಕೂಲಮುಮಂ ಅರ್ಹತ್ಪರಮೇಶ್ವರನ ವಿಶದಯಶಃಪುಂಜಮುಮಂ ಅನುಕರಿಸಿ ವಿವಿಧವಿದಗ್ಧ[2]ವಿದ್ಯಾಧರಜನಕ್ರೀಡಾನೀಡಂಗಳಾಗಿ ದಕ್ಷಿಣೋತ್ತರಶ್ರೇಢಿಗಳ್ಗೆ ರಾಜಧಾನಿಗಳಾಗಿರ್ದ ರಥನೂಪುರಚಕ್ರವಾಳಗಗನವಲ್ಲಭಾದಿಗಳಪ್ಪ ನೂಱುಪತ್ತುಂ ಪೊೞಲ್ಗಳನೊಳಕೊಂಡು ಸಪಾದಷಡ್ಯೋಜನಾವಗಾಹದೊಳಂ ಪಂಚಷಡ್ಯೋಜನಾಧೋವಿಸ್ತಾರದೊಳಂ ತದರ್ಧಯೋಜನೋತ್ಸೇಧದೊಳಂ ದಶಯೋಜನೋಪರಿಮತಳಸಮಾನವಿಸ್ತಾರದೊಳಂ ವಿದ್ಯಾಧರಾಭಿಯೋಗ್ಯದಿಗ್ಗಜೇಂದ್ರವಿಜಯಾರ್ಧಕುಮಾರನಿವಾಸಾದಿಮೇಖಳಾತ್ರಯದೊಳಂ ಸಿದ್ಧಾಯತನಪ್ರಭೃತಿ ನವಕೂಟಂಗಳೊಳಂ ನೆಱೆದು[3],

ಉತ್ಕಶಿಖಂಡಿತಾಂಡವಮನೋಹರಮುಜ್ಜ್ವಳರತ್ನರಾಜಿರಾ
ಜತ್ಕಟಕಂ ಸರಃಕನಕ[4]ಪದ್ಮಪರಾಗಪಿಶಂಗಿತಾಂಗರಂ ।
ಗತ್ಕಳಹಂಸನಾದರಮಣೀಯತರಂ ಮದದಂತಿದಾನಗಂ
ಧೋತ್ಕಟಮೊಪ್ಪುಗುಂ ಕುಮುದಪಾಂಡುರಮಾವಿಜಯಾರ್ಧಪರ್ವತಂ ॥ ೬೩

---

1ಖ. ಗ.—ಸೊಗಯಿಸುವ.
2ಕ.—ವಿವಿಧವಿದ್ಯಾವಿದಗ್ಧ.
3ಕ.—ಬೆಱೆದು.
4ಕ—ಕನತ್ಕನಕ.

ಎಳನೀರೊತ್ತಿನೊಳೊತ್ತಿ ಬರ್ಪಪೊನಲೊಳ್ಸಾಂದ್ರೇಂದುಕಾಂತೋಪಳೋ
ಚ್ಚಳಿತಾಚ್ಛಚ್ಛಜಲಪ್ರವಾಹಭರದೊಳ್ ಮಂದಾನಿಳಾಂದೋಳನಾ |
ಕುಳಿತಾರಾಮಫಲಾಮೃತೋಪಮರಸಸ್ರೋತಂಗಳೊಳ್ ಸಾಲ್ವಿನಂ
ಬೆಳೆದೋರಂತೊಱಗಿರ್ದ[1]ಶಾಳಿವನದಿಂ ಸೇವ್ಯಂ ನಗೋಪತ್ಯಕಂ || ೬೪

ನನೆಯನೆ ಪೇಱಿ ಕೆಂದಳಿರೊಳೆಯ್ದೆ ಬೞಲ್ದೆಳಮಾವು ಬಂದ ಮಾ
ವನೆ ಮಱೆಗೊಂಡು ಬಗ್ಗಿಸುವ ಕೋಗಿಲೆ ಕೋಗಿಲೆಯಿರ್ಕೆದಾಣದೊಳ್ |
ಜೆನುಗುವ ತುಂಬಿ ತುಂಬಿಯೊಳರಲ್ದಲರೆಂಬಿವಱಿಂ ಬಸಂತರಾ
ಜನ ಮನೆಯಂತೆ ಕಣ್ಗೆಸೆದು ತೋಱುಗುಮಲ್ಲಿಯ[2] ನಂದನಾಳಿಗಳ್[3] || ೬೫

ಪೊಸನನೆಯೊಳ್ ಪಸುರ್ಪಲರೊಳಂಚಿರಮಲ್ಲದ ಬೆಳ್ಪು ಪಲ್ಲವ
ಪ್ರಸರದೊಳೆಯ್ದೆ ಕಣ್ಗೆ ಪಸರಂಬಡೆದೊಪ್ಪುವ ಕೆಂಪು ತುಂಬಿಯೊಳ್ |
ಮಿಸುಗುವ ಕಪ್ಪುರ್ಬರ್ಚಿಸಿದವೊಲ್ ಬಗೆಗೊಳ್ವಿನೆಗಂ ಬಸಂತದೊಳ್
ಬಸದಿಯ ಬಾಗಿಲಂ ತೆಱೆದ ಮಾಷ್ಕೆಯೊಳಿರ್ದುವು ಬಂದ ಮಾವುಗಳ್|| ೬೬

ಅಲರ್ದಂಭೋರುಹಷಂಡಮುಳ್ಳಲರ್ದ ಚೆನ್ನೆಯ್ದಲೆಗ್ಗಳಂ ತೂಗಿ ಪ
ಣ್ಗೊಲೆಯಿಂ ಬಳ್ಕುವ ಕೌಂಗು ಕಾಯ್ದುಱುಗಲಂ ಪೇಱಿರ್ದ ಚೆಂದೆಂಗುಕ|
ಟ್ತಿಲಿಸುತ್ತಿರ್ಪೆಲೆವಳ್ಳಿ ಪಣ್ತೊಲೆವ ನಾರಂಗಂ ಫಲವ್ರಾತದಿಂ
ನೆಲನಂ ಮೋದುವ ಮಾತುಳಂಗಮೆಸೆಗುಂ ವಿದ್ಯಾಧರೋದ್ಯಾನದೊಳ್||೬೭

ಮಲರ್ದಲರ್ದನಾಗಸಂಪಗೆ
ಯಲರ್ಗಳೊಳಗ್ಗಳಿಸಿ ಬಿರಿವ ಪೊಂಬಾಳೆಯ[4] ತ |
ಣ್ಮಲೆವ ಪೊಸಗಂಪಿನೊಳ್ ಪುದಿ
ದಲೆವೆಲರಾಱಿಪ್ಪುದು ಖಚರದಂಪತಿಶತಮಂ || ೬೮

ಬೆಸನಂ ಪಾರ್ವುವು ಮಂತ್ರದೇವತೆಗಳಾದೇಬಾರ್ತೆಗಂ[5]ಬೇಗಮಾ
ಗಸದೊಳ್ ವಿದ್ಯೆಗಳೆಯ್ದೆ ಬರ್ಪುವು ಜಗತ್ಕಾಶ್ಚರ್ಯಮೈಶ್ವರ್ಯಮಾ |
ವಸಥಂ ರೂಪ್ಯಮಹೀಧರೇಂದ್ರಮೆನೆ ಪೊಣ್ಮಾವಂಗಮಂತೆಯ್ದೆ ಬ
ಣ್ಣಿಸಲೇಂ ಬರ್ಕುಮೆ ಬಾರದಂಬರಚರಶ್ರೀಯಂ ಪುರಶ್ರೀಯುಮಂ[6] || ೬೯

---

[1] ಗ.—ತೆಱಗಿರ್ದ. [2] ಕ.—ತೋಱುವುವಲ್ಲಿಯ. [3] ಕ—ನಾದಿಗಳ್.
[4] ಕ.—ಪೊಂಬಳೆಯ. [5] ಗ.—ಬಾಳ್ತೆಗಂ. [6] ಗ.—ಶ್ರೀಯಂಮನೋಹಾರಿಯಂ.

ಜಿನಪೂಜೋತ್ಸವಮಂಗಳಾನಕಮೃದುಪ್ರಧ್ವಾನದೊಳ್ ಗಾಯಕೀ
ಜನಗೀತಾ[1]ನ್ವಿತವಲ್ಲಕೀಕ್ವಣಿತದೊಳ್ ವಿದ್ಯಾಧರೀರಮ್ಯನ |
ರ್ತನರಾಗೋತ್ಥಿತಪಾರಿಹಾರ್ಯರಶನಾಮಂಜೀರಿಕೋದ್ದಾಮನಿ
ಸ್ವನದೊಳ್ ಪೊಂಪುಳಿವೋಗುತಿರ್ಪವೆರಡುಂ ವಿದ್ಯಾಧರಶ್ರೇಢಿಗಳ್ ‖ ೨೦

ವ॥ ಅವಱೊ[2]ಳುತ್ತರಶ್ರೇಢಿಯೊಳುದಗ್ರಹಿಮಶಿಖರಿಶಿಖರಶಾರದನೀರದಾಕಾರಸುಧಾಧವಳಿತೋತ್ತುಂಗಪ್ರಾಸಾದಕೂಟಕೋಟಿಸಂಕೀರ್ಣಮುಂ ಆತ್ಮೀಯಜಾತ್ಯನುರೂಪಾಚರಣ[3]ಪರಿಣತಚತುರಜನಪರಿಪೂರ್ಣಮುಂ ಅನೇಕವಿದ್ಯಾಧರರಾಜರಾಜದ್ರಾಜವೀಧೀವಿಸ್ತೀರ್ಣ[4]ಮುಮಾಗಿ,

ಬೆಳಸಿದ ಪೊನ್ನಕೋಂಟೆ ಪುರಲಕ್ಷ್ಮಿಯ ಕೈಗೆಯಲಿರ್ದ ತಾಣದೊಳ್
ಬಳಸಿದ ಪೊನ್ನಕಾಂಡಪಟ[5]ದಂತಿರೆ ರುಂದ್ರನರೇಂದ್ರಗೇಹಮಾ |
ಲಲಿತೆಯ[6] ವಕ್ತ್ರಪಂಕಜವಿಳಾಸಮನಾಂತಿರೆ ರಮ್ಯರಾಜತಾ
ಚಳತಿಳಕೋಪಮಾನಮೆನೆ ಸಂದಳಕಾಪುರವೊಪ್ಪಿ ತೋಱುಗುಂ ‖ ೨೧

ವ॥. ಅದನಾಳ್ವನಖಿಳಖಚರಪತಿಮುಕುಟಮಣಿ[7]ಗಣಕಿರಣರಾಗರಂಜಿತಚರಣನಳಿನಯುಗಳಂ ಉದಿತೋದಿತನಿಜಕುಲಮಂದರಾಚಳಮಂದಾರಪಾದಪಂ ಅನೇಕಸಮರಸಮ್ಮರ್ದನನಿರ್ಜಿತೋರ್ಜಿತಾರಾತಿಬಳಂ ಅತಿಬಳನೆಂಬಂ; ಆತನಮಹಾದೇವಿ ನಯನಮನೋಹರಿ ಮನೋಹರಿಯೆಂಬಳ್.

ಬಲಿಸುವ ರೂಪು ಗಾಡಿಯೊಳೊಡಂಬಡೆ ಗಾಡಿ ವಿಳಾಸಚೇಷ್ಟೆಯೊಳ್
ನೆಲಸೆ ವಿಳಾಸಮಂಬರಚರಾಮರಕಾಂತೆಯರೆಲ್ಲರಂ ಪಳಂ |
ಚಲೆಯ ನೆಗಟ್ತೆವೆತ್ತ ಪತಿಭಕ್ತಿಯ ಮೈಮೆಯ ಮಾನಸಿಕ್ಕೆಯ
ಗ್ಗಳದ ಪೊಗಟ್ತೆ ತನ್ನದೆನೆ ಪೆಂಪು ಮನೋಹರಿಗಲ್ಲದಕ್ಕುಮೇ ‖ ೨೨

ಹಾವವಿಳಾಸವಿಭ್ರಮಸಮನ್ವಿತರೂಪಕಳಾಪದಾಮಹಾ
ದೇವಿಗಮಾವಿಯಚ್ಚರಗಣಾಗ್ರಣಿಗಂ ಗುಣರತ್ನವಾರ್ಧಿ ನಾ |

---

[1]ಗ.—ಗಾಯಿನೀಜನಗೀತಾ. [2]ಕ.—ಅದಱೊ. [3]ಗ.—ರೂಪಾಭರಣ.
[4]ಕ.—ರಾಜರಾಜವಿವಿಧವಿಸ್ತೀರ್ಣ. [5]ಖ. ಗ—ಕನ್ನವಡ. [6]ಗ.—ಲಲನೆಯ.
[7]ಕ.—ಪತಿಮಣಿಮಕುಟರಾಗಮಣಿ.

ನಾವಿಧಸೌಖ್ಯಭಾಜನನುಪಾರ್ಜಿತಖೇಚರರಾಜಹೃದ್ಯವಿ
ದ್ಯಾವಿಭವಂ ಮಗಂ ಜಿತವಿರೋಧಿನರೇಂದ್ರಬಳಂ ಮಹಾಬಳಂ ॥ ೨೩

ವ॥ ಆಮಹಾಬಳಂ ಬಾಲಕಾಲದಿಂ[1]ತಗುಳ್ದಭ್ಯಸ್ತಸಮಸ್ತವಿದ್ಯಾಧರವಿದ್ಯಾಪಾರಗನುಂ ಪರಿಸಮಾಪ್ತಸಕಳಕಳಾವಿಜ್ಞಾನನುಂ ಅಧಿಗತಾಶೇಷ[2]ಶಾಸ್ತ್ರನುಂ ಪರಿಣತಸಕಳಶಸ್ತ್ರನುಮಾಗಿ ಯೌವನಂ ನೆಱೆಯೆನೆಱೆಯೆ.

ಮೊಗಮುತ್ಫುಲ್ಲಸರೋಜಹಾಸಿ ನಯನಂ ನೀಲಾಂಬುಜಸ್ಪರ್ಧಿ ಬಾ
ಹುಗಳಾಜಾನುವಿಳಂಬಿಗಳ್ ತೊಡೆಗಳುಂ ರಂಭಾಮೃದುಸ್ತಂಭಶೋ।
ಭೆಗಳಂ ಗೆಲ್ದುವು ವಕ್ಷಮಂಬರಚರಶ್ರೀಗೇಹಮೆಂಬೊಂದೆ ರೂ
ಪೆ ಗಡಂ ನೋಡಲೊಡಂ ಮರುಳ್ಗೊಳಿಸುಗುಂ ವಿದ್ಯಾಧರಸ್ತ್ರೀಯರಂ ॥ ೨೪

ಮನಮೊಲ್ದಾತನ ಗಾಡಿಯಂ ದರಪುರಂಗಂಡಾಕೆಗಳ್ ಪೂವಿನಂ
ಬಿನ ಕೋಲ್ಗಂ ತಳವಾಲಿನೀರ್ಗಮಲರ್ವಾಸಿಂಗಂ ಕುಳಿರ್ಕೊಳ್ವ ನಂ।
ದನಕಂ ಚಂದನಕಂ ಪಸುರ್ಪಸೆವ ಬಾಳ್ಗೊಂಪಕ್ಕನೊಂದೊಂದೆ[3]ತ
ಳ್ಪಿನಿಯೊಳ್ಕ್ರೀಡಿಸುತಿರ್ಪ[4]ಬಿಜ್ಜಣಿಗೆಗಂ ಪಕ್ಕಾಗದೇಂ ಪೋಪರೇ ॥ ೨೫

ವ॥ ಅಂತುಮಹಾಬಳಕುಮಾರಂ ಕುಮಾರಕೇಳೀವಿಳಾಸವಿಶ್ರಾಂತಸ್ವಾಂತಂ ಯುವರಾಜಪದವಿಗೆ ಯೋಗ್ಯನಾಗೆ,

ಬಳವದ್ವಿದ್ವಿಷ್ಟವಿದ್ಯಾಧರಕರಟಶಿರಶ್ಶುಕ್ತಿಸಂಭೂತಮುಕ್ತಾ
ವಳಿಯೊಳ್ಕಣ್ಗೊಟ್ಟು ತನ್ನೊಳ್ಕೆಱೆಯಲಿದು ಜಯಶ್ರೀಯ ಮುಂದಟ್ಟಿದೆಕ್ಕಾ।
ವಳಿಯೆಂಬಂತಿರ್ದುದಂ ಕಂಠಿಕೆಯನುಭಯವಿದ್ಯಾಧರಶ್ರೇಣಿಗಳ್ ಮಂ
ಗಳಗೀತಾತೋದ್ಯನಾದಂಗಳೊಳೊಳ್ ಪುದುವಿನಂ ಕಟ್ಟಿದಂ ಖೇಚರೇಂದ್ರಂ॥ ೨೬

ವ॥ ಅಂತುಕಟ್ಟಿದಾಗಳ್,

ಹಿಮಶೈಳದೊಳಂ ಜಳಧಿಯೊ
ಳಮೆಂತಭಿನ್ನಾಂಗಿ[5] ಗಂಗೆ ಸಂಗತೆ ಖಚರೋ।
ತ್ತಮನೊಳಮಾವಿದ್ಯಾಧರ
ಕುಮಾರನೊಳಮಂತೆ ಲಕ್ಷ್ಮಿ ಸಂಗತೆಯಾದಳ್ ॥ ೨೭

1ಗ.—ಕಾಲದೊಳ್. 2ಕ.—ಅಧೀತಾಶೇಷ ; ಗ—ವಿದಿತಾಶೇಷ.
3ಗ.—ಮೇರೊಂದೆ. 4ಖ.—ಯೊಳ್ಗೊಡಿಸಿರ್ಪ. 5ಖ.—ಭಿನ್ನಾಂಗೆ.

ಪೆಸರ್ಗಳ್ಕಿತ್ತು ಸಮಸ್ತಖೇಚರಬಲಂ ತೇಜಕ್ಕೆ ಬೆರ್ಚಿತ್ತು ಮುಂ
ಪೊಸಪೊಣ್ಣಂ[1] ಬೆರಸಿರ್ಪ ಭೂಚರಬಲಂ ಮೆಲ್ಪಿಂಗೆ ಮೆಚ್ಚಿತ್ತು ತ |
ನ್ನ ಸಮಸ್ತಂ ಪರಿವಾರಮೆಂಬ ಗುಣಸಂಘಾತಂ[2]ಗಳಂ ತಾಳ್ದಿ ಪೆಂ
ಪೆಸಕಂಬೆತ್ತಿರೆ ಸಂತಮಿಂತತಿಬಳಂ ರಾಜ್ಯಂಗೆಯುತ್ತಿರ್ದನಂ || ೭೮

ತೊಡರ್ದೀಪುತ್ರಕಳತ್ರಮೋಹದೊಳದೇಕರ್ದಿರ್ದಪೈ ನಿನ್ನ ಮೆ
ಳ್ಪಡಿದೇಕಾರಣಮಂತಕಂ ಕಡುಪಿನಿಂ ಕಂಠಗ್ರಹಂಗೆಯ್ವುದಿಂ |
ತಡೆಯಂ ಚೇತರಿಸೆಂದು ಬಂದು ಕಿವಿಯೊಳ್ವೇಳ್ವಂತೆವೊಲ್ಕೆಂನೆಯಿಂ
ದೊಡೆದೋರೆಂದೊಗೆ[3]ತಂದುವಂದು ನರೆಗಳ್ ವಿದ್ಯಾಧರಾಧೀಶನಾ || ೭೯

ವ || ಅಂತು ಮೇಲೆ ಬಂದ ಕೃತಾಂತರಾಜವಾಹಿನಿಯ ಸಿತಪತಾಕೆಗಳನನುಕರಿಸುವ ಪಳಿತಂಗಳಂ ದರ್ಪಣದೊಳ್ನೋಡಿ[4] ಕಂಡು ಪರಪತಾಕಿನೀ[5]ಪತಾಕೆಯಂ ಕಂಡು ಸೆರಗಿಲ್ಲದ ಗಂಡನಂತಿನಿ[6]ಸಪ್ಪೊಡಂ ಮಾಣದದುವೆ ಸಂಸಾರನಿರ್ವೇಗಕಾರಣಮಾಗೆ ;

ಕರೆದಾಗಳ್ಮಿ ಜಮನ್ತ್ರಿಮಂಡಳಮಹಾಸಾಮಂತಶುದ್ಧಾಂತಮು
ಖ್ಯರನಾವೃತ್ತಕಮೆಲ್ಲಮಂ ತಿಳಿಯೆ ಪೇಳ್ದಾಶಾಂತಮಂ ತಾಗೆ ತೂ |
ರ್ಯರವಂ ಪೊಣ್ಮೆ ಮಹಾಬಳಂಗತಿಬಳಂ ಕೊಟ್ಟಂ ಸಿತಚ್ಛತ್ರಚಾ
ಮರಸಿಂಹಾಸನಚಿಹ್ನಭಾಸುರ[7]ಮಿಯುದ್ಗಾಮೀಶ್ವರೈಶ್ವರ್ಯಮಂ || ೮೦

ವ || ಅಂತು ಮಹಾಬಳಂಗೆ ಮಹಾವಿಭೂತಿಯಿಂದಮಂಬರಚರಶ್ರೀಯನಿತ್ತು ಭವ್ಯಸಾರ್ಥಪ್ರಾರ್ಥನೀಯಮುಕ್ತಿಶ್ರೀಯನಾಸೆವಟ್ಟು ಸಕಳಮಳನಿರ್ಜರಣಕರಣಕಾರಣಮಂ ತಪಶ್ಶ್ರೀಯಂ ಕೈಕೊಳಲ್ಬಗೆದು ಸಾಸಿರ್ವರರಸುಮಕ್ಕಳುಮಯ್ನೂರ್ವರರಸಿಯರುಂ ಬೆರಸು ಗುಣಧರ[8]ಕೇವಳಿಗಳ ಪಾದಪದ್ಮಮೂಲದೊಳ್,

ಅತಿತೃಷ್ಣಾಪರನಾಗಿ ಮುನ್ನೆ ತೊಡರ್ದಿರ್ದಾಗಾಂಪೆ ಸೊಲ್ಗಂ ಮದಾ
ಕೃತಿಯಂ ಮಾಸಿಸಿ ಮುಪ್ಪುಚಪ್ಪರಿಸೆಯುಂ ಚೀ ಕೆಮ್ಮನೊಳ್ಕುಂಮಿ ಸಂ |

---

[1]ಖ.—ಪೊಸಪೊರ್ತಂ. [2]ಗ.—ಸಂದೋಹಂ. [3]ಕ.ಖ.—ದೋರಂತೊಗೆ.
[4]ಖ.ಗ.—ಪಳಿತಂಗಳಂನೋಡಿ. [5]ಕ. ಖ.—ಪರಬಳಪತಾಕಿನೀ.
[6]ಕ.—ಗಂಡಗಲಿಯಂತಿನಿ. [7]ಗ.—ಭಾಸ್ವರ. [8]ಗ.—ಗಣಧರ.

ಸ್ಮೃತಿಯೊಳ್ಮತ್ತೆಗಡಂ ಕಡಂಗಿ[1] ತೊಡರ್ದಾಂ ಮೋಹದಿ ಪೆರ್ಗೆನೆಂದಣ್ಮಿ ಘೋ
ರತಪೋವೃತ್ತಿಯನಾಂತ ಪೆಂಪತಿಬಳಂಗಕ್ಕುಂ ಪೆಱರ್ಗೆಕ್ಕುಮೇ[2] ॥ ೮೧

ವ॥ ಮತ್ತಮಾ ಮಹಾಬಳಖಚರಪತಿಯುಮಾತ್ಮೀಯಗುರುನಿರೂಪಿತಗಗ
ನೆಚರರಾಜ್ಯಭಾರಮನಾಶೈಶವಪ್ರಭೃತಿಪ್ರರೂಢನಿರ್ಭರಪ್ರೇಮರಸರುಮ
ನೇಕಾರ್ಥಶಾಸ್ತ್ರಪ್ರಯೋಗಕುಶಲರುಂ ಸಕಳಕಳಾವಗಾಹನಸಮಾಹಿತಮ
ತಿಗಳುಮಾಗಿ ನಾಲ್ಕುಮುಪಧೆಗಳೊಳಂ[3] ಶುದ್ಧರಾಗಿ ನಾಲ್ಕುಮುಪಾಯಂ
ಗಳಿರ್ಪಂತಿರ್ದ ಜಗತ್ಪ್ರಸಿದ್ಧಸ್ವಯಂಬುದ್ಧ ಮಹಾಮತಿ ಸಂಭಿನ್ನಮತಿ ಶತ
ಮತಿ[4]ಗಳೆಂಬನಾಲ್ವರುಮಮಾತ್ಯರ ಮೆಯ್ಯೊಳ್ಸಲಿಸಿ ನಿರಾಕುಳಸ್ವಾಂತ
ನಪಗತರಾಜ್ಯಚಿಂತನಮರಸಾಂದರೀವಿಳಾಸೋಪಹಾಸಿಗಗನಚರಸುಂದರೀ
ಮನೋನಯನಸುಂದರನಾಗಿ ವಿದ್ಯಾಧರಶ್ರೀಯನನುಭವಿಸಿ,

ಪೊಸತಂ ಸ್ತ್ರೀರಾಜ್ಯಮಂ ಮೇಣ್ಪಡೆದನೊ ಬಿದಿ ಲಾವಣ್ಯಸಿಂಧುಪ್ರವಾಹಂ
ಪೊಸತೀಗಳ್ಬಂದು ಬೆಳ್ಳಂಗೆಡೆದುದೊ ಗಣಿಕಾಸೃಷ್ಟಿಯಂ ಪುಷ್ಪಚಾಪಂ।
ಪೊಸತಂ ಮಾಡಿಟ್ಟನೋ ನಿಪ್ಪೊಸತು ದಲಿದೆಱೊಂದಂದಮೆಂಬಂತದೇಂ ರಂ
ಜಿಸಿತೋ ವಿದ್ಯಾಧರಾಧೀಶ್ವರನ ಕೆಲದ ವಿದ್ಯಾಧರಸ್ತ್ರೀಸಮೂಹಂ ॥ ೮೨

ವನರಾಜಿ[5]ಕ್ರೀಡೆಯಂ ಯೌವನವನದೊಳೆ ತೋಱಲ್ಜಲಕ್ರೀಡೆಯಂ ನೂ
ತನಲಾವಣ್ಯಾಚ್ಛತೋಯಾಶಯದೊಳೆ ಮೆಱೆಯಲ್ ನರ್ತನಕ್ರೀಡೆಯಂ ನ।
ಚ್ಚಿನ ನಾನಾಭಾವರತ್ಯುತ್ಸವದೊಳೆ ಪಡೆಯಲ್ ಬಲ್ಲ ವಿದ್ಯಾಧರಸ್ತ್ರೀ
ಜನದಿಂದಂ ಕಣ್ಗೆ ವಂದಂ ಸುಕವಿಜನಮನೋಮಾನಸೋತ್ತಂಸಹಂಸಂ॥೮೩

ಲಳಿತಾಳಂಕರಣಪ್ರಸನ್ನರಸವದ್ಗೀಯಂಗಳೊಳ್ ಮೂಡುತುಂ
ಮುಳುಗುತ್ತುಂ ಖಚರೀಜನಾನನನವಾಂಭೋಜಂಗಳೊಳ್ ಕಂಪನೀ[6] ।
ಟ್ಯೊಳುತುಂ ನಂದನರಾಜಿಯೊಳ್ನಲಿಯುತುಂ ತದ್ರಾಜಹಂಸಂ ನಿರಾ
ಕುಳಮಾಮಾಟ್ಕೆಗಳಿಂದೆ ಪೊಟ್ಟುಗಳೆವಂ ಸಂಸಾರಸಾರೋದಯಂ ॥ ೮೪

ಇದು ದೇವೇಂದ್ರಮುನೀಂದ್ರವಂದ್ಯಪರಮಜಿನೇಂದ್ರಮುಖಚಂದ್ರವಾಕ್ಚಂದ್ರಿಕಾ
ಪ್ರಸರಪ್ರಸಾದೋದೀರ್ಣಸೂಕ್ತಿಕಲ್ಲೋಲಮಾಲಾಕೀರ್ಣಕವಿತಾಗುಣಾರ್ಣವ
ಪ್ರಣೀತಮಪ್ಪಾದಿಪುರಾಣದೊಳ್ ಮಹಾಬಳ
ಕುಮಾರೋದಯ ವರ್ಣನಂ.

---

1 ಕ.ಗ.—ತೊಡಂಕಿ. 2 ಗ.—ಪೆಱಂಗಕ್ಕುಮೇ. 3 ಕ.—ನಾಲ್ಕುಮುಪದೇಶಂಗಳೊಳಂ.
4 ಕ.ಗ.—ಶತಬುದ್ಧಿ. 5 ಖ.—ನವರಾಜ್ಯ. 6 ಕ.—ಗಳೊಳ್ತಂಪ.

ಶ್ರೀವಿಜಯಾರ್ಧಾಖಚರಳಖಚ
ರಾವಳಿಮಣಿಮುಕುಟಮುಕರಿಕಾನಿಕಷಣಲೀ |
ಖಾ[1]ವಿಳಸಿತಪದಕಮಳನಿ
ಳಾವಂದ್ಯಯಶಂ ಸರಸ್ವತೀಮಣಿಹಾರಂ || ೧

ಕಟಕಕಟಿಸೂತ್ರಕುಂಡಲ
ಹಟತ್ಕಿರೀಟಾಂಗದಾದಿಮಣಿಭೂಷಣಭಾ |
ಜಟಿಳಿತಮೂರ್ತ್ಯುತ್ಕೃಷ್ಟಂ
ಸ್ಫುಟಹರ್ಷಂ ತನ್ನ ವರ್ಷವರ್ಧನದಿನದೊಳ್ || ೨

ವ || ಆಸ್ಥಾನಮಂಡಪದೊಳ್ ಅತಿಪ್ರಚಂಡಮಂಡಳಿಕಮಹಾಸಾಮಂತ ಮಂತ್ರಿಪ್ರಧಾನಪುರೋಹಿತಾಂತರ್ವಂಶಿಕಾದಿಪರಿವಾರಪರಿವೃತಂ ಉತ್ತುಂಗ ಸಿಂಹಾಸನಾಸೀನಂ ಅಧಸ್ಸ್ಥಿತಮಣಿಮಯಪೀಠವೇದಿಕಾವಿನ್ಯಸ್ತವಾಮ ಪಾದಂ ಅಂಬರಚರಾಂಗನಾಕರತಳಪಲ್ಲವೋಲ್ಲಸಿತಹೇಮಚಾಮರಪವನವಿ ಲೋಲದುಕೂಲವಸನಪರಿವೃತ[2]ಪಂಚರತ್ನಪ್ರಭಾಭಾಸುರವಿವಿಧಭೂಷಣ ವಿರಚಿತಸುರಶರಾಸನಂ ಬಡ್ಡೋಲಗಂಗೊಟ್ಟಿರೆ ;

ಎರಡುಂ ವಿದ್ಯಾಧರಶ್ರೇಢಿಯ ಖಚರಮಹೀಪಾಳಕರ್ ಸುತ್ತಲುಂ ಬಂ
ದಿರೆ ನಾನಾತೋದ್ಯವಾದ್ಯಂಗಳನೆ[3]ಮೊಱೆದು ಮೊಳ್ಗಂಕೊಳಲ್ವಾದಕರ್ಬಂ
ದಿರೆ ಗೀತಾರಾವದಿಂದಂ[4]ನೆಱೆಯೆ ನೆಱೆಗೊಳಲ್ ರಕ್ತಕಂಠೀಜನಂ ಬಂ
ದಿರೆ ವಂದಿವ್ರಾತಮೆತ್ತಂ ಬಗೆಗೊಳಲಿರೆ ಚೆಲ್ವಾದುದಾಸ್ಥಾನರಂಗಂ || ೩

ನುಡಿ ಮೊಗರಾಗಮಂ ಪಡೆಯೆ ನೋಟಮನಂಗನ ಬಿಲ್ಲ ಬಲ್ಮೆಯಂ
ಪಡೆಯೆ ನಯಂ ನಯಂಬಡೆಯೆ ಕಲ್ಪಮಹೀಜದ ಪಕ್ಕದಿರ್ಕೆಲಂ |
ಬಿಡಿದು ಮಡಲ್ತು ತೋಱುವ ಲತಾವಳಿಗಳ್ಗೆಣೆಯಾಯ್ತು ರಪ್ಕೆಲಂ
ಬಿಡಿದು ಖಗೇಂದ್ರನೋಲಗದೊಳಿರ್ದ ವಿಳಾಸವಿಳಾಸಿನೀಜನಂ || ೪

---

[1] ಕ. ಖ.—ರೇಖಾ.
[2] ಕ.—ವಸನಪರಿಮಿತ.
[3] ಕ.—ನಾನಾವಾದ್ಯನಾದಂಗಳನೆ.
[4] ಕ.—ರವದಿಂಪಂ.

ನಿರುಪಮದೇಹದೀಪ್ತಿಗಳೊಳೆಕ್ಕೆಯಿನೆಯ್ದೆ ಪಳಂಚಿ ಮಿಂಚುವಾ
ಭರಣದ ಮಿಂಚು ಕಪ್ಪುರದ ಪೊಱುವ ಸುಟ್ಟುರೆ ಪೂವಿನುರ್ಬ್ಬು ಕ |
ತ್ತುರಿಯತಗುಳ್ದು[1]ಪೊಯ್ವಸೊವಡಾಸೊವಡೊಳ್ಕಡುಸೊರ್ಕಿಸೊರ್ಕಿ[2]ಗಾ
ವರಿಸುವ ತುಂಬಿ ಚೆಲ್ವೆಸೆಯೆ ಕಣ್ಗೆಸೆದತ್ತು ಖಗೇಂದ್ರನೋಲಗಂ ॥ ೫

ವ॥ ಅಂತೊಡ್ಡೋಲಗಂಗೊಟ್ಟಿರ್ದ ವಿದ್ಯಾಧರರಾಜನಂ ಸ್ವಯಂಬುದ್ಧಂ ಅಭ್ಯುದಯಪರಂಪರಾನಿಮಿತ್ತಂ ಸದ್ಧರ್ಮೋಪದೇಶಲಬ್ಧಾವಸರನಾಗಿ,

ಲಾವಣ್ಯಾಬ್ಧಿತರಂಗಭಂಗಲಲಿತಭ್ರೂಭಂಗದಿವ್ಯಾಂಗನಾ
ಭಾವಾಪಾಂಗನಿರೀಕ್ಷಣಾಮೃತಕೃತಾನಂಗೋತ್ಸವಂ ಚೋದ್ಯವಿ |
ದ್ಯಾವಷ್ಟಂಭವಿಜೃಂಭಿತಾಂಬರಚರೇಶಾರಾಧ್ಯನಾಗಿರ್ದ ನಿ
ನ್ನೀವಿದ್ಯಾಧರಲಕ್ಷ್ಮಿ ಪುಣ್ಯಜನಿತಂ ವಿದ್ಯಾಧರಾಧೀಶ್ವರಾ ॥ ೬

ಭವವಾರಾಶಿನಿಮಗ್ನರಂ ದಯೆ ದಮಂ ದಾನಂ ತಪಂ ಶೀಲಮೆಂ
ಬಿವೆ ಮೆಯ್ಯಾಗಿರೆ ಸಂದ ಧರ್ಮಮೆ ವಲಂ ಪೊತ್ತೆತ್ತುಗುಂ ಮುಕ್ತಿಪ |
ರ್ಯವಸಾನಂಬರಮಾನುಷಂಗಿಕಫಲಂ ಭೂಪೇಂದ್ರದೇವೇಂದ್ರರಾ
ಜ್ಯವಿಳಾಸಂ ಪೆಱತಲ್ತು[3] ನಂಬು ಖಚರಕ್ಷ್ಮಾಪಾಲಚೂಡಾಮಣೀ ॥ ೭

ವ॥ ಎಂದು ಧರ್ಮಪ್ರಭಾವಮುಮಂ ತತ್ಫಲಸ್ವಭಾವಮುಮಂ ತಿಳುಪುವವಸರದೊಳುೞಿದ ಮಹಾಮತಿ ಸಂಭಿನ್ನಮತಿ ಶತಮತಿ[4]ಗಳ್ ಲೋಕಾಯತಿಕ ಯೋಗಾಚಾರ ಮಾಧ್ಯಮಿಕಮತವಿತಥಾಭಿಧಾಯಿಗಳ್ ಜೀವಾಭಾವ[5]ಮನೆ ಪಿಡಿಯುಚ್ಚುವಿಡಿದು ;

ಬಡಲೊಳ್ ಜೀವಮಿರ್ದು ಗಡ ಸಂಚಿಸುತಿರ್ಪುದು ಪುಣ್ಯಪಾಪಮಂ
ಗಡ ಬೞಿಕತ್ತ ಬೇಱೆ ಪೆಱತೊಂದೊಡಲೊಳ್ಗಡ ತಾನೆ ನಿಂದೊಡಂ |
ಬಡಿಪುದು ಧರ್ಮಕರ್ಮಫಲಮಂ ಗಡ ಸತ್ತನೆ ಮತ್ತೆ ಪುಟ್ಟುವಂ
ಗಡ ಪುಸಿ ಕಾಣ ಡಂಬಮಿದು ಖೇಚರ ನೀನಿದನೆಂತು ನಂಬಿದೋ ॥ ೮

ತಲೆವೞಿದುಟ್ಟುದಿಕ್ಕಿ ಸುರಲೋಕಸುಖಂಗಳನುಣ್ಬವೆಂಬ ಬ
ತ್ತಲೆಗರ ಮಾತುಗೇಳದಿರು[6]ಬಾೞ್ವೆನಮಿಂದ್ರಿಯವರ್ಗದಿಚ್ಛೆಯಿಂ |

---

1ಕ.—ಪೊದಳ್ದು. 2ಕ.—ಸೊರ್ಕುಸೊರ್ಕಿ. 3ಕ.—ಪೆಱವಲ್ತು ; ಖ.—ಪೆಱದಲ್ತು.
4ಖ.—ಶತಬುದ್ಧಿ. 5ಕ.—ಜೀವಭಾವಮನೆ. 6ಕ.—ಗೊಳ್ಳದಿರು.

ಸಲಿಸಿ ಬಸಂತದೊಳ್ ಕಳಿಕೆಗರ್ಚಿದ ಕೋಗಿಲೆಯಂತೆ ಬಿಚ್ಚತಂ
ನಲಿವುದು ಕಂಡರಾರ್ ಮಱುಭವಂಗಳನಿಲ್ಲಿ ವಿಯಚ್ಚರೇಶ್ವರಾ ॥ ೯

ವ॥ ಅದಲ್ಲದೆಯುಂ ಸ್ನಾಯ್ವಲಾಬೂದಂಡಾಂಗುಷ್ಠಾಂಗುಳಿಪ್ರಯತ್ನದಿಂ ಶ್ರವಣರಮಣೀಯಕ್ವಣಿತಮೆಂತು ನೆಗೞ್ದಿಪ್ಪುದು ; ಪಿಷ್ಟೋದಕಗುಡಧಾತಕೀಸಂಯೋಗದಿಂದಮೆಂತು ಮದವಿಕಾರಮೆಸೆದಪ್ಪುದು ; ಅಂತೆ, ಕಾಯಾಕಾರಪರಿಣತಪೃಥ್ವ್ಯಪ್ತೇಜೋವಾಯುಗಳತ್ತಣಿಂ[1] ಬಂದು ಗರ್ಭಾದಿಮರಣಪರ್ಯಂತಂ ತದಾತ್ಮಕಂ ಚೈತನ್ಯಂ ಪುಟ್ಟುಗುಂ; ಅದಱಿಂ ಪರಲೋಕಮಿಲ್ಲ : ಪರಲೋಕಮಿಲ್ಲದಂದು ತಲ್ಲೋಕಸುಖಾನುಭವಾಪೇಕ್ಷೆಯಿನೈಹಿಕಸುಖವಿಮುಖನಾಗಿ ಶರೀರಾರ್ಥವ್ಯಯಂಮಾಡುವಾತಂ ಕಯ್ಯದಂ ಬಿಟ್ಟು ಕಾಲದ ಕರ್ಗಱಗುವಾತನಂ ಪೋಲ್ಗುಂ—ಎಂದು ಬೃಹಸ್ಪತಿಮತಾನುಸಾರಿಯಪ್ಪ ಮಹಾಮತಿ ನುಡಿದು ಮಾಣ್ದ ತದನಂತರದೊಳ್ ; ವಿಜ್ಞಾನವಾದಮನಾಶ್ರಯಿಸಿ, ಪೂರ್ವಪೂರ್ವಚಿತ್ತವಿಶೇಷಪ್ರಭವಂಗಳುತ್ತರೋತ್ತರಚಿತ್ತಕ್ಷಣಂಗಳುಪಾದಾನೋಪಾದೇಯಕ್ಷಣಸಂಪೃಕ್ತಂಗಳ್ ನಿರನ್ವಯಪ್ರತಿಕ್ಷಣವಿಶರಾರುಗಳ್ ನಿರಂಶಂಗಳಾಗಿಯುಂ ಭ್ರಾಂತಿವಶದಿಂ ಗ್ರಾಹ್ಯಗ್ರಾಹಕಸಂವೇದನಾಕಾರತ್ರಯಾಕ್ರಾಂತಂಗಳ್ವಿಜಾತೀಯಾವ್ಯವಧಾನಲಘೂತ್ಪತ್ತಿಸದೃಶಾಪರಾಪರೋತ್ಪತ್ತಿಯೆಂಬಿವಱಿಂ ವಿಪ್ರಲಬ್ಧಬುದ್ಧಿಗೆ ಸಂತಾನರೂಪದಿಂ ಪುಟ್ಟುತ್ತಿರ್ದ ವಿಜ್ಞಾನಲಕ್ಷಣಂಗಳಾತ್ಮಾಭಿಧಾನಮಂ ಪುಟ್ಟಿಸುಗುಂ. ತದೇಕತ್ವಗ್ರಾಹಕಪ್ರತ್ಯ[2]ಭಿಜ್ಞಾನಮುಂ ಲೂನಪುನರ್ಜಾತನಖಕೇಶಾದಿಗಳೊಳ್ ಪೂರ್ವಾಪರೈಕತ್ವಮಿಲ್ಲದಲ್ಲಿಯುಂ ಕಾಣಲಕ್ಕುಂ ; ಅಪ್ಪುದಱಿಂದದುವುಂ ತ್ರಿಕಾಲಾನುಯಾಯಿಜೀವಾಸ್ತಿತ್ವಮನಱಿಪಲಾಱದು ; ಅದಱಿಂ ಪರಲೋಕಸುಖಾರ್ಥಮಾತ್ಮಾಸ್ತಿತ್ವಾಭಿನಿವೇಶದಿಂ ತನುಧನನಿಧನಂಮಾಡಿ ಸೇದೆಗಿಡಲ್ವೇಡೆಂದು ಸಂಭಿನ್ನಮತಿ ನಿಜವಿಜ್ಞಾನವಾದಪುರಸ್ಸರಮಾತ್ಮನಿರಾಕರಣಮನೆ ನುಡಿದು ಮಾಣೆ ; ಶೂನ್ಯವಾದಪ್ರಕಾಶನಪರಂ, ಆವುದಂತರ್ಬಹೀರೂಪದಿಂ ವಿಶದದರ್ಶನಾವಗಮ್ಯಂ ಅದೆಲ್ಲಮಸತ್ಯಾವಭಾಸಿ : ಎಂತು ಮರುಮರೀಚಿಕಾಸ್ವಪ್ನೇಂದ್ರಜಾಲಾದಿಗಳೊಳ್ ವಿಶದದರ್ಶನಾವಗಮ್ಯಜಲಕರಿತುರಗನರಾದಿಗಳ್, ಅಂತೆ ಜಾಗ್ರದ್ದಶಾವಭಾಸಮಾನಾಂತರಂಗಬಹಿರಂಗವಸ್ತುಗಳುಂ. ಅದಱಿಂ ಜೀವ

[1] ಕ.—ತೇಜೋವಾಯ್ವಾಕಾಶಂಗಳತ್ತಣಿಂ. [2] ಕ.—ತದೇಕತ್ವಗ್ರಾಹಕತ್ವಗ್ರಾಹಕಪ್ರತ್ಯ.

ವೆಂಬುದೆಲ್ಲಿತ್ತು, ಪರಲೋಕವೆಂಬುದಾವೆಡೆಯದು, ಅದರ್ಕೆ ಕಾರಣಮ ಪ್ಪ ಪಾಪಪುಣ್ಯಂ[1]ಗಳೆತ್ತಣಿಂಬಂದುವು ? ಇವೆಲ್ಲಂ ಗಂಧರ್ವನಗರವಿಳಾಸವಿ ಳಸಿತಂಗಳ್. ಅದನಱಿಯದಬೋಧ[2]ಬೋಧಿತತಪೋದಾನವಿಧಾನದಿಂ ಮು ಧಾಕ್ಲೇಶಾಯಾಸನಿರತರಾಗಿ ನವೆವರೆಂದು ಶತಮತಿಯುಮೀವಾತ್ಮೆಯೊ ಳೆ ಜೀವಾಭಾವಮನ್[3] ಸಮರ್ಥಿಸೆ ; ತದುಪನ್ಯಸ್ತಕುಹೇತುಕುದೃಷ್ಟಾಂ ತಾನರ್ಥಕವಚನರಚನಾಪ್ರಳಾಪಮನವ್ಯಗ್ರಕುಶಾಗ್ರೀಯಬುದ್ಧಿ ಸಮೃದ್ಧಂ ಸ್ವಯಂಬುದ್ಧನವಧಾರಿಸಿ,

ಅನುವದಿಸಿದಪುದು ನುಡಿ ನುಡಿ
ದನಿತುಮನೆನೆ ತೊದಳ ತೊದಳ ದೆ[4]ಸೆಯಿಲ್ಲೆನೆ ಮಾ।
ತಿನ ಪಸುಗೆ ಪಸುಗೆವಡೆದ
ತ್ತೆನೆ ನುಡಿದಂ ಮಧುರಮೃದುಗಭೀರಧ್ವನಿಯಿಂ ॥ ೧೦

ವ॥ ನಿ[5]ಮ್ಮ ಮುನ್ನೆ ನುಡಿದ ಕಾಯಾಕಾರಪರಿಣತಭೂತಸ್ವಭಾವ[6]ಮೆ ಚೈತನ್ಯಮರ್ಥಾಂತರಭೂತಮಲ್ಲೆಂಬ ನುಡಿ ಕಾಯಾಕಾರಪರಿಣತಭೂ[7]ತ ಚೈತನ್ಯಂಗಳ್ ಬಹಿರಂತರ್ಮುಖಾವಭಾಸಿಗಳ್ ಬಾಲ್ಯಾದಿರಾಗಾದಿವಿರುದ್ಧಧ ರ್ಮಾಧ್ಯಾ[8]ಸಿತಂಗಳುಮೊರ್ಬನಿಂದೊಂದೆಸಮಯದೊಳ್ ನಿಯಮದಿಂ ದ್ರ ವ್ಯಾಂತರಭಾವದಿಂಭಿನ್ನಪ್ರ[9]ಮಾಣಗ್ರಾಹ್ಯಂಗಳಪ್ಪುದಱಿಂ ಕೂ[10]ಡಿಬಾರದು. ದೇಶಭೇದದಿಂ ಬೇಱೆವೇಱೆ ಕಾಣ[11]ಲಾಗದದಱಿಂದದರ್ಕೆ ಭೇದಮೆಂಬೆಯ ಪ್ಪೊಡೆ ಶರೀ[12]ರರೂಪಪರಿಣತಾವನಿಪವನಸಖಪವನಂಗಳ್ಗೆ ದೇಶಭೇದಮಿಲ್ಲ. ಅವರ್ಕಮೇಕತ್ವಮಾಗಿ 'ಚತ್ವಾರ್ಯೇವತತ್ವಾನಿ' ಯೆಂಬ ನಿನ್ನ ಮಾತು ವಿ ಘಟಿಸುಗುಂ. ಪಿಷ್ಟೋದಕಾದಿದ್ರವ್ಯಾನ್ವಯವ್ಯತಿರೇಕಾನುವಿಧಾಯಿಯಪ್ಪ ಮದಶಕ್ತಿ ಎಂತು ತತ್ಕಾರ್ಯಮಂತೆ ತಚ್ಚೈತನ್ಯಮುಂ ಭೂತಾನ್ವಯವ್ಯತಿ ರೇಕಾನುಕಾರಿಯಪ್ಪುದಱಿಂ ಭೂತೋಪಾದಾನಕಾ[13]ರಣಕಾರ್ಯಮೆಂಬೀ ವಚನಮುಪಾದಾನವಿಕಾರಮಲ್ಲದೆ ವಿ[14]ಕಾರಮಂ ಕೈಕೊಳ್ಳದು. ಉಪಾದೇ

---

[1]ಖ.— ಪುಣ್ಯಪಾಪಂ. [2]ಕ.—ಯದಗಾಧಬೋಧ. [3]ಕ.—ಜೀವಾಭಾಸಮನೆ.
[4]ಕ.—ದೆಸೆ. [5]ಕ.—ನಿನ್ನ. [6]ಕ.—ವಮೆ. [7]ಖ.—ಭೂತಮೆ. [8]ಗ.—ಧ್ಯಾಸಿಗಳುಂ.
[9]ಖ —ಪ್ರಮಾಣಮೆಗ್ರಾಹ್ಯಂಗಳುಮಪ್ಪುದರಿಂ ; ಕ.—ಣಮೆಗ್ರಾಹ್ಯಂಗಳಪ್ಪುದರಿಂ.
[10]ಕ.—ಕೂಡಿದದುವೆ. [11]ಖ.—ಕಾಣಲಾದುದರಿಂ. [12]ಕ.—ವಿಶದರೂಪ.
[13]ಕ.—ಕಾರ್ಯಕಾರಣ. [14]ಸಾಕಾರಮಂ.

ಯಧರ್ಮಮುಂ[1]ತೆಂನ ವಿಕಾರಮನುಪಾದೇಯಕೊಪ್ಪಿಸುವ ಪೂರ್ವಾಕಾರಮಂ ಬಿಸುಟ್ಟುತ್ತರಾಕಾರಮಂ ಕೈಕೊಳ್ವುಪಾದಾನಧರ್ಮಮುಂ ಭೂತಚೈತನ್ಯಂಗಳೊಳ್ಕಾಣಲಾಗದುದಱಿಂ ಕೂ[2]ಡಿಬಾರದು; ಬಾಲ್ಯಾದಿವಯೋವಿಶೇಷಂಗಳೊಳ್ ಶರೀರಂ ಬಳೆಯೆ ಚೈತನ್ಯಂ ಬಳೆವುದಱಿಂ ಭೂತೋಪಾದಾನಕಾರಣಕಾರ್ಯಚೈತನ್ಯಮೆಂಬೆಯಪ್ಪೊಡೆಯದುವುಂ ಹಿತಾಹಿತಾವಿವೇಕವಿಕಳತೆಯಿಂ ತಮ್ಮಂ ತಾಮೆ ಕಟ್ಟ[3]ಸುವ ಮಹಾಕಾಯಂಗಳಪ್ಪ ಕರಿಪತಿಗ[4]ಳಂದಂ; ಅನ್ಯೈಕಾಂತಿಕರ್ಕೆಲರ್ತನುತರತನುಗಳೊಳಮತಿವಿಶದಪ್ರಜ್ಞಾತಿಶಯಮಂ ಕಾಣಲಾದಪ್ಪುದು, ಶರೀರವೃದ್ಧಿಯೊಳ್ ಚೈತನ್ಯವೃದ್ಧಿಯೆಂಬುದುದಕವೃದ್ಧಿಯೊಳಂಕುರವೃದ್ಧಿಯೆಂತಂತೆ ಸಹಕಾರಿಕಾರಣಮೆಂದನೇಕಯುಕ್ತ್ಯುಕ್ತಿಗಳಿಂ ಭೂತವಾದಿಯಪ್ಪಮಹಾಮತಿಯಂ ನಿರಾಕರಿಸಿ, ವಿಶ್ವವಿಜ್ಞಾನವಾದಮೆಂಬಿದಂ ವಿಜ್ಞಾನದಿಂದೆ ನೀಂ ಸಾಧಿಸುವೆಯಪ್ಪೊಡೆ ಸಾ[5]ಧ್ಯಸಾಧನಂಗಳವ್ಯಕ್ತಮಪ್ಪುದಱಿಂ ಸಾಧ್ಯಂ ನಿಶ್ಚಯಮಾಗದು, ವಿಜ್ಞಾನವ್ಯತಿರಿಕ್ತಸಾಧನವಾಕ್ಯೋಪನ್ಯಾಸದಿಂ ಸಾಧಿಸುವೊಡಾವಾಕ್ಯಮುಂ[6] ಬಹಿರರ್ಥಮಪ್ಪುದಱಿಂ ಬಾಹ್ಯಾರ್ಥಸಿದ್ಧಿಯಕ್ಕುಂ; ಆ ವಾಕ್ಯಮುಂ ವಿಜ್ಞಾನಮೆಂಬೆಯಪ್ಪೊಡೆ ಪೂರ್ವೋಕ್ತದೋಷಪಾಷಾಣಸಂಚೂರ್ಣಿತಮತಿಯ್ಕೆ ಏನನೇತಱೊಳ್ನಿಶ್ಚಯಿಸುವೈ; ಮತ್ತಂ ವಿಜ್ಞಾನಂ ವಿಜ್ಞಾನಾಂತರಗ್ರಾ[7]ಹಕಮುಕ್ಕುಮಪ್ಪೊಡಾವಮಾಪ್ಕೆಯೊಳ್ ವಿಜ್ಞಾನಾಂತರಮಪ್ಪುದಾವಮಾಪ್ಕೆಯೊಳ್ ಬಹಿರರ್ಥಸಿದ್ಧಿಯಾಗಿ ಸರ್ವಪ್ರತ್ಯಯನಿರಾಲಂಬನವಾದಂ ಕಿಡುಗುಂ ಅದುವುಂ ವಿಜ್ಞಾನಾಂತರಗ್ರಾ[8]ಹಿಯಾಗದಪ್ಪೊಡೆ ಸಂತಾನಾಂತರನಿರಸನಮಕ್ಕುಂ ಅನುಮಾನದಿಂಸಂತಾನಾಂತರಮಂ ಸಾಧಿಸುವೆನೆಂಬೆಯ[9]ಪ್ಪೊಡಂ ಬಹಿರರ್ಥಸಿದ್ಧಿಯಕ್ಕುಂ; ಮತ್ತಂ ವಿಜ್ಞಾನಮಾತ್ರಮಲ್ಲದೆ ಪೆಱತಿಲ್ಲಕ್ಕುಮಪ್ಪೊಡೆ ವಿಜ್ಞಾನಮಾತ್ರಮೆ ತತ್ವಮೆಂಬೀವಚನವಿಜ್ಞಾನಂಗಳ್, ಬಾಹ್ಯಾರ್ಥಶೂನ್ಯಂಗಳಪ್ಪುದಱಿನನಂ[10]ತ್ಯಂಗಳಕ್ಕುಮಾದಂದಸತ್ಯೇತರವಿಭಾಗಂಗ

---

1ಮುಂ. 2ಕ.—ಕೂಡಮು. 3ಕ.—ಕಟ್ಟಿಸಿಕೊಳ್ವ. 4ಕ.—ಳಂದಮೇಕಾಂತಿ.
5ಖ.—ಸಾಧ್ಯಸಾಧನಂಗಳೆವೈಕ್ಯಮಪ್ಪುದರಿಂ. 6ಕ.—ಗಳ್ಗೆ ಸಬ್ಬಂಮಾರ್ಪುದರಿಂ.
7ಕ.—ಮೆ. 8ಕ.—ಗ್ರಾಹಿಯಕ್ಕು. 9ಕ.—ಗ್ರಾಹಿಯಪ್ಪುದಪ್ಪೊಡೆ.
10ಖ.—ಯೆಪ್ಪೊಡಂತುಂ. 11ಖ.—ವಿಜ್ಞಪ್ತಿ.

ಳಂ ಪಡೆಯಲಾಗದು, ಅದು ಸಾಧನದೂಷಣಪ್ರಯೋಗಾನ್ಯಥಾನುಪಪತ್ತಿಯಿಂ ಬಹಿರರ್ಥಸಿದ್ಧಿಯಕ್ಕುಮದಱಿಂ ವಿಜ್ಞಾನಮಾತ್ರಮೆ ತತ್ವಮಾತ್ಮಾದಿತತ್ವಮಿಲ್ಲೆಂಬ ನಿನ್ನ ಮಾತು ಭಿನ್ನಭಾಜನಸಮಾನಮೆಂದು ಸಂಭಿಂನಮತಿಗಂ ಪ್ರತಿ[1]ಭಾಭಂಗಮಂ ಮಾಡಿ; ಸಕಳಬಹಿರಙ್ಗಾನ್ತರಙ್ಗ[2]ತತ್ವಂಗಳ್ ಶೂನ್ಯಂಗಳೆಂಬಿದನಱಿಪುವ ಭವತ್ಪ್ರತ್ಯಯಾಭಿಧಾನಂಗಳ್ ಶೂನ್ಯಂಗಳೆಯಕ್ಕುಮಪ್ಪೊಡೆಸರ್ವಶೂನ್ಯಮೆಂಬೀ ನಿನ್ನ ಮಾತು ಕೆಟ್ಟಪ್ಪೋಕುಂ ತತ್ಪ್ರತ್ಯಯಾಭಿಧಾನಂಗಳುಳ್ಳೊಡೆ ಅವೆಂತೊಳವಂತೆವಸ್ತುಗಳುಮೊಳವಪ್ಪುದಱಿನನಾದ್ಯನಿಧನಸ್ವಭಾವನುಂ ಸುಕೃತದುಷ್ಕೃತಕರ್ಮೋಪಾರ್ಜನನುಂ ತತ್ಫಲಭಾಜನನುಂ ಸೂಕ್ಷ್ಮರೂಪನುಮನಂತಜ್ಞಾನಾದಿಗುಣರೂ[3]ಪನುಂ ಸಂಹರಣವಿಸರ್ಪಣಾಸ್ವರೂಪನುಮಾತ್ಮೋಪಾತ್ತಶರೀರಪ್ರಮಾಣನುಮುತ್ಪಾದವ್ಯಯಧ್ರುವ್ಯಾತ್ಮಕನುಂ ಸಕಳಕರ್ಮನಿರ್ಮೂಲನಕರನುಂ ತ್ರಿಲೋಕಶಿಖರಿಶೇಖರನುಮಪ್ಪ ಜೀವನುಂಟೆಂದು ಶತಮತಿವೆರಸು ಮೂವರುಂ ಪ್ರತಿವಾದಿಗಳನಪ್ರತಿಹತಪ್ರತಿಭೆ[4]ಯಿನಪಗತಪ್ರತಿಭ[5]ರ್ಮಾಡಿ ಸಭಾಪತಿಯಾಗಿರ್ದಮಹಾಬಳನುಮಂ ಪ್ರಾಶ್ನಿಕರಾಗಿರ್ದ ವಿದ್ವಜ್ಜನಮುಮಂ ಸಭಾಜನಮುಮಂ ತಿಳಿಪಿ.

ಪುಸಿಯು ಪರಾಂಗನಾರತದ ಮದ್ಯದ ಮಾಂಸದ ಮೆಯ್ಗೆ ಱಲ್ದ[6]ದು
ರ್ವ್ಯಸನಿಯು ಮಾಡಿದೋದೆ[7]ನಿಮಗಾಗಮಮಾಗಿರಸತ್ಯ[8]ವಾದಮಂ।
ಪೊಸಯಿಸಿ ಜೀವನಿಲ್ಲ ಮೊಱೆಯಿಲ್ಲಱನಿಲ್ಲ ಪರತ್ರೆಯಿಲ್ಲೆನ
ಲ್ಕಸಕಳ[9]ಯಂತು ನಾಲಗೆ ಪೊರಳ್ವುದು ರಾಜಸಭಾಂತರದೊಳ್ ॥ ೧೧

ವ॥ ಎಂದು ಮತ್ತಮವರನೆ ತಿಳಿಪುವ ಬಗೆಯಿಂ ದೃಷ್ಟಶ್ರುತಾನುಭೂತಕಥೆಗಳಂ ತದನ್ವಯಸಂಬಂಧಿಗಳನಿಂತೆಂದು ಪೇೞಲ್ತಗುಳ್ದಂ. ಈತನ ಸಂತತಿಯೊಳರವಿಂದನೆಂಬನಂಬರಚರಂ ನಿಜಮನೋವಿಜಯಿ[8]ವಿಜಯಿಯೆಂಬಳ್ಗೆ ಪುಟ್ಟಿದ ಹರಿಶ್ಚಂದ್ರಕುರುವಿಂದರೆಂಬನಿಜತನೂಜರೊಡನೆ ಖೇಚರ

---

1ಕ. ಖ.—ಪ್ರತಿಭಂಗಂ. 2ಕ. —ತತ್ವದೊಳ್. 3ಕ.—ಸಂಪೂರ್ಣನುಂ.
4ಕ.—ಜ್ಞೆ. 5ಕ.—ಜ್ಞ. 6ಗ. ಖ.—ಯ್ಗೆ ಱಲ್ದ. 7ಖ.—ಮಾಡಿದೋದು.
7ಕ.—ಮಾಡಿದೋಜೆ. 8ಕ.—ಗಿರೆಸತ್ಯ. 8ಕ. ಗ—ತಳಮಳಿಸಿ.
9ಗ.—ಗಳೆ.

ಗೋಚರ[1]ವಿಭವಮನನುಭವಿಸಿ ಬಹ್ವಾರಂಭಸಂರಂಭರೌದ್ರಧ್ಯಾನಪರಿಣತ ಸುಪಾರ್ಜಿತನರಕಾಯುಷ್ಯಂ ಪ್ರತ್ಯಾಸನ್ನಮೃತ್ಯುವಾಗಿ,

ಉರಿಯುಳುರ್ವಂತತಿ[2]ದಾಹ
ಜ್ವರಮುಳುರೆ[3] ಪೊರಳ್ದು ನಾಡೆಯುಂ ಕೊರಗಿದನಂ ।
ದರವಿಂದಂ ಕೊಳದಿಂದಂ
ಕರಿಪತಿ ಕಿೞ್ತಿಕ್ಕೆ ಕೊರಗಿದರವಿಂದದವೊಲ್ ॥ ೧೨

ವಾರಿಜಮುಳಯುಜಮುಳಯುಸ
ವಿಾರಣಚಂದ್ರಾಂಶುಚಂದ್ರಕಾಂತದ್ರವಕ ।
ಪೂರಮೃಣಾಳಾದಿಗಳುಂ
ಬಾರಿಸಲಾಱವೆ ದಲವನ[4] ದಾಹಜ್ವರಮಂ ॥ ೧೩

ಕುಳಿರ್ವ ತಿಳಿನೀರನುಡುಗದೆ
ತಳಿ ತಳಿರಂ ಪಾಸು ಜಳದೆಯಿಂ ಬೀಸೆಂದು ।
ಮ್ಮಳಿಸಿ ಕಳವಳಿಸಿ[5] ವಿರಹಾ
ಕುಳನವೊಲಾಖಚರನಿಂತು ತಳವೆಳಗಾದಂ ॥ ೧೪

ವ॥ ಅಂತನೇಕಪ್ರಕಾರಶೀತಳಕ್ರಿಯೆಗಳಿಂ ಶರೀರಸಂತಾಪಮನೆಂತುಂ ಮಾಣಿಸಲಾಱದೆ[6] ಪುಣ್ಯಕ್ಷಯದೊಳ್ತನ್ನ ವಿದ್ಯೆಗಳುಂ ತನಗೆ ಬೆಸಕೆಯ್ಯದಿರೆ ಹರಿಶ್ಚಂದ್ರನೆಂಬ ತನ್ನ ಪಿರಿಯಮಗನಂ ಕರೆದು ತನ್ನ ದುಸ್ಸಹಾವಸ್ಥಾಂತರಮನಱಿಪಿ ನೀನೆನ್ನಂ ನಿನ್ನ ಗಗನಗಾಮಿನೀವಿದ್ಯೆಯಿನುತ್ತರಕುರುವನೆಯ್ದಿಸು ; ಅಲ್ಲಿಯ ಸುರತರುಗಳ ತಣ್ಣೆೞಲ್ಗಳೊಳಂ ಕಲ್ಪಲತೆಯ ಜೊಂಪಂಗಳೊಳಂ ಸೀತಾನದೀತರಂಗಾಲಿಂಗಿತಸಂತಾನಲತಾಲತಾಂತಸುರಭಿತರ[7] ಮಂದಾರವನವೀಥೀವಿಹಾರಪರಿಶ್ರಾಂತಪವಮಾನಸ್ಪರ್ಶನದಿಂ ಮದೀಯಾಂಗ

1ಕ.—ಭೂಚರ. 2ಕ.—ತಿರೆ. 3ಖ.—ಜ್ವರಮಡರೆ.
4ಖ.—ಬಾರಿಸುವುವೆನೋಡಲವನ 5ಕ. ಗ.—ತಳವಳಿಸಿ.
6ಗ.—ಸಂತಾಪಮನೆಂತುಮಾಱಿಸಲಾರದೆ.
7ಕ. ಗ.—ತರಂಗಾಲಿಂಗಿತಲತಾಲತಾಂತಸಂತಾನಸುರಭಿಸಾರಮಂದಾರ.

ಸಂಗತಪರಿತಾಪವನಾಱಿಸುವೆನೆಂದು ನಿಜನಂದನಂಗೆ ಪೇೞ್ದೊಡಾತನುಂ ತನ್ನ ಪಯೋಧರಪಥಗಾಮಿನೀವಿದ್ಯೆಯುಂ ಬೆಸಸಿದೊಡೆ ನರಕಗಮನಾಭಿಮುಖನಾಗಿರ್ದರವಿಂದಂಗುಪಕಾರಂಗೆಯ್ವುದೆನಗಶಕ್ಯಮೆನೆ ವಿದ್ಯಾವಚನದಿನಾತನನಾಸನ್ನಮೃತ್ಯುವನಱಿದು ವಿಷಣ್ಣಮನನುದಾಸೀನನಾಗಿರ್ದಂ; ಅನ್ನೆಗಂ[1] ಪರಸ್ಪರಕಲಹಕಲುಷಿತಗೃಹಕೋಕಿಳಂಗಳೊಂದೊಂದಂ ತಿನೆ[2] ಪನಿತಶೋಣಿತಬಿಂದುಗಳ್ ತನ್ನ ಮೆಯ್ಗೆ ಪಾಪಪರಿಪಾಕದಿಂ ತಣ್ಪಂ ಪಡೆಯೆ ಪರಮೌಷಧಮಂ ಪಡೆದೆ[3]ನೆಂದು ಕರಮೊಸೆದರವಿಂದಂ ಕುರುವಿಂದನಂ ಕರೆದುತ್ಪನ್ನವಿಭಂಗಜ್ಞಾನದಿಂ[4] ಮೃಗಂಗಳಿರ್ದೆಡೆಯನಱಿದು ನಿಷ್ಕರುಣನವಱರುಣಜಳದೊಳೆನಗೆ ಲೀಲಾಸರೋವರಮಂ ನೀಡಿಲ್ಲದೆ ಮಾಡೆಂದು ಪೇೞ್ದೊಡವನಾನಿಸ್ತ್ರಿಂಶಕರ್ಮಕ್ಕೆ ಕೊಕ್ಕರಿಸಿ ಪಾಪಭೀರುವಪ್ಪುದಱಿಂ ತಂದೆಯುಪರೋಧದಿಂ ಮನಮಲ್ಲದ ಮನದೊಳ್ ತದುದ್ದಿಷ್ಟಮೃಗಾವಾಸಮನೆಯ್ದಿ ದಿವ್ಯಜ್ಞಾನಿಗಳನಲ್ಲಿರ್ದರಂ ಕಂಡು ನಿವೇದಿತನಿಜಜನಕವೃತ್ತಾಂತನವರ[5] ವಚನದಿನಾತ್ಮೀಯಪಿತೃಮರಣಮುಮನಾತನ ನರಕಗತಿ[6]ಗಮನಮುಮನಱಿದು ಕರುಣಾರಸಾರ್ದ್ರಹೃದಯನದಂ ಮಾಡಲಾಱದೆ ಲಾಕ್ಷಾದ್ರವಾದಿಕಾರಿತಮಾಯಾರುಣಜಲ[7] ಪರಿಪೂರ್ಣವಾಪಿಯುಂ ಸಮೆಯಿಸಿದೊಡದಂ ಕಂಡು ರಾಗಿಸಿ ಪೊಕ್ಕು ನೀಡುಮೋಲಾಡಿ ಮುಕ್ಕುೞಿಸಿ ನೋಡಿ ಕೃತಕರುಧಿರಮಪ್ಪುದನಱಿದೀಬೂತೆನ್ನಂ ಬಂಚಿಸಿದನೆಂದು ನೆಱೆಯುದ ನರಕಾಯುಷ್ಯಮಂ ನೆಱಪುವನೆಂಬಂತೆ ಮುಳಿದು ಘೂರ್ಣಮಾನಲೋಹಿತಲೋಚನಂ ದಶನನಿಪೀಡಿತದಶನವಸನನಸಿಧೇನುವಂ ಕಿೞ್ತು ನಡನಡನಡುಗಿ ತಡದಡಿಸುತ್ತು ಮಿಱಿಯಲ್ ಪರಿವಾತಂ ವಾಪೀಸೋಪಾನಮನಡರುತ್ತುಂ ಜಾಱಿವರಿದು ಕೆಡೆದುರದೊಳ್ ನಟ್ಟ ಸುರಿಗೆ ಬೆನ್ನೊಳ್ಮೂಡೆ ಗತಜೀವಿತನಾಗಿ ನರಕಕ್ಕಿೞಿದನಿದನೀಗಳುಮೀಪುರಜನಂಗಳ್ಪೇೞೆ ಕೇಳಲಕ್ಕುಂ. ಮತ್ತಮೀತನವಂಶದೊಳೀ[8]ಪೊೞಲೊಳ್[9] ನೆಗೞ್ತೆವೆತ್ತಂ ದಂಡಿತಾರಾತಿಮಂಡಳಂ ದಂಡಕನೆಂಬನಾತನ ಮನೋನಯನಸುಂದರಿ ಸೌಂದರಿಯೆಂಬಳವರ್ಗೆ

---

1ಕ.—ಗಿರ್ಪಿನಂ. 2ಗ—ಬಂದನೊಂದುತಿನೆ. 3ಗ—ಪರಮೌಷಧಿವಡೆದೆ

4ಗ.—ದುತ್ಪನ್ನವಿಭಂಗದಿಂ. 5ಖ.—ವೃತ್ತಾಂತಮವಧಿ. 6ಕ.—ನಾತನಧೋಗತಿ

7ಕ.—ದ್ರವದಿನರುಣಜಲಾನುಕಾರಿಯಪ್ಪ. 8ಗ.—ಸಂತತಿಯೊಳೀ.

9ಗ.—ಪುರದೊಳ್.

ಪುಟ್ಟಿದಮಗನುಗ್ರಪ್ರತಾಪವಿಜಿತಾಂಶುಮಾಳಿ[1] ಮಣಿಮಾಳಿಯೆಂಬೊನಾಗಿ ಪಲಕಾಲಮರಸುಗೆಯ್ದು,

ಇಳೆಯುಂ ಘೋತ್ರಿಸಿ ತಕ್ಕರಂ ಕವರ್ದು ಕೊಂಡಾದರ್ಥಮಂ ಪೂೞ್ದು ಮಿ
ಕ್ಕಿಳನೋಡುತ್ತು ಮುದಗ್ರಲೋಭಮದದಿಂ ತನ್ನುಂಡುದುಂ ತಪ್ಪದೆಂ ।
ದಳವಂ ಮಾಣಿಸಿ[2] ಸತ್ತು ದಂಡಕನೃಪಂ ಲೋಭಾಭಿಭೂತಂ ವಿಷಾ
ವಿಳದಂಷ್ಟ್ರಂ ಷ್ಪೆಯುವಾಗಿ ಪುಟ್ಟಿಸುಱಿಗುಂಮುಂಬಯ್ತು ಭಂಡಾರದೊಳ್ ೧೧

ವ॥ ಅಂತಾರ್ತಧ್ಯಾನದೊಳಜಗರನಾಗಿ ತನ್ನ ಮುನ್ನಿನ ಸಂಚಿತ[3] ವಸ್ತುಗಳಂ ಮಗಂ ಮಣಿಮಾಳಿಯುಂ ಕಂಡು ಜಾತಿಸ್ಮರನಾಗಿ ಮಣಿಮಾಳಿಯಲ್ಲದುೞಿದರಾರುಮಂ ಸಾರಲೀಯದೆ ಭಂಡಾರಮಂ ಕಾದುಕೊಂಡಿರ್ಪುದುಮೊಂದು[4] ದಿವಸಂ ಮಣಿಮಾಳಿ ರತಿ[5]ಚಾರಣರೆಂಬ ಚಾರಣರನವಧಿಜ್ಞಾನಿಗಳಂ ಕಂಡಜಗರವೃತ್ತಾಂತಮಂ ಬೆಸಗೊಂಡು ವಿಷಮವಿಷಧರನಾತ್ಮೀಯಜನಕನೆಂದಱಿದು[6] ತತ್ಸಮೀಪಕೆ ವಂದು,

ನೀನತಿಲೋಭದೊಳಿಲ್ಲಿ ಕು
ಯೋನಿಯೊಳಜಗರನೆಯಾದೆಯಾಮೋಹಮದೇ ।
ನೇನಂ ಮಾಡದೊ ಬಿಸುಡಿದ
ನಾನಿನ್ನೇನೆಂಬೆನೆಂಬುದಂ ಕೈಕೊಳ್ಳಾ ೧೨

ವಿಷಯಾಮಿಷಲಂಪಟತೆಯೆ
ವಿಷಧರನೆನಿಸಿದುದು ನಿನ್ನನೆಲೆ ವಿಷಧರ ನೀಂ ।
ವಿಷಧರನಾಗದೆ ಬೇಗಂ
ವಿಷಯಾಮಿಷವಿಷಮನುಗುೞ್ದು ನಿರ್ವಿಷನಾಗಾ ॥ ೧೩

ವ॥ ಎಂದು ತನ್ನಂ ಪ್ರತಿಬೋಧಿಸಿದ ನಿಜತನೂಜನ ವಚನತಿಗ್ಮರೋಚಿರುಚಿನಿಚಯದಿನಾತ್ಮೀಯಚೇತೋನಿಚಿತಮೋಹಾಂಧಂತಮಸ್ತೋಮಮಂ[7] ಕಳೆದು ಕೃತಾನುಶಯನನಶನವಿಧಾನದಿನಸುವಂ ವಿಸರ್ಜಿಸಿ ಸೌಧರ್ಮಕಲ್ಪದೊಳ್ ದೇವನಾಗಿ,

---

1ಕ.—ಪ್ರತಾಪಿಜೀವಿತಾಂಶಮಾಳಿ; ಖ.—ಪ್ರತಾಪವಿಸ್ಫುರಿತಾಂಶುಮಾಳಿ.

2ಕ.—ಮಾಸಿಸಿ. 3ಮುನ್ನ ಸಂಚಿಸಿದ. 4ಕ.—ಕೊಂಡಿರ್ಪಿನಮೊಂದು.

5ಕ.—ಮತಿ. 6ಗ.—ಬೆಸಗೊಳೆ......ದಱಿಪೆ 7ಕ.—ತಮಸ್ತೋಮಮಂ.

ನೆನೆದಾಗಳ್ ನಿಜನಂದನೋಪಕೃತಮಂ ತದ್ದೇವನೆಯ್ತಂದು ದೇ
ವನಿಕಾಯಮಂ ಬೆರಸಪ್ಪಿಕೊಂಡು ದಿವದೊಳ್ಮೇಲಪ್ಪ ರತ್ನಂಗಳಿಂ ।
ತನಿತಂ ಮುಂ ಮಣಿಮಾಳಿಗಿತ್ತನವು ತಮ್ಮಾಮ್ನಾಯದಿಂ ಬಂದೊಡೀ
ತನುಮೀಗಳ್ ನೆಱೆ ತೊಟ್ಟು ಬಂದನಿದನೇಂ[1] ನೀಮೆಲ್ಲರುಂ ಕಾಣಿರೇ ॥ ೧೮

ವ॥ ಇದನ್ನಿಗಮನುಭೂತ[2]ಮಿದಲ್ಲದೆಯುಂ ವಯೋಧಿಕವ್ರ್ಯೇಮುಚರ ಪ್ರತ್ಯಕ್ಷಮೀಮಹಾಬಳನಪಿತೃಪಿತಾಮಹಂ ಸಹಸ್ರಬಳನೆಂಬನಂಬರಚರನಾತ್ಮೀಯಶ್ರೀಯನನುಭವಿಸಿ ವಿಷಯವಿರಕ್ತನಾಗಿ ನಿಜರಾಜ್ಯಪದವಿಯೊಳ್ ತನ್ನ ಪಿರಿಯಮಗನಪ್ಪ,

ಶತಬಳನಂ ಸಹಸ್ರಬಳಖೇಚರನಿಟ್ಟು ತಪೋನಿಯೋಗನಿ
ಶ್ಚಿತಮನನಾಗಿ ಸಂದನಪವರ್ಗಪದಕ್ಕೆ ಬಳಿಕ್ಕೆ ಧಾತ್ರಿಯಂ ।
ಶತಬಳನಾತ್ಮಜಂಗೆ ನೆಗಳ್ದೀಖಚರೇಂದ್ರನ ತಂದೆಯಪ್ಪ ಸಂ
ದತಿಬಳಖೇಚರಂಗೆ ತೊದಳಿಲ್ಲದೆ ಕೊಟ್ಟುಪಶಾಂತಮಾನಸಂ ॥ ೧೯

ವ॥ ಗೃಹೀತೋಪಾಸಕ[3]ವ್ರತನನಶನಾವಮೋದರ್ಯಾದ್ಯಾಚರಣಪರಿಣತಂ ಯಥೋಚಿತವಿಧಿಯಿಂದಾಯುರವಸಾನದೊಳ್ ಸಂಸಾರಕ್ಷಪಕನಾಗಿ ಸಮಾಧಾನಪುರಸ್ಸರಂ ಸನ್ಯಸನವಿಧಾನದಿಂ ಪರಿತ್ಯಕ್ತಜೀವಿತಂ[4] ಮಾಹೇಂದ್ರಕಲ್ಪದೊಳಣಿಮಾದ್ಯಷ್ಟಗುಣೈಶ್ವರ್ಯೋಪೇತನುಂ ಸಪ್ತಸಾಗರಪ್ರಮಿತಜೀವಿತನುಂ ಲಬ್ಧಾತ್ಮಲಾಭನುಮಾಗಿ[5] ನಮ್ಮ ಕುಮಾರಕಾಲದಂದು ನೀಮುಮಾಮುಂ ಮಹಾಬಳನುಂ ಕ್ರೀಡಾನಿಮಿತ್ತಂ ಪೋಗಿ ಮಂದರಮಹೀಧರದನಂದನವನದೊಳ್ ವನ[6] ಕ್ರೀಡೆಯನಾಡುತ್ತಮಿರ್ಪಿನಮಲ್ಲಿಯ[7] ಕೃತ್ರಿಮಚೈತ್ಯಾಲಯಮಂ ಬಂದಿಸಲಾಮಹೇಂದ್ರಕಲ್ಪಜನುಂ ಮಹಾವಿಭೂತಿಯಿಂ ಬಂದು,

ಜಿನಪಾದಾಂಭೋಜಮಂ ಪೂಜಿಸಿಪೊಱಮಡುತುಂ ಸಾರೆವಂದೀತನಂಭೋಂ
ಕೆನೆ ಕಂಡಟ್ಕಿತುರ್ಗ ನೋಟಂ ಬೆರಸು ಪರಸಿ ತಪ್ಪೈಸಿಕೊಂಡಮ್ಮ ನೀಂ ಮ।

---

1ಖ.—ನಿಪ್ಪುವಂ ; ಕ.—ನವನಿಂ. 2ಗ.—ಮನುಯಾತ.
3ಕ.— ತೋಪವಾಸಕ. 4ಕ.—ಮೋಹನಾಗಿ.
5ಕ.—ಜೀವಿತನುಪಲಬ್ಧಾವಧಿಲೋಚನನುಮಾಗಿ ; ಖ.—ಜೀವಿತನುಂಲಬ್ಧಾತ್ಮಭಾವನಾಗಿ.
6ಕ.—ಜಲ, 7ಗ.—ರ್ಪಿನಮೊಂದುದಿವಸಮಲ್ಲಿಯ.

ವ್ಮನೆಯಪ್ಪೈ ನೋಡು ನಣ್ಪಿಂ ನಿಮಗಮೆಮಗಮಾವ್ನಾಯದಿಂ ಬಂದು ದಿಂತೀ
ಜಿನಧರ್ಮಂಪ್ರಾಣಿಗಾರ್ಮಂ ಮಱೆಯದಿರಿದು ನಿನ್ನೆಂದುದುಂಟಲ್ಲಪೇೞಿಂ॥ ೨೦

ಅತಿಬಳಖೇಚರೇಂದ್ರನಿವರವ್ಮನುಮಿಾತನನೂರ್ಜಿತಾತ್ಮಸಂ
ತತಿಯೊಳನಾಕುಳಂ ನಿಱಿಸಿ ಸಂಯಮಸಾರಥಿಯಾಗಿ ಕರ್ಮಸಂ।
ತತಿಯನನಂತರಂ ಕಿಡಿಸಿ ಕೇವಳಿಯಾಗಿರೆ ಬರ್ಪ ದೇವಸಂ
ತತಿಯೊಡವೋಗಿ ನಾವುವೊಸೆದರ್ಚಿಸಿ ಬಂದಿಸಿ[1] ಬಂದೆವಲ್ಲವೇ॥ ೨೧

ಅನುಭೂತಶ್ರುತದೃಷ್ಟಖೇಚರಕಥಾನೀಕಂಗಳಂ ಯುಕ್ತಿ[2]ಯಿಂ
ದಿನಿತಂ ಸಾಧಿಸಿ ಜೀವಸಿದ್ಧಿಯನಿದಂ ನಿಶ್ಚೈಸಿ ವಿದ್ವತ್ಸಭಾ।
ಜನಮೆಲ್ಲಂ ತಿಳಿದತ್ತು[3] ನಿಮ್ಮ ಮನದಿಂ ಮಿಥ್ಯಾಕಳಂಕಂ ತೆರ
ೞ್ದಿನಿತುಂ[4] ಪೋಗದು ಕಾಲಲಬ್ಧಿ ದೊರೆಕೊಂಡಂದಲ್ಲದೇಂ ಪೋಕುಮೇ॥ ೨೨

ವ॥ ಎಂದು ಪರಪಕ್ಷದೂಷಣಪುರಸ್ಸರಮನೇಕೋಪಪತ್ತಿಗಳಿಂ ಸ್ವಪಕ್ಷಸ್ಥಾಪನಂಗೆಯ್ದು ಸನ್ಮಾರ್ಗಪ್ರಕಾಶನದಿಂ[5] ಮಾರ್ಗಪ್ರಭಾವನೆಯಂ ಮಾಡಿ ಸಭಾಸದರಿಂ ಲಬ್ಧಪ್ರಶಂಸ[6]ನಾಗಿ,

ಪರವಾದಿಗಳ ಮೊಗಂಗಳ್
ಕರಿಂಕುವರಿದಂತೆ ಕಂದಿ ಕುಂದಿರೆ ಖಚರೇ।
ಶ್ವರನೀಯೆ ಪಡೆದನತ್ಯಾ
ದರದಿಂ ಜಯಪತ್ರಮಂ ಸ್ವಯಂಬುದ್ಧಬುಧಂ॥ ೨೩

ವ॥ ಅಂತು ಮಹಾಬಳಖಚರೇಂದ್ರಂ[7] ಸ್ವಯಂಬುದ್ಧನೆ ತನಗೆ ಪರಮವಿಶ್ವಾಸಭೂಮಿಯಾಗೆ[8] ತತ್ಸಯರ್ಾಳೋಚಿತಕಾರ್ಯಪರ್ಯವಸಾನನುಂ ಮನೋಭಿಲಷಿತವಿಷಯಸುಖಾನುಭವನಿರತನುಮಾಗಿ ಮೂವತ್ತಾಱುಲಕ್ಕೆಪುರ್ಬಂ ರಾಜ್ಯಂಗೆಯ್ಯೆ,

---

[1] ಖ. ಗ.—ಪೂಜಿಸಿ. [2] ಕ.—ಳಿಂದುಕ್ತಿಯಿಂ. [3] ಖ.—ತಿಳಿವಂತು.
[4] ಕ ಗ.—ೞ್ದಿನಿಸುಂ. [5] ಖ.—ಸನ್ಮಾರ್ಗಾವಕಾಶನದಿಂ.
[6] ಕ.—ಪ್ರಸನ್ನ; ಗ.—ಪ್ರಸಂಗ. [7] ಗ.—ಗಗನಚರೇಂದ್ರಂ. [8] ಗ.—ವಿಶ್ವಾಸಿಯಾಗೆ.

ಪೊಡರದೆ ಕಪ್ಪವೀವ ಪರಮಂಡಳಿಕರ್ ಮನೆದೀವಿ ಮಕ್ಕಳಂ
ಪಡೆದಬಳಾಜನಂ ನೆರೆದ[1] ಮಕ್ಕಳ ಮಕ್ಕಳ ನೀಳ್ದದೊಂದು ದಾಂ।
ಗುಡಿವಿಡಿದೀವ ಚಾಗವೊಡಱೋಡುವಿನಂ ಪೊರೆದೊಳ್ಗಿಗಪ್ತೆ[2]ಯೊಳ್
ತೊಡರ್ದಿರೆ ವೃದ್ಧರಾಜ್ಯಮುಮದೇನೆಸೆದತ್ತೊ ನಭಶ್ಚರೇಂದ್ರನಾ॥ ೬೪

ವ॥ ಮತ್ತೊಂದುಪುಣ್ಯದಿನದೊಳ್ ಸ್ವಯಂಬುದ್ಧಂ ಅಗಣ್ಯಪುಣ್ಯೋಪಾರ್ಜನಕರಸಪರ್ಯಾಸಮೇತಂ ಅಪರಿಮಿತಭಕ್ತಿಯಿಂ ಪರಿಮಿತಪರಿಜನಪರಿವೃತನಾಗಿ ಪೋಗಿ,

॥ ಪೃಥ್ವೀ ವೃತ್ತಂ ॥

ಅನೇಕರಸಭಂಗಿಸಂಗತಸುರಾಂಗನಾಪಾದಚಂ
ಕನತ್ಕನಕಕಿಂಕಿಣೀಮೃದುನಿನಾದವಿಭ್ರಾಜಿಯಂ ।
ಕನತ್ಕನಕತುಂಗಶೃಂಗಕುಳಮಂ ಮನೋವೇಗದಿ
ಯ್ದಿ ನೋಡಿದನೊಲ್ದು ಪುಷ್ಪಿತನಮೇರುವಂ ಮೇರುವಂ॥ ೬೫

ವ॥ ಅಂತುನೋಡಿ

ಇದು[3] ಶಾಲ್ಮಲಿಪಾದಪಮಿಂ
ತಿದು ಜಂಬೂವೃಕ್ಷಮಿದುವೆ[4] ಕುರುಭೂಮಿಗಳೊ
ಪ್ಪಿದುವರ್ಧಚಂದ್ರನಾಕಾ
ರದಿ[5]ನುಚಿತದಶಾಂಗಕಲ್ಪಕುಜನಿಳಯಂಗಳ್॥ ೬೬

ಗಜದಂತಾಕಾರಂಗಳ್
ಗಜದಂತಾದ್ರಿಗಳಿವಲ್ತೆ ತೋರ್ಪುವು ಮಧುಪ ।
ವ್ರಜಪರಿವಾರಿತಮಾದ್ಯ
ದ್ಗಜಕಟಕರ್ಷಪ್ರಭಗ್ನ[6]ಚಂದನತರುಗಳ್॥ ೬೭

ನೀಲನಿಷಧಮುಮನೆಯ್ದಿದ
ನೀಲದ ಗಜದಂತಗಿರಿಗಳಾಳ್ದುವು ಪಿರಿದುಂ[7]।

---

[1] ಖ.—ನೆಱೆಯೆ. [2] ಖ.—ಪೊರೆದಾನೆಗಳ್ತೆ. [3] ಖ. ಗ.—ಅದು.
[4] ಖ.—ಮಿವಿವೆ. [5] ಕ.—ಚಂದ್ರಕೃತವೃತ್ತದಿ; ಗ.—ಚಂದ್ರವೃತ್ತಾಂಗದಿ.
[6] ಕ. ಖ.—ಕರ್ಷಣಪ್ರಭಗ್ನ. [7] ಖ.—ಗಿರಿಗಳಾದುವೆಪಲವುಂ.

ಲೀಲೆಯನದಂತೆ ಮಾಡದೆ[1]
ಲೀಲೆಗಳಂ ಪಾದಸೇವೆ ಭೂಭೃತ್ಸತಿಯಾ ॥ ೨೮

ಇದು ಭದ್ರಶಾಲಿನಂದನ
ಮದು[2] ನನ್ದನವನಮದಲ್ತೆ ಸೌಮನಸವಮೇಂ[3] ।
ತುದಿಯೊಳ್ಪಾಂಡುಕವೆಸೆದಿ
ರ್ದುದು ಜಿನಪತಿಸವನವಾರಿಪೂತಗ್ರಾವಮ್ ॥ ೨೯

ಆಗ್ರಹಮಂ ಬಿಸುಟಿದುವೆ ನ
ಗಾಗ್ರಣಿಯೆಂದಿದನೆ ನೋಡೆ ಬಲಗೊಳ್ವುವು ನಿ ।
ರ್ವ್ಯಗ್ರತೆಯಿಂ ಚಂದ್ರಾದಿ
ತ್ಯಗ್ರಹನಕ್ಷತ್ರತಾರಕಾನಿಕರಂಗಳ್ ॥ ೩೦

ಇದುರಿತು ವಿಮಾನವುಂ ತ
ನ್ನದಗ್ರ ಚೂಳಿಕೆಯೊಳಾಂತು ಕೊಂಡಿರೆ ಸಗ್ಗ ।
ಕ್ಕಿದು ನಿಚ್ಚಣಿಗಿಪ್ಪವೊಲಿ
ರ್ದುದಲ್ತೆ ಜಿನಸವನಜಲಪವಿತ್ರಿತಕಟಕಂ ॥ ೩೧

ಸ್ಫುರಿತಮಣಿಕಳಶವಿರಚಿತ
ಪರಭಾಗಂಗಳ್ ಮನೋಹರಂಗಳ್ ವಿದ್ಯಾ ।
ಧರವಿಬುಧವಂದಿತಂಗಳ್
ಕರಮೆಸೆದಪ್ಪುವಿದಱ ನೆಲೆಯ ಚೈತ್ಯಗೃಹಂಗಳ್ ॥ ೩೨

ವ॥ ಎಂದು[4] ನಿಜಪರಿಜನಕ್ಕೆಲ್ಲಂ ಪೊಗಳುತ್ತಂ[5] ಭದ್ರಶಾಲದಿಂ ತಗುಳ್ದು ಪಾಂಡುಕವನಂಬರಮದಱ ನೆಲೆಯೊಳಿರ್ದ[6] ಕೃತ್ರಿಮಚೈತ್ಯಾಲಯಂಗಳನಖಿಳಜಗತ್ಪಾವನಕರಸರಸ್ಸರಸೀಸರಿನ್ನಾಥತೀರ್ಥಜಲಂಗಳಿಂದಮತಿಮಸೃಣಘುಸೃಣಗೋಶೀರ್ಷಚಂದನಾಗುರುಕರ್ಪೂರಸಂಮಿಶ್ರಿತಸುರಭಿಗಂಧಂಗಳಿಂದಮಗಣ್ಯಪುಣ್ಯಪುಂಜಾಂಕುರಾನುಕಾರಿಕಳಮಾಕ್ಷತಂಗಳಿಂದಮಾಮೋದಮೋದಿತೋದ್ದಾಮವಾಚಾಲಷಟ್ಚರಣಕುಳಾಕುಳಕುಸುಮದಾಮಂಗಳಿಂ

---

1ಖ — ಲೀಲೆಯನಳಂಕೆಮಾಡಿದ. 2ಖ.—ಶಾಲವೇದಿಕೆಯಿದು.
3ಖ.—ಸೌಮನಸವನಂ. 4ಕ—ಎಂದಿಂತು.
5ಕ.—ಜನಕ್ಕೆಲ್ಲಂ ಪೇಳ್ದು ಪೊಗಳುತ್ತುಂ. 6ಖ.—ನೆಱಿಲೊಳಿರ್ದ.

ದಂ ಅನೇಕಭಕ್ಷ್ಯೋಪದಂಶ[1]ರಸಪ್ರಚುರಚಾರುಚರುಕಂಗಳಿಂದಂ ಆಕಾಶಸ್ಫಟಿಕಕಳಶ[2]ಸ್ಥಲಕರ್ಪೂರದೀಪಾಳೀಪ್ರದೀಪಂಗಳಿಂದಂ ಅತಿಬಹಳದಹ್ಯಮಾನಕಾಳಾಗುರುಧೂಪಧೂಮಯಷ್ಟಿಘಟಿತಘನಶ್ಯಾಮಳಿತವ್ಯೋಮತಳಧೂಪಂಗಳಿಂದಂ ಅತಿಸುರಭಿಸುರಸಸುರುಚಿರಫಲನಿಚಯಂಗಳಿಂದಂ ಮತ್ತಂ ಮುತ್ತಪ್ಪ ಜಾಂಬೂನದಕುಸುಮದಾಮಂಗಳಿಂದುದ್ದೀಪಿತರತ್ನಪ್ರದೀಪಂಗಳಿಂದಂ ಅತಿತರಳಮುಕ್ತಾಮಣಿಪ್ರಲಂಬಂಗಳಿಂದಂ ಅನೇಕಪ್ರಕಾರದೇವಾಂಗವಸ್ತ್ರವಿಸ್ತಾರಿತರತ್ನಸಂಚಿತಮಣಿವಿತಾನಂಗಳಿಂದಂ ಅನುಕ್ರಮಂದಪ್ಪದರ್ಚಿಸಿ ನಿರ್ವರ್ತಿತದೇವತಾರ್ಚನನಾಗಿ ಸೌಮನಸವನದ ಪೌಲಸ್ತ್ಯಜಿನಭವನಂಗಳೊಳನಿಸಾನುಂಬೇಗಮಿರ್ಪನ್ನೆಗಂ ;

ಭಾನುದ್ಯುತಿತನುರುಚಿಯಿಂ ದಿ
ಶಾನೀಕಮನೊಡನೆ ಬೆಳಗೆ ಮಿಂಚಿರಡು ನಭ ।
ಸ್ಸ್ಥಾನದಿನಿಳಿದಪುವೆನೆಯೆನೆ
ತಾನಿಳಿದುದು ಜಿನಗೃಹಕ್ಕೆ ಚಾರಣಯುಗಳಂ ॥ ೬೬

ವ ॥ ಅಂತು ಪೂರ್ವವಿದೇಹದ ಸೀತಾನದಿಯ ಬಡಗಣ ತಡಿಯ ಮಹಾಕಚ್ಛವಿಷಯದ ಅರಿಷ್ಟಪುರದಿಂದಂ ಯುಗಂಧರತೀರ್ಥಸರಸೀ[3]ಹಂಸನಾಯಕರೆನಿಸಿದ ಗಗನಚಾರಣರಾದಿತ್ಯಗತಿಗಳುಮರಿಂಜಯರುಮೆಂಬರ್ ಅವಧಿಜ್ಞಾನಿಗಳ್[4]ಪವನಮಾರ್ಗದಿಂದಿಳಿವುದಂ ಕಂಡು ಪಾದಮಾರ್ಗದೊಳ್ ಕಿಱಿದಂತರ[5]ದೊಳ್ ಅವನತಿಪುರಸ್ಸರಮಿದಿರ್ಗೊಂಡು ತತ್ಕ್ರಿಯಾಪರಿಸಮಾಪ್ತಿ ಪ್ರತೀಕ್ಷಣಪರನವರಂ ಗುರುಭಕ್ತಿಪೂರ್ವಕಂ ಬಂದಿಸಿ ಸಕಳಶ್ರಾವಕವ್ರತಾರೋಪಣಪವಿತ್ರನಾಗಿ ಧರ್ಮಕಥಾಪ್ರಸಂಗದೊಳಂ ಲಬ್ಧಪ್ರಸ್ತಾವಂ[6]ಅವರೊಳಾದಿತ್ಯಗತಿಗಳಂ

ಮನ್ನಿಸಿ ಮನ್ತ್ರಿಮುಖ್ಯನತಿಭಕ್ತಿಭರಾನತಮೂರ್ಧನೆತ್ತಿಯಿಂ
ಬಿನ್ನವಿಕುಂ ಮುನೀಂದ್ರಗಣಮುಖ್ಯ ಮಹಾಬಳನಸ್ಮದೀಶನಿಂ ।

---

1ಗ.—ದಾಮಂಗಳಿಂದತಿಸುರಭಿನಾನಾಭಕ್ಷ್ಯೋಪದಂಶ. 2ಗ. —ಸ್ಫಟಿಕಶಕಲ.
3ಖ.—ತೀರ್ಥಕರಸರಸೀ. 4ಕ.—ದಿವ್ಯಜ್ಞಾನಿಗಳ್. 5ಕ.—ಕಿಱಿದಂತರಂ.
6ಕ. ಗ.—ಕಥಾಪ್ರಸ್ತಾವದೊಳುಪಲಬ್ಧಪ್ರಸ್ತಾವಂ.

ನುಂ ನಿಜಭೋಗಕಾಂಕ್ಷೆಯುನಿಣಂ ಬಿಸುಡಲ್ ಬಗೆದಾರನಾತನ
ತ್ಯುನ್ನತಬೋಧ ನೀಂ ಬೆಸಸಭವ್ಯನೊ ಭವ್ಯನೊ ದೂರಭವ್ಯನೋ ॥ ೩೪

ಪೋದುದು ಜವ್ವನಂ ಕ್ರಮದಿನಾದುದು ಮುಪ್ಪಿನಿಸಾದೊಡಂ ಸ್ಮರೋ
ನ್ಮಾದದೊಳೀವಿಮೋಹದೊ[1]ಳದೇಕೆ ಗಡಂ ಬಗೆಯುಂ ತಗುಳ್ದ ಪೆ ।
ಳ್ಮಾದಪನಕ್ಕಟಾ ಖಚರನೆಂದೆನಗಿಂತಿದೆ ನಾಡೆಯುಂ ಮನಃ
ಖೇದಮಿದಂ ಪ್ರಬೋಧಿಸಿ ನಿಜಾವಧಿಯಿಂ ಕಳೆಯಿಂ ಮುನೀಶ್ವರಾ ॥ ೩೫

ವ॥ ಎಂದು ಬೆಸಗೊಂಡೊಡೆ ಆತನಭವ್ಯನಲ್ಲಂ ಭವ್ಯನೇ. ಭವ್ಯನಾಗಿಯುಂ ಮಾಸನ್ನಭವ್ಯಂ; ಎಂತೆಂದೊಡೆ ಜಂಬೂದ್ವೀಪದ ಪರವಿದೇಹದೊಳ್ ಗಂಧಿಳಮೆಂಬುದು ವಿಷಯಂ ; ಆ ವಿಷಯವಿಳಾಸಿನಿಗೆ ತಿಳಕಮಿರ್ಪಂತಿರ್ದುದು ವಿಜಿತಸುರಪುರಂ ಸಿಂಹಪುರಮೆಂಬುದು ಪುರಂ. ಅದನಾಳ್ವನತುಳಭುಜಬಳಸಂಚೂರ್ಣಿತಾರಾತಿಪಾಷಾಣಂ ಶ್ರೀಷೇಣನೆಂಬರಸಂ; ಆತಂಗೆ,

ಸೌಂದರಿಯರ ಗಾಡಿಗಳೊಳ
ಗೊಂದೊಂದನೆ ನೆಱಪಿ[2] ಮಾಡಿದಂ ಬಿದಿಯೆನೆ ಪ್ಪ ।
ತ್ಸೌಂದರಿ ಜಿತಾಮರಾಧಿಪ
ಸೌಂದರಿ ಸೌಂದರಿಯೆ ಪೆಸರೊಳಂ ರೂಪಿನೊಳಂ ॥ ೩೬

ಒರ್ಮೆಯುಮುಮಪಚಱದೊಲವಿನ
ಕೂರ್ಮೆಯ ತತ್ಪತಿಗಮಾಕೆಗಂ ನಿಜವಂಶ ।
ಕ್ಕಾರ್ಮಮೆನೆ ಪುಟ್ಟಿದರ್ ಜಯ
ವರ್ಮಶ್ರೀವರ್ಮರೆಂಬ[3]ರಿರ್ವರ್ ತನಯರ್ ॥ ೩೭

ವ॥ ಅವರೊಳ್[4] ಕಿಱಿಯಾತನೆ ನೃಪತಿಗಂ ಪರಿವಾರಕ್ಕಮಣುಗನಾಗಿ ಬಳೆಯೆ ಪಲಕಾಲಂ ಶ್ರೀಷೇಣನರಸುಗೆಯ್ಯೆ;

ಎಡೆವೆತ್ತೊರ್ಮೆಯೆ ಮುಪ್ಪು ಕುತ್ತದೊಳೊಡಂಬಟ್ಟೊತ್ತೆ ಮತ್ತಲ್ಲಿ ಮೆ
ಳ್ಪಡದಾರ್ತಣ್ಮಿ ತಪಕ್ಕೆ ಪೋಪ ಪದದೊಳ್ ತನ್ನಗ್ರಪುತ್ರಂ ಕ್ರಮಂ ।
ಬಿಡಿದಿರ್ದಂ ಜಯವರ್ಮನಿರ್ದೊಡಮವಂ ಮುಟ್ಟಲ್ಲ[5]ನೆಂದೊಳ್ಪೊಡಂ
ಬಡುವನ್ನಂ ಕಿಱಿಯಾತನಂ ನಿಱಿಸಿದಂ ಶ್ರೀವರ್ಮನಂ ರಾಜ್ಯದೊಳ್ ॥ ೩೮

[1] ಖ.—ಳೀವಿನೋದದೊ                                   [2] ಕ.—ಪಡೆದು.
[3] ಕ.—ಜಯವರ್ಮಂ ಶ್ರೀವರ್ಮನೆಂಬ. [4] ಕ.—ಅಂತವರೊಳಗೆ. [5] ಖ.—ಮುದ್ದಲ್ಲ.

ವ॥ ಅಜಯವರ್ಮನುಮನವಮಾನಪವಮಾನಾವಧೂತನಾಗಿ ಪೋಗಿ,

ಪ್ರಭು ಕಿಱಿಯಾತನಂ ನಿಱಿಸಿ ರಾಜ್ಯದೊಳಿನ್ನನವಸ್ತುಮಾಡಿ[1]ಪೂ
ರ್ವಭಿಭವವಿಾಗಳೀಭವದೊಳಿಂತಿದು ನೀಗದು ರಾಜ್ಯಲಕ್ಷ್ಮಿಗೆ ।
ಸ್ವಭವದೊಳಪ್ಪುಡಂ ನೆಱೆಯೆ ನೋಂಪೆನೆನುತ್ತೆ ಜಗನ್ನುತಸ್ವಯಂ
ಪ್ರಭ[2]ಗುರುಪಾದಮೂಲದೊಳ್ ಕೊಂಡನಖಂಡಿತಜೈನದೀಕ್ಷೆಯಂ ॥ ೩೯

ವ॥ಅಂತು ಜಾತರೂಪಧರನಾಗಿ ತನ್ನ ಪಱಿದು ಬಿಸುಟ ಸಹಸ್ರಕುಂತ
ಳಂಗಳಂ ತನ್ನ ತಳದೊಳ್ ತೆಮಳ್ದಿಕೊಂಡು ತುಂಬಿಯ ಬಂಬಲ್ಗಳಂ
ಕೆಂದಾವರೆಯರಲ್ಗಳೊಳ್ ಪುದಿದುಯ್ವಂತುಯ್ದು,

ಮಡಗಿಡಲೆಂದು ಪುತ್ತಿನೊಳಗೊಯ್ಯನೆ ಕುತ್ತಿದ ಕಯ್ಯನಾಗಳಾ
ಗಡೆ ಪಸಿವಳ್ವ ನೀಳ್ದ ಪೊಗೆಯುಂ ಕಿಡಿಯುಂ ಬಿಸುಸುಯ್ಯ ಗಾಳಿಯೊಳ್।
ತೊಡರ್ದೊಡನುಣ್ಮಿ ಭೋಂಕೆನೊಗೆತರ್ಪ ಮಹೋರಗನೆಯ್ದೆ ಪಲ್ಗಳ
ರ್ದೊಡೆ ಕಿಡಿವೀಪೆ ನೆತ್ತರೊಱೆದುರ್ಕಿಗೆ ಕೊಂಡುದು ತತ್ತಪಸ್ವಿಯಂ॥೪೦

ವ॥ ಆ ಪ್ರಸ್ತಾವದೊಳ್,

ಎಸೆವ ವಿಮಾನಘಂಟೆಗಳ ಮೆಲ್ಲುಲಿ ಕಿನ್ನರಗೇಯದೊಳ್ ಪೊದ
ಪ್ದೆಸೆಯೆ ವಿಚಿತ್ರಪಾತ್ರಪರಿನರ್ತನಮುಣ್ಮುವ ತೂರ್ಯನಾದದೊಳ್ ।
ಪೊಸಯಿಸೆ ಸೋಂಕಿನೊಳ್ ನಲಿವ ನಲ್ಲಳಲಂಪನೊಡರ್ಚೆ ಲೀಲೆ ಕ
ಣ್ಗೆಸದಳಮಾಗೆ ಪಾಱುವ[3] ಮಹೀಧರನೆಂಬ ವಿಯಚ್ಚರೇಂದ್ರನಂ ॥ ೪೧

ವ॥ ಭೋಂಕನೆ ಕಂಡು ವಿಷಮವಿಷಧರವಿಷಪೂರಿತಶರೀರಮನೊಯ್ಯ
ನೊಯ್ಯನೆ ಆಱಿಸಿ[4] ಬಂದು ಕಿವಿಯೊಳ್ ಪಳಂಚಲೆರ್ದೆಯುಂ ಪಿಡಿದಲುಗುವ
ಸೀಯನಪ್ಪ ಗೀತಾತೋದ್ಯನಾದಕ್ಕಮಿದಿರೊಳ್ ಕಣ್ಗೆ ವಂದು ಬಗೆಯನು
ಱೆ ಸೆಱೆವಿಡಿದ ವಿದ್ಯಾಧರವಿಳಾಸಕ್ಕಂ ಬೆಕ್ಕಸಂಬಟ್ಟೀಗಳೆನ್ನ ತಪಂಬಟ್ಟ
ಫಲಮುಂಟಕ್ಕುಮಪ್ಪೊಡೆ ವಿದ್ಯಾಧರನಪ್ಪೆನಕ್ಕೆಂದಾ ವಿದ್ಯಾಧರವಿಮಾನಮಂ
ನೋಡಿ,

---

[1]ಖ.—ನವಜ್ಞೆ ಮಾಡಿ. [2]ಕ.—ಪ್ರಭು. [3]ಕ.—ಪಾಡುವ. [4]ಖ.—ಅಳಱಿಸಿ.

ಅಲ್ಲಿಯೆ ಕಣ್ ಪಳಂಚಿ ಮನಮಲ್ಲಿಯೆ ಕೀಲಿಸೆ ನೆಚ್ಚು ಮೆಚ್ಚು[1] ತ
ಳ್ತಲ್ಲಿಯೆ ಸೋಲ್ತು ಪತ್ತೆ ಗತಜೀವಿತನಾಗವಿವೇಕದಿಂ[2] ತಪೋ |
ವಲ್ಲಿಯೊಳಪ್ಪನಲ್ಪಸುಖಮೆಲ್ಲಮನಲ್ಪಸುಖಕ್ಕೆ ಮಾಱಿ ಬಂ
ದಿಲ್ಲಿ ನಿದಾನದಿಂದತಿಬಳಂಗೆ ಮಹಾಬಳನಾಗಿ ಪುಟ್ಟಿದಂ ‖ ೪೦

ವ‖ ಅಂತು ಮುನ್ನಿನ ಭವದೊಳಾದಲಂಪು ಪೊಂಪುೞಿವೋಗೆ ಬಯಸಿ ಪಡೆದ ವಿದ್ಯಾಧರಶ್ರೀಯನಿನ್ನೆಗಂ ಬಿಸುಡಲಾಱದಿದಿರ್ಗಿಡಮೇನಾದುದು.

ಕನಸಿನೊಳಿಂದು ಮೂವರುಮಮಾತ್ಯರಸುಂಗೊಳೆ ಕಟ್ಟಿ ತಂದಗು
ರ್ವಿನ ಕೊಳೆನಾರ್ಪ ಕೋಪ್ಕೆಸಱ ಬಾವಿಯೊಳರ್ದೆ ಕಡಂಗಿ ಬಂದು ನೀ |
ನನಿಬರುಮಂ ಕರಂ ಕೞಲೆ ಬಗ್ಗಿಸಿ ತನ್ನನುದಗ್ರಮಪ್ಪ ಕಾಂ
ಚನಹರಿಪೀಠದೊಳ್ ಮಿಸಿಸುವಂದಮನೆರ್ದುರಿ ನೆಂದುವೆಂದಮಂ ‖ ೪೩

ವ‖ ಕಂಡು ತದಶುಭಸ್ವಪ್ನದರ್ಶನಕ್ಕೆ ಕೊಕ್ಕರಿಸಿ ಭವದಾಗಮನಪ್ರತೀಕ್ಷಣಪರನಾಗಿರ್ದಂ. ಆತಂಗೆ ತದುದ್ಧೃತ[3]ಶಿಖಿಶಿಖಾಕಳಾಪಪ್ರಶಮನದರ್ಶನದಿಂದೊಂದು ತಿಂಗಳಾಯುಷ್ಯಂ. ಆತನಿಂ ಮುನ್ನಂ ನಿನ್ನೀ ಕನಸುಗಳಂ ಪೇೞ; ಪೇೞಲೊಡಮಾತಂ ನಿನ್ನ ಮಾತನೆ ಪವಣ್ಮಾಡಿ ಪೇೞ್ದುದಂ ಕೈಕೊಳ್ಗುಂ. ಅಂತು ಕೈಕೊಂಡು,

‖ ಪಿ ರಿ ಯ ಕ್ಕ ರಂ. ‖

ಈಗಳ್ ನೀನಿರ್ದ ನೋನಿಸೆ ನೋಂತು ಮಹಾಬಳಂ ಲಲಿತಾಂಗಂ ವಜ್ರ [ಜಂಘಂ
ಭೋಗಭೂಮಿಜಂ ಶ್ರೀಧರದೇವಂ ಸುವಿಧಿನರಾಧಿಪನಚ್ಯುತೇಂದ್ರಂ |
ಸಾಗರಾಂತಂ ನೆಲನೆನಿತನಿತುಮಂ ಚಕ್ರದಿಂ ಬೆಸಕೆಯ್ಸಿ ವಜ್ರನಾಭಿ
ಯಾಗಿ ಸರ್ವಾರ್ಥಸಿದ್ಧಿಯೊಳ್ಪುಟ್ಟಿ ಭರತದೊಳನ್ನಾದಿದೇವನಪ್ಪೊಂ ‖ ೪೪

ವ‖ ನೀನಂ ತೃತೀಯಜನ್ಮದೊಳ್ ವಿಗಳಿತಸಂಸೃತಿನಿಗಳನೆಯಪ್ಪೆಯೆಂಬುದಂ; ಚಾರಣಯುಗಳಚರಣಯುಗಳಕ್ಕೆ ಕರಕಮಳಯುಗಳಮಂ ಮುಗಿದು ಬೀೞ್ಕೊಂಡತಿತ್ವರಿತಗತಿಯಿಂ ಬರುತ್ತುಂ,

---

1ಕ.—ಮೆಚ್ಚೆ. 2ಕ.—ನಂತವಿವೇಕದಿಂ. 3ಖ.—ತದುದ್ರುತ.

ಮುಸು ಮುತ್ತುಂತೆ ತೆರಳ್ದು ತನ್ನ ಮೊಗಮಂ ಕಂಡಳ್ಕನೋ ಕೂಡೆ ಜೋ.
ಲ್ದು ಸಡಿಲ್ದಿರ್ದೊಡಲಳ್ಳೆ ಜೊಳ್ಳೆತನಮಂ ಮೇಣ್ಕಾಣನೋ ಸಂತತ |
ವ್ಯಸನೋದ್ರೇಕದ ಕುಂದನೇನೊಣರನೋ ಶಕ್ತಿಕ್ಷಯಂಗಾಣನೋ
ಬಿಸುಡಂ ಮುನ್ನಿನ ತನ್ನಲಂಪಳಿಕೆಯಂ ಮತ್ತಂ ಜರಾಜರ್ಜರಂ || ೪೫

ವ|| ಅಂತಾತ್ಮಗತದೊಳ್ ಬಗೆಯುತ್ತುಂ ಬಂದು ಖಚರಪತಿಯನೆಯ್ದಿ ತತ್ಪ್ರಪಂಚಮಂ ಸಪ್ರಪಂಚಮಱಿಪಿ,

ಮನದಳಿಪಿಂ ತಮಾಳಲತಿಕಾಂಗಿಯರಾಟಿಸೆ ಬರ್ದುಗೆಟ್ಟು ಕಾಂ
ಚನಲತಿಕಾಂಗಿಯರ್ ಬಯಸೆ ಸೋಲ್ತು ಸರೋಜದಳಾಯತಾಕ್ಷಿಯರ್|
ನೆನೆಯೆ ವಿಳಾಸದುತ್ಪಳದಳಾಕ್ಷಿಯರೀಕ್ಷಿಸೆ ಸಂದ ನಿನ್ನ ಮು
ನ್ನಿನ ಚರಿತಂಗಳಂ ನೆನೆಯದಿರ್ ನೆನೆ ಜೈನಪದಾಂಬುಜಂಗಳಂ || ೪೬

ವ|| ಅಂತುಮಲ್ಲದೆ,

ಮಸೆದಂಗೋದ್ಭವನಸ್ತ್ರದಂತೆಸೆವ ನಿನ್ನೀರೂಪು ವೃದ್ಧತ್ವದೊಳ್
ಪೊಸತೊಂದಾಯ್ತು ಮಮತ್ವಮಂ ಬಿಸುಟು ನೀನೇ ತತ್ತ್ವಮಂ[1] ಭವ್ಯ ಭಾ|
ವಿಸು ನಿನ್ನೀತನುವಂ ತಪೋವನವನಕ್ರೀಡಾಸುಖಕ್ಕೊಡ್ಡು ಚಿಂ
ತಿಸದಿರ್ ಮುನ್ನಿನ ನಿನ್ನ ಯೌವನವನಕ್ರೀಡಾವಿಳಾಸಂ[2]ಗಳಂ ೪೭

ವ|| ಅಂತುಮಲ್ಲದೆಯುಂ,

ನಿನಗೀಸಂಸೃತಿವಾರಿರಾಶಿತಟಮತ್ಯಾಸನ್ನಮಾಸನ್ನಭ
ವ್ಯನೆಯೆಂದೆಯ್ದೆ ಮುನೀಂದ್ರದಿವ್ಯಮತದಿಂ ನಿಶ್ಚೈಸಿದೆಂ ಮಾಣಲಿ[3] |
ನ್ನೆನಸುಂ ಬಾರದು ನಿನ್ನೊಳಾತ್ಮಹಿತಮಂ ನಿಶ್ಚೈಸು ಸನ್ಮಾರ್ಗಸೂ
ಚನೆಗೆಯ್ದಿಂ ಶರಣಂ ಜಿನೇಂದ್ರಚರಣಂ ವಿದ್ಯಾಧರಾಧೀಶ್ವರಾ || ೪೮

ವ|| ಎಂದು ಪರಿಮಿತಹಿತವಚನಂಗಳಂ ಮುಟ್ಟೆ ನುಡಿದು ತನ್ನ ಕಂಡ ಕನಸುಗಳನನುಕ್ರಮಂದಪ್ಪದಱಿಪಿದ ಮಂತ್ರಿಮುಖ್ಯನ ನುಡಿಯೊಳಪಗತಕಲುಷಹೃದಯ[4]ನಾಗಿ,

---

[1] ಕ.—ನೀನೇಕತ್ವಮಂ. [2] ಕ.—ವಿನೋದಂ. [3] ಗ.—ಮಾಣದಿ.
[4] ಕ.—ಳವಹಿತಹೃದಯ ; ಗ.—ಳಪಹೃತಹೃದಯ.

ಜರೆ ಬಂದೊಟ್ಟೈಸೆ ಮಾರ್ಣ್ದಿರ್ದಗಳಿಪೆನಗಿದೆ ಮುಂ ಸೊಲದೇ ಕಾಳರಾಜಂ
ಬರೆಯುಂ ಮಾರ್ಣ್ದಿರ್ದನೇ[1] ಸಿಸ್ಟಯಿಸು ತನುವನಿನ್ನೊಪ್ಪುಗೊಳ್ ಮುನ್ನ
ಮಿನ್ನುಂ।
ಕರಣೀಯಂ ನಿನ್ನ ವಾಕ್ಯಂ ನಿಜಮತಮೆ ಮತಂ ಮೆಚ್ಚಿದಂತೆನ್ನನೀಸಂ
ಸರಣಾಂಭೋರಾಶಿಯಿಂದಂ ಪೊಱಮಡಿಸೆನಗಂ ನೀನೆ ಹಸ್ತಾವಲಂಬಂ ॥೪೯

ವ॥ ಎಂದು ಪರಿಚ್ಛೇದಿಸಿ ಮನಮಱಿಯ ನುಡಿದು[2] ನಿಜಗೃಹೋದ್ಯಾನದ ಜಿನಭವನದೊಳೆಂಟುದಿವಸಂಬರಂ ಮಹಾಮಹಮೆಂಬ ಜಿನಮಹಿಮೆಯುಂ ಮಹಾವಿಭೂತಿಯಿಂ ಮಹಾಬಳಂ ಮಾಡಿದಿಂ ಬೞಿಯಂ ನಿಜಾಪ್ತವರ್ಗಮುಮಂ ಸಾಮಂತವರ್ಗಮುಮಂ ಬರಿಸಿ ಕವಚಹರನಾದ ನಿಜಸುತನತಿಬಳಕುಮಾರನಂ ರಾಜ್ಯಭಾರದೊಳ್ ನಿಱಿಸಿ,

ಬಿಡಮಳೆದಂಬರೇಚರರನನ್ವಿತ[3]ಮಂತ್ರಿಸಮೂಹಮಂ ಮನಂ
ಬಿಡೆ ಪೊರೆದಿಷ್ಟಬಂಧುಜನಮಂ ಕರೆದೆಲ್ಲರುಮಿಾಕುಮಾರನಂ।
ಪಿಡಿದಿರಿಮೆನ್ನ ಪಂಬಲನಿದಂ ಬಿಸುಡಿಂ ಬಿಡಿಮೆಂದು ಖೇಚರಂ
ಬಿಡಿಸಿದನಾಪ್ತರಂ ಬಿಡಿಸುವಂತಿರೆ ಮೋಹದ ಬಳ್ಳಿವಳ್ಳಿಯಂ॥ ೫೦

ವ॥ ಅಂತು ನಿಜಾಪ್ತವರ್ಗಮುಮಂ ಬಂಧುವರ್ಗಮುಮಂ ವಿದ್ಯೆಗಳುಮಂ ಬಿಡಿಸಿ ವಿದ್ಯಾಧರಪ್ರಸಾಧನಮೆನಗಿಂದಿನೊಳನಿತೆಂಬಂತೆ ನೆಱೆಯೆ ಕೈಗೆಯ್ದು ಮಣಿಮಯಶಿಬಿಕಾರೂಢನಾಗಿ ಪೊಱಲಂ ಪೊಱಮಟ್ಟನೇಕಹಾಟಕಕೂಟಕೋಟಿಘಟಿತಸಿದ್ಧಕೂಟಮಂ ತ್ರಿಪ್ರದಕ್ಷಿಣಂಗೆಯ್ದು ಜಿನೇಂದ್ರಾರ್ಚನಾಪುರಸ್ಸರಂ ವಾಚನಾಗ್ರಹಣಸಮೇತಮಾರಾಧನೆಯಿನರ್ಚಿಸಿ ವೀರಸಂಸ್ಥಾನಾರೂಢ[4]ನಾದಾಗಳ್,

ಅರಸರ ಮೆಚ್ಚು ತಮ್ಮ ಮನದೊಳ್ ನಿಲೆ ಸೈರಿಸದಂತನಿತ್ಯಮಿಾ
ನರರ ವಿಭೂತಿಯೆಂಬ ಬಗೆ ಬಂದಿರೆ[5] ಮಾಣದೆ ತಮ್ಮತಮ್ಮ ಪು।
ತ್ರರನಭಿಯೋಗದಿಂದತಿಬಳಂಗೆ ನಿಯೋಜಿಸಿ ಪೂಣ್ದರಂ
ಬರಚರರಂಬರೇಚರರುಮಣ್ಮಿಕೊಳಲಟ್ಟಿರೆ ಜೈನದೀಕ್ಷೆಯಂ॥ ೫೧

---

1ಕ.—ಮಾರ್ಣ್ದಿರ್ಪನೇ. 2ಖ ಗ.—ಪರಿಚ್ಛೇದಮನಱಿಯೆನುಡಿದು. 3ಖ.—ಚರಸಮನ್ವಿತ. 4ಕ.—ಸಂಸ್ತವಾರೂಢ; ಗ.—ಸಂಸ್ತರಾರೂಢ. 5ಖ.—ಸಂದಿರೆ.

ವ॥ ಆಗಳಾಸ್ವಯಂಬುದ್ಧಂ ನಿರ್ಯಾಪಕಾಚಾರ್ಯನಾಗಿ ಪಂಚಗುರು ಸಮಕ್ಷದೊಳ್ ಬಾಹ್ಯಾಭ್ಯಂತರಪರಿಗ್ರಹಪರಿತ್ಯಾಗಪುರಸ್ಸರಂ ವೀರಸಂಸ್ಥಾನಾರೂಢನಂ ಮಹಾಬಳನಂ ಜಾತರೂಪಧರನಂ ಮಾಡಿ ಚತುರ್ವಿಧಾಹಾರಶರೀರಪ್ರತ್ಯಾಖ್ಯಾನಮಂ ಕೊಟ್ಟು,

ತನ್ನಿಂದಂ ಪೆಱರಿಂದಂ
ತನ್ನಂ ಸಾವಗಿಸುವಾಸೆಯಿಲ್ಲದೆ ದೇಹೋ।
ತ್ಪನ್ನಪರೀಷಹಸಂಹತಿ
ತನ್ನೊಡಲಂ ನೆಱೆಯೆ ತವಿಸುತಿರ್ಪುದುಮತ್ತಂ[1] ॥ ೫೨

ಆಯಿರ್ದ ಮಾಷ್ಕೆಯೊಳ್ ಪರ
ಮಾಯುಷ್ಯಾಂತಂ ಬರಂ ನಿರಾಕುಳನಾಗಿ ।
ರ್ಪಾಯಿರವಿನ ಜೈನಾಭಿ
ಪ್ರಾಯಂ ಪ್ರಾಯೋಪಗಮನದಿಂ ತೊರಯಿಸಿದಂ[3] ॥ ೫೩

ವ॥ ಅಂತು ತೊರಯಿಸಿ,

ಮಂಗಳಕಾರಣಪಂಚಪ
ದಂಗಳನಪವರ್ಗಮಾರ್ಗವಿರಚಿತಸೋಪಾ ।
ನಂಗಳನಕ್ಷಯಮಂತ್ರಪ
ದಂಗಳನೋದುವುದು ನೆಱೆಯೆ ನಿಶ್ಚಳಮತಿಯಿಂ ॥ ೫೪

ಅವನೋದುವನಿತು ಬುದ್ಧಿಯೆ
ತವುತಂದೊಡೆ ಪಂಚಪದದ ನಾಮಾಕ್ಷರಮಂ ।
ಧ್ರುವಮೋದುವುದವು ತೊಡರ್ವುದು
ಮವಶ್ಯಮೋದಲಸದವಱ ಮೊದಲಕ್ಕರಮಂ ॥ ೫೫

ಅದು ತಡತಡಾದೊಡರ್ಹ
ತ್ಪದಮಂ ನಾಲಗೆಗೆ ತರ್ಪುದದು ಬಾರದೊಡಿ ।

---

1ಕ.—ತಿರ್ಪೊಡಮೆಂತುಂ    2ಖ.—ತೊಱಯಿಸಿದಂ

ಪುರ್ದದಕಾರವೊಂದಱೊಳ್ ಮ
ತ್ತದು ತೊಡರ್ದೊಡೆ ತೊಡರದಿರ್ ಬಱಿಕ್ಕೇತಱೊಳಂ ॥ ೫೬

ಮುನಿವೃಂದೋಚ್ಛ್ರಿತಪಂ
ಜನನಮಸ್ಕೃತಿಗಾಂತು ಕಿವಿಯುನರ್ಹತ್ಪದಮಂ ।
ನೆನೆಯುತ್ತುಮನುಪ್ರೇಕ್ಷೆಯೆ
ಮನದೊಳ್ ತಣ್ಮಾಲೆಯೆ ಸೇಸೆಗೊಳ್ ಖಚರಪತೀ ॥ ೫೭

ಮಿಡಿದನಿತು ಬೇಗದಿಂದಱಿ
ಪೊಡಲನಿದಂ ಪೋಗೆ ನೂಂಕಿ ಚೆಲ್ವಪ್ಪೊಡಲಂ ।
ಪಡೆದಪೆಯೀಗಳ್ ಬಲ್ವಿಡಿ
ವಿಡಿದು ಶರಣ್ಬುಗು ಜಿನೇಂದ್ರಪದಸರಸಿಜಮಂ ॥ ೫೮

ವ॥ ಎಂದಾಮಹಾನುಭಾವನ ಪೇೞ್ದ ಮಾೞ್ಕೆಯೊಳಿರ್ಪತ್ತೆರಡು ದಿವಸಂ ಬರಂ ವೀರಶಯ್ಯಾತಳಗತನಾಗಿರೆ,

ಅಳುರ್ವ[1]ಪರೀಷಹಾನಳಶಿಖಾವಳಿಗಳ್ ಕೊಳೆ ಧೈರ್ಯಮಂ ಪುದುಂ
ಗೊಳಿಸಿ ಸುರುಳ್ದು ಕುರ್ಗಿದ ಕಱುಂಗಿದ ಖೇಚರನಂಗಮಂ ಮೃಗಂ ।
ಗಳುಮಿರದೆಯ್ದೆ ವಂದು ನಡೆ ನೋಡಿದುವಿಂತಿದು ದಾವಪಾವಕಂ
ಬಳಸೆ ಸುರುಳ್ದ[2] ಬಾಳಸಹಕಾರಮಹೀರುಹಮೆಂಬ ಶಂಕೆಯಿಂ ॥ ೫೯

ವ॥ ಅಂತು ನೋಂತು,

ಸೊಗಯಿಪ ಮುನ್ನಿನಿರ್ದ ಪರಿಜಿಂ ಕಡುಚೆಲ್ವುಗಡಂ ಜಿನೇಂದ್ರನಂ
ಬಗೆವ ಮನಂ ಗಡಂ ಮುಗುಳ್ದು ಜಾನಿಪ ಕಣ್ಗಡಮಾತ್ಮತತ್ತ್ವದೊಳ್।
ಬಗೆ ಗಡಮೆಯ್ದೆ ಸೂೞ್ಗಡದೆ ಪಂಚಪದಂಗಳನೋದುತಿರ್ಪ ನಾ
ಲಗೆ ಗಡಮೇಂ ಸಮಾಧಿವಿಧಿಯುಂ ನೆಱೆ ತಾಳ್ದಿದನೋ ಮಹಾಬಳಂ ॥೬೦

ಇಂತನವದ್ಯಮಪ್ಪಪದದೊಳ್ ಪತಿಯುಂ ನಡೆಯಲ್ಕೆ ಪೇೞ್ದು ತಾ
ನುಂ ತಱಿಸಂದುದಗ್ರತಪಮಂ ತಡವಿಲ್ಲದೆ ಕೊಂಡು ಘೋರವೀ ।
ರಂ ತಪಮೆಂಬಿನಂ ನೆಗೞ್ದು ತತ್ಸಚಿವೋತ್ತಮನೊಳ್ಳಿಕೆಯ್ದನಿ
ನ್ನಂತುಟು ಪೇೞ್ದು ಕೆಮ್ಮಗಿರೆ ಗಮ್ಮನೆ ಕಮ್ಮರಿ[3]ಯೋಜನಾಗನೇ ॥೬೧

---

[1]ಖ.—ಅಳುರ್ದ; ಗ.—ಅಳುರ್ದು. [2]ಖ.—ಕಱಿಲ್ಪ.

[3]ಗ.—ಪೇಳ್ದು ಕೆಮ್ಮನಿರೆ ತಪ್ಪದೆ ಕಮ್ಮರಿ.

ವ॥ ಅಂತು ಮಹಾಬಳಖಚರೇಂದ್ರಂ ಪ್ರಾಯೋಪಗಮನವಿಧಿಯಿಂದ ಮಾತ್ಮೀಯಶರೀರಭಾರಮನಿೞಿಪೆ ತತ್ಸಮಯದೊಳನಲ್ಪಸುಖನಿವಾಸಮೆನಿಸಿದೀಶಾನಕಲ್ಪದೊಳ ಪ್ರತಿಹತಚಕಂಚತ್ಪಂಚರತ್ನಪ್ರಭಾಪ್ರಸರಪ್ರಕಟಿತಸಂಧ್ಯಾಭ್ರವಿಭ್ರಮಭ್ರಾಜಿಯಪ್ಪ ದಿವ್ಯತಳ್ಪತಳದ ಪೊರೆಯೊಳಗೆ ತೊಳತೊಳತೊಳಗಿ ಪೊಱಮಡುವೆಳನೇಸಱ[1]ಬಳಗದ ಬೆಳಗನೊಳಕೊಂಡು,

ಮಿಱುಗುವ ರತ್ನಭಿತ್ತಿಗಳ ದೀಧಿತಿಯಂ ನಿಜದೇಹದೀಪ್ತಿಗಳ್
ಮಱಸೆ ಸಮಸ್ತದೀಪ್ತಿಪರಮಾಣುಗಳಂ ಗಡೆಗೊಂಡು ಜೌವನಂ ।
ನೆಱೆದಿರೆ ದಿವ್ಯಮೂರ್ತಿಸಹಜಾಂಬರಭೂಷಣದಿವ್ಯಮಾಲೆಗಳ್
ನೆಱೆದೊಡವುಟ್ಟೆ ಮುನ್ನೆ ಮಱಲುಂದಿದನೆೞ್ಚಱುವಂತೆ ಪುಟ್ಟಿದಂ ॥ ೬೦

ವ॥ ಅಂತು ಪುಟ್ಟಿದಾಗಳ್,

ತೆಱೆಯದೆ ಮುನ್ನೆ ಕೆತ್ತ ಪಡಿಗಳ್ ನವಸಾರಭಮುಣ್ಮೆ ಮೊಕ್ಕಳಂ
ತೆಱೆದುವು ರತ್ನತೋರಣಗಣಂಗಳುದಗ್ರವಿಮಾನರಾಜಿಯೊಳ್ ।
ನೆಱೆದುವು ಜೈನರೊಳ್ಗುಡಿಯ ದಾಂಗುಡಿಗಳ್ ನಲಿದಾಡುವಂತೆ ಸು
ತ್ತಿಱಿದುವು ಭೋಂಕೆನಾತನ ಪುರಾತನಪುಣ್ಯಫಲಪ್ರಭಾವದಿಂ ॥ ೬೧

ವ॥ ಅದಱ ತದನಂತರದೊಳ್,

ನೆಗೞ್ದುವು ಪಟುಪಟಹಮೃದಂ
ಗಗಭೀರಾರಾವಮಮರನಾಟಕಶಾಲಾ ।
ದಿಗಳೊಳತಿಮಧುರಮೊಮೊರ್ಗವ
ಲೊಗೆದುದು ಜಯಜೇಯನಂದವರ್ಧಸ್ವರವಂ[2] ॥ ೬೨

ಸುರತರುನಂದನಂಗಳನಲರ್ಮುಟೆ ಬಂದೆಱಗಿತ್ತು ದೇವಸಾಂ
ದರಿಯರ ದಿವ್ಯಮಪ್ಪ ಪೊಸಗಂಪಿನಲಂಪನವುಂಕಿ ಕೊಂಡವ ।
ಳ್ದಿರ ಮಿಳಿರ್ಪೊಳ್ಗುರುಳ್ಗಳನೆ ಲೀಲೆಯಿನಾಡಿಸಿ ಪುಷ್ಪಕೇಸರಂ
ತೆರಳೆ ತೆರಳ್ಚಿ ಬೀಸಿದುದು ತೆಂಬೆಲರೆಂಬೆಲರಪ್ಪಿಕೊಳ್ವವೋಲ್ ॥ ೬೩

---

[1]ಕ.—ಪೊರೆಯೊಳಗೆ ಕೆಮ್ಮುಗಿಲತೆಗೞಿಗೆಯ ಪೊರೆಯೊಳ್ ಪೊರೆಯೊರೆಯಲ್ಲದೆ ತಳತಳನೆ ತೊಳಗಿ ಪೊಳೆದು ಪೊಱಮಡುವ ಎಳನೇಸಱ.

[2]ಖ.—ವರ್ಧನರವಮುಂ

ವ॥ ಮತ್ತಮಮರಲೋಕಾನೇಕವಾದ್ಯಂಗಳಲಯಂಗಳೊಳಂ ಪೂತ ಜಂಗಮಲತೆಗಳಂತೆಱಗಿ ತನ್ನ ಮುಂದೆ ಬಂದಾಡುವಚ್ಚರಸಿಯರುಮಂ ಅನೇಕಭಂಗಿಭೃಂಗಾರಮಣಿದರ್ಪಣಕನಕಕಳಶಚಾರುಚಾಮರಾತಪತ್ರಪವಿತ್ರಿತಕರಪಲ್ಲವೆಯರಾಗಿ ಸೇಸಿಕ್ಕಲೆಂದು ಬಂದಮರಪುರಂಧ್ರಿಯರುಮಂ ಆಳೋಕನಮಾತ್ರದೊಳ್ ಮನಮನುಗಿಬಗಿಮಾಡಿ ಮಸೆದ ಮದನನಲಗಿನಲರ್ಗಳಂತೆ ಕಣ್ಣೊಳಿಳಸಿ ಬಳಸಿ ಬಂದಿರ್ದ[1] ಪಾಟದಾಟದಮುದ್ದಿನಬರ್ದಿನ ಪರಿವಾರದೇವಿಯರುಮಂ ಅತಿಲಲಿತಭೂಷಾಭ್ಯಸನಚತುರಭಾಷಾವಿಶೇಷಕುಶಲೆಯರಪ್ಪ ದೇವವಿಳಾಸಿನಿಯರುಮುಮಂ ಭೋಂಕನೆ ಕಂಡು,

ಆನಾರ್ಗಿರ್ದ ವಿಮಾನಮಾವುದಿವರಾರ್ಗೀಲೋಕಮೇನೆಂಬುದಾ
ನೇನೋಂತಿಲ್ಲಿಗೆ ವಂದೆನೀವಿಭವಮಿಂತಾರಿಂದಮಾಯ್ತೆಂಬುದಂ।
ತಾನಾಗಳ್ ಬಗೆವನ್ನೆಗಂ ಮನದೊಳಾದೇವಂ ಭವಪ್ರತ್ಯಯ
ಜ್ಞಾನಂ ತೋಟ್ಟನೆ ಪುಟ್ಟೆ ಪೂರ್ವಭವದೊಳ್ತೊಟ್ಟೊಂದು ವೃತ್ತಾಂತಮಂ॥ [೬೬

ವ॥ ನೆಱೆಯಱಿದು,

ಇದು ದೇವೇಂದ್ರನಿವಾಸಮೆನ್ನ ನೆಲೆಯುಂ ಶ್ರೀ ಶ್ರೀಪ್ರಭಂ ಮುಂದೆ ನಿಂ
ದಿದು ದೇವವ್ರಜಮಿಂತಿದೆಲ್ಲಮಮರೀಸಂದೋಹಮಾಂ ದೇವನ।
ಪ್ಪುದು ಮುಂ ಖೇಚರರಾಜನಾದ ಭವದೊಳ್ ಸಯ್ಪಿಂ ಸ್ವಯಂಬುದ್ಧನಿಂ
ಬುದನಾನೆಂದೆನದಲ್ಲದಂದೆನಗಮಿಾಲೋಕಕ್ಕಮೇಂ ಸಮ್ಮದಂ॥ ೬೭

ವ॥ ಎಂದು ಬಗೆವನ್ನೆಗಮೆತ್ತಿದ ನಮೇರುಮಂದಾರಪಾರಿಜಾತದ ಬಣ್ಣವಾಸಿಗಂಗಳುಂ ಮುತ್ತಿನ ಮಾಣಿಕದ ಪಡಲಿಗೆಗಳೊಳ್ ಪಸರಿಸಿದ ವಿಚಿತ್ರವಸ್ತ್ರಾಭರಣಂಗಳುಂ ಚೆಂಬೊನ್ನ ತಳಗೆಗಳೊಳ್ ತೆಕ್ಕನೆ ತೀವಿದ ಬಿಡುಮುತ್ತಿನ ಸೇಸೆಗಳುಂ ಬೆರಸು ಮಹತ್ತರದೇವಿಯರ್ ಬಂದು ಪೊಡೆವಟ್ಟು

ಇದು ನಿಜಪೂರ್ವಪುಣ್ಯಫಲದಿಂ ದೊರೆಕೊಂಡ ವಿಮಾನಮಿಾವಿಮಾ
ನದೊಳನುಬಂಧಿಸಿರ್ದುದಿದು ದೇವನಿಕಾಯಮಿದೀತ್ವದಂಘ್ರಿಪ।
ದ್ಮದ ಬಳಸಿರ್ಪ ದಿವ್ಯಗಣಿಕಾಜನಮಿಂತಿದನಾಳ್ದು ದೇವ ರಾ
ಗದೊಳಿರು ನೀನುಮಿಲ್ಲಿ ಲಲಿತಾಂಗತೆಯಿಂ ಲಲಿತಾಂಗದೇವನೈ॥ ೬೮

[1] ಗ.—ಮದನನ ಪೊಳೆವಲರ್ಗಣೆಗಳಂತೆ ಪೊಳೆದೆಳಸಿ ಬಂದಿರ್ದ.

ಇದು ಸುಖದೊಂದು ತುತ್ತತುದಿ ರಾಗದ ಮೊತ್ತಮೊದಲ್ ನಿರಂತರಾ
ಭ್ಯುದಯದ ಸಾಗರಂ ವಿಭವದಾಗರವಿಾದಿವಿಜೇಂದ್ರರುಂದ್ರಲೋ।
ಕದೊಳಮಿದೊಂದೆ ಸಾರಮಿದು ಜೈನಪದಾಬ್ಜವರಪ್ರಸಾದದಾ
ದುದು ನಿನಗಪ್ಪ ಕಾರಣದಿನೀಗಳೆ ಪೂಜಿಸು ಚೈತ್ಯರಾಜಿಯಂ ॥ ೯೯

ವ॥ ಎಂಬುದುಮಮರಲೋಕದರ್ಶನಾನಂತರೋತ್ಪನ್ನರಾಗಸಾಗರೋದಾರಪೂರಪರಿಪ್ಲಾವಿತಾಂತರಂಗನನುಸಂಗತಾತ್ಯಂಗನುತ್ತುಂಗಮಣಿವಿಭೂಷಣಮರೀಚಿಮೇಚಕಿತದೇವಾಂಗನಾನಿಕಾಯುಸಮೇತನೀಶಾನಕಲ್ಪದಕೃತ್ರಿಮಚೈತ್ಯಾಲಯಂಗಳಂ ಅರ್ಚಿಸಿ[1] ತಪ್ತತಪನೀಯಚ್ಛಾಯನುಂ ಸಪ್ತಹಸ್ತೋಚ್ಛ್ರಾಯನುಂ[2] ನಿದ್ರಾಲಸ್ಯಾಕ್ಷಿನಿಮೇಷಜರಾಶೋಕವಿಷಾದವಿರಹಿತನುಂ ಸಹಜಸುರಭಿಗಂಧಬಂಧುರನುಂ ಏಕಪಾರಾವಾರೋಪಮಾಯುಷ್ಯನುಂ ವರ್ಷಸಹಸ್ರಸಂಕಲ್ಪಕಲ್ಪಿತಾಮೃತಾಹಾರನುಂ ಅರ್ಧಮಾಸನಿರ್ಯತ್ಸುರಭಿನಿಶ್ವಾಸನುಂ ಕಾಯಪ್ರವಿಚಾರನುಂ ಅಪರಿಮಾಣಸುರತರುಪ್ರಸೂನಶೇಖರನುಮಾಗಿ ನಾಲ್ಛಾಸಿರ್ವರ್ ಮನೋನಯನವಲ್ಲಭೆಯರೊಳಂ ಸ್ವಯಂಪ್ರಭೆ, ಕನಕಲತೆ, ಕನಕಮಾಳೆ, ವಿದ್ಯುಲ್ಲತೆಯೆಂಬ ನಾಲ್ವರ್ ಮಹಾದೇವಿಯರೊಳಂ,

ಮಣಿಮಯದೀಪ್ತಿಯೊಳ್ ಪುದಿದು ಪಜ್ಜಳಿಪುಜ್ಜ್ವಳಕಾಂತಿ ಗಾಡಿಯೊಳ್
ಪೆಣೆದು ವಿಳಾಸದೊಳ್ ತೊಡರ್ದು ಕೆಯ್ತುಮಲಂಪನೆ ಮಾಡೆ ನೋಡಿ ಕಣ್॥
ತಣಿವಿನಮಪ್ಪಿ ತೋಳ್ ತಣಿವಿನಂ ಸುರತಾಮೃತಸೇವೆಯೊಳ್ ಮನಂ
ತಣಿವಿನಮಾದಲಂಪು ಮಿಗೆ ಭೋಗಿಸಿದಂ ಸುರಲೋಕಸಾಖ್ಯಮಂ ॥ ೨೦

ಪೊಳೆವೆಳಮಿಂಚಿನಂತೆಸೆದು ಗಾಡಿಯೊಳೊಂದಿದ ತನ್ನರೂಪು ಕ
ಣ್ಗೊಳೆ ಸವಿಯಂ ಪುದುಂಗೊಳಿಪ ಚಿತ್ರರತಂಗಳ ಭಂಗಿಗಳ್ ಮನಂ।
ಗೊಳೆ ನಗೆ ಸಬ್ಬಮಂ ಬಿನದಮೆಂಬಿವೆಱಿಂ ಲಲಿತಾಂಗನಂ ಮನಂ
ಗೊಳಿಸುವರಿಚ್ಚೆಕಾರ್ತನದ ಲಲ್ಲೆಯ ಸಗ್ಗದ ದೇಸೆ[3]ಕಾರ್ತಿಯರ್ ॥ ೨೧

ಕೞಿಮೆ ವಿಳಾಸಮಂ ಪಡೆದ ರಾಗದ ಭೋಗದಲಂಪಿನಿಂಪು ಪೊಂ
ಪುೞಿಯೆನೆ ತದ್ವಿಮಾನದೊಳೆ ಪುಟ್ಟಿದ ತನ್ನಯ ದೇವಿಯರ್ ಪಲರ್ ।

---

[1] ಖ.—ಬಂದಿಸಿ. [2] ಗ.—ಹಸೊಚ್ಛ್ರಿತಶರೀರನುಂ. [3] ಗ.—ಗಾಢಿ.

ಕಟಿಪಿನವಾಯುರಬ್ಧಿಯೊಳನುಕ್ರಮದಿಂ ಪಳಿತೋಪಮಂಗಳ
ಯ್ದುಟಿಪಿನವುಂಡನಾತ್ರಿದಶಲೋಕಸುಖಾಮೃತಮಂ ಸುರೋತ್ತಮಂ॥

ವ॥ ಅನ್ನೆಗಂ ಸ್ವಯಂಪ್ರಭಾಭಿಧಾನೆಯರ್ ಪಲಂಬರುಮತಿಕ್ರಾಂತೆಯ
ರಾಗೆ ತತ್ಸಂತಾನದೊಳ್ ಶ್ರೀಪ್ರಭವಿಮಾನದೊಳುಪಪಾತತಲ್ಪತಳದ ಪೊರೆ
ಯೊಳಂ ಪೊರೆಯೊರೆಯಿಲ್ಲದ ಮದನರಾಗರಸದೊಳ್ ಪೊರೆದು,

ಅಭಿನವಪಾರಿಜಾತಕುಸುಮಾಸವವೊರ್ಮೊದಲುಣ್ಮೆ ದೇವದುಂ
ದುಭಿ ನಭದೊಳ್ ಪೊದಪ್ದೆಸೆಯೆ ಕಣ್ಗೆಸೆದಿರ್ಪ ನಿಜಾಂಗಸಂಗತ ।
ಪ್ರಭೆ ಸುರಲೋಕಮಂ ಬೆಳಗೆ ವಿಸ್ಮಯಮುಪ್ಪಿನಮಾಗಳಾಸ್ವಯಂ
ಪ್ರಭೆ ಲಲಿತಾಂಗನಳ್ಕಿರ್ದೆಗೆ ತೊಟ್ಟನೆ ಬೇಂಟಮೆ ಪುಟ್ಟೆ ಪುಟ್ಟಿದಳ್॥ ೭೩

ಅದು ಸುಖದೊಂದು ಪಿಂಡಮದು ಪುಣ್ಯದ ಪುಂಜಮದಂಗಜಂಗೆ ಬಾ
ಪ್ಪೆಮ್ಮದಲದು ಚಿತ್ತಜಂಗೆ ಕುಲದೈವಮದಂಗಜಚಕ್ರವರ್ತಿಗೆ ।
ತ್ತಿದ ಪೊಸವಟ್ಟಮಂತದು[1] ಮನೋಜನ ಕೈಪಿಡಿಯೆಂದುಮಾಣ್ದೆನಾ
ಸುದತಿಯ ರೂಪನಿಂ ಪೆಱತನೆಂದೊಡೆ ಚೀ ಕರಮೆಗ್ಗನಾಗೆನೇ ॥ ೭೪

ನೆಗೞ್ದಮರಾಂಗನಾಜನದ ರೂಪುಗಳಿಲ್ಲಮದೀಕೆಯೊಂದು ದೇ
ಸೆಗೆ ನಿಮಿರ್ವೊಂದು ಪುರ್ವಿನ ನಯಕ್ಕಮವೊಂದದಗುಂತಿಗೊಂದು ಭಂ[2] ॥
ಗಿಗೆ ನೆಗಪ್ದೊಂದು ಮೆಲ್ಪಿನ ತೊದಳ್ನುಡಿಗಪ್ಪೊಡಮೆಯ್ದೆವಾರವೇ
ನೊಗಸುವವೆಂದು[3] ತಳ್ತಗಲನಾಕೆಯನಾಲಲಿತಾಂಗವಲ್ಲಭಂ ॥ ೭೫

ಬ್ರತದಿಂದಂ ಪಡೆದಿಂದ್ರಲೋಕವಿಭವಂ ಮುನ್ನಾದ ದೇವಾಂಗನಾ
ತತಿಯಿಂದಂದಿನಿತಿಂಪನೀಯದು ಮನಕ್ಕಾಹ್ಲಾದಮಂ ಮಾಳ್ಪ ತ ।
ತ್ಸತಿಯಿಂ ನೆಟ್ಟನೆ ಸಾರಮಾದುದು ಗಡಂ ತತ್ಕಲ್ಪಜಂಗೆಂದೊಡಾ
ಜಿತವಿದ್ಯುತ್ಪ್ರಭೆಯಂ ಸ್ವಯಂಪ್ರಭೆಯನಿನ್ನೇವಣ್ಣಿಪೆಂ ಬಣ್ಣಿಪೆಂ ॥ ೭೬

ಎಸೆದಿರ್ದೆಯೊಳ್ ಪಳಂಚುವ ಕಲಧ್ವನಿಯಿಂ ಪೊಸತೊಂದು ರಾಗಮಂ
ಪೊಸಯಿಸಿ ಸೋಂಕಿ ಸೋಂಕಿದೊಡೆ ಬಂದಿರೆನಿಂದಧರೋತ್ತರಂಗಳೊಳ್ ।

---

[1]ಗ.—ವಟ್ಟಮಲ್ತದು. [2]ಕ.—ನಯಕ್ಕಮವೊಂದುಗಿದುಣ್ಮುವೊಂದುಭಂ.
[3]ಕ.—ನೊಗಸುಗವೆವೊಲ್ದು ; ಗ.—ನೊಗಸುಗುವಂತೆ.

ಮಿಸುಪ ರಸಾಂತರಂಗಳನೊಡಂಬಡನಾಗದೆ ತನ್ನೊಳಿಂತು ಪೋ
ಲಿಸುವೊಡೆ ಪೋಲಿಸಲ್ಕೆ ದೊರೆ ವೀಣೆಯನಾಸುರತಪ್ರವೀಣೆಯಂ ॥ ೭೭

ವ॥ ಮತ್ತಮಾಕೆವೆರಸೊರ್ಮೆ ನಂದೀಶ್ವರಮಹಾಮಹಿಮೆಗಂ ಪಂಚಕಲ್ಯಾಣೋತ್ಸವಕ್ಕಮಚ್ಯುತೇಂದ್ರನೊಡನೆ ನಿಜಪೂಜಾವಿಳಾಸಮಂ ಮೆಱೆಯಲೆಂದು ಪೋಗಿ ವಿವಿಧದಿವ್ಯದ್ರವ್ಯಾರ್ಚನೆಗಳಿಂ ತ್ರೈಲೋಕ್ಯಪೂಜ್ಯನಂ ಪೂಜಿಸಿಯುಮೊರೊರ್ಮೆ,

ಹಿಮವತ್ಕುತ್ಕೀಳಲೀಲಾವನಪರಿಸರರಮ್ಯೋಪಕಂಠಂಗಳೊಳ್ಪಿಂ
ಹಿಮವದ್ದೇವೇಂದ್ರಶೈಳೋಪರಿತಳವನದೊಳ್ತಳ್ತಲಂಪಿಂ ಸ್ವಯಂಭೂ।
ರಮಣಾಂಭೋರಾಶಿವೇಳಾವನನಿಕಟನಿಕುಂಜಂ[1]ಗಳೊಳ್ ಕ್ರೀಡಿಸುತ್ತು
ತ್ತಮಸಾಖ್ಯಾಧಾರನಾದಂ ಸುಕವಿಜನಮನೋಮಾನಸೋತ್ತಂಸಹಂಸಂ ೭೮

ಅಣಿಮಾದ್ಯಷ್ಟಗುಣಪ್ರವೀಣ[2]ವಿಭವಂ ದೇವಾಂಗನಾಸನ್ಮನಃ
ಪ್ರಣಯಪ್ರೀಣಿತಮಾನಸಂ ಸುರವಧೂಲೀಲಾವಧೂತಪ್ರತಿ ।
ಕ್ಷಣಚಂಚಚ್ಚಮರೀರುಹಂ ಪಟುನಟಪ್ರಾರಬ್ಧಸಂಗೀತಕಂ
ತಣಿದಂ ಸಂತತಮಿಂತು ದಿವ್ಯಸುಖದೊಳ್ ಸಂಸಾರಸಾರೋದಯಂ ॥ ೭೯

ಗ॥ ಇದು ದೇವೇಂದ್ರಮುನೀಂದ್ರವಂದ್ಯಪರಮಜಿನೇಂದ್ರಮುಖ
ಚಂದ್ರವಾಕ್ಚಂದ್ರಿಕಾಪ್ರಸರಪ್ರಸಾದೋದೀರ್ಣಸೂಕ್ತಿ
ಕಲ್ಲೋಲಮಾಳಾಕೀರ್ಣಕವಿತಾಗುಣಾರ್ಣವ
ಪ್ರಣೀತಮಪ್ಪಾದಿಪುರಾಣದೊಳ್
ಲಲಿತಾಂಗದೇವವರ್ಣನಂ
ದ್ವಿತೀಯಾಶ್ವಾಸಂ
ಸಂಪೂರ್ಣಂ.

---

1ಖ.—ವನಗಿರಿತಟಕುಂಜ. 2ಕ.—ಗುಣಪ್ರಭೂತ.

## ತೃತೀಯಾಶ್ವಾಸಂ.

ಶ್ರೀಮದಮರಾಂಗನಾನನ
ತಾಮರಸಾಮೋದಮತ್ತಮಧುಕರನಾಕ |
ಲ್ಪಾಮರನೊಸೆದಂ ಸುರಸಾ
ಖ್ಯಾಮೃತರಸದೊಳ್ ಸರಸ್ವತೀಮಣಿಹಾರಂ ‖ ೧

ಸುರತರುನಂದನಾವಳಿಗಳಂಗಜರಾಗಮನೀವುವಾವುದೊಂ
ದಿರಲೆಡೆ ಚೆಲ್ವದರ್ಕೆ ಬಗೆದಾಗಳೆ ವಾಹನದೇವರುಯ್ವರ |
ಪ್ಸರಸಿಯರಿಚ್ಛೆಯಂ ಸಲಿಪರೊಲ್ದಣಿಮಾದಿಗುಣಾನ್ವಿತಾಮರರ್
ಪರಿವೆಸಗೆಯ್ವ ರೆಂಬೆನಱಿಯೆಂ[1] ಪೊಗೞಲ್ ಸುರಲೋಕಸೌಖ್ಯಮಂ ‖ ೨

ವ॥ ಅಂತಾತ್ಮಪುಣ್ಯೋಪಾರ್ಜಿತಾಮರಲೋಕಭೋಗಮೇಕಸಾಗರಪ್ರಮಿತಜೀವಿತಮಂಱುದಿಂಗಳುೞಿದುದೆಂಬಂದಿಂಗೆ,

ಸೂಡಿದ ಪಾರಿಜಾತದ ನಮೇರುವ ಬಾಸಿಗಮೊಯ್ಯನೊಯ್ಯನಿ
ರ್ಪೋಡಿದುದಂದಿನಂಗರುಚಿ ಕಣ್ಗೆೞಿದಾಯ್ತು ವಿಭೂಷಣಂಗಳೊಳ್ |
ತೀಡುವ ರಶ್ಮಿಗಳ್ ಮಸುಳ್ದುವಾಗುಳಿಯಾಯ್ತು ನಿತುಬ್ಬೆಗಂ ಮೊಗಂ
ಬಾಡಿ ತಗುಳ್ದು ಸೂಚಿಸಿದುವಾದಿವಿಜಂಗವಸಾನಕಾಲಮಂ ‖ ೩

ವ॥ ಮತ್ತಂ ತನ್ನ ಪೋಗಿಂಗೆ ನಡನಡನಡುಗುವಂತೆ ನಡುಗುವುಪವನದ ಕಲ್ಪವೃಕ್ಷಂಗಳುಮಂ ತನ್ನಗಲ್ಕೆಗೆ ಬಿನ್ನನಿರ್ಪಂತೆ ಬಿನ್ನನಾಗಿರ್ಪ ವಿಮಾನದ ಮಣಿಕುಟ್ಟಿಮಭೂಮಿಗಳುಮಂ ಆಗಳಾಗಳೆ ತನ್ನಂ ಪೆಱರ್ಪಿಡಿದು ತೆಗೆವಂತೆ ತನಗೆ ತಾನೇ ಪೊಣ್ಮುವ ಭಯಮುಮಂ ಭೋಂಕನೆ ಕಂಡು ನಾಕಲೋಕಚ್ಯುತಿಯನಾಗಳಱಿದು ಮನದೊಳಳ್ಕಿ ಬೆಳ್ಕನೆವೋಗಿ,

ಸುರತರುನಂದನಂಗಳಿರ ರತ್ನಪಿನದ್ಧವಿಮಾನಕುಟ್ಟಿಮಾಂ
ತರಸುರತಾಲಯಂಗಳಿರ ಚಾರುವಿಲೋಲಕಟಾಕ್ಷಪಾತಸಾಂ |
ದರಪರಿವಾರದೇವಿಯರಿರಾ ಕಡುಕೆಯ್ದು ಕೃತಾಂತನಿಂತು ನಿ
ರ್ದೆರಮೊಪೆದುಯ್ಯೆ ಬಾರಿಸದೆ ಕೆಮ್ಮನುಪೇಕ್ಷಿಸಿ ನೋಡುತಿರ್ಪಿರೇ ‖ ೪

[1] ಕ.—ಗೆಯ್ವರೆಂದೊಡಱಿಯೆಂ.

ಬಗೆದುಂ ನಿನ್ನಸ್ವಪಾಯೋನ್ನತಿಯನಿವಳತಿಸ್ನೇಹಸಂಬಂಧಮುಂ ನೀಂ
ಬಗೆದುಂ ಸಾಪೆನ್ಮ ನಣ್ಪಂ ಬಗೆಯುಮಱಿಯದೇನಾನುಮೊಂದಾಗಳುಂ ಪೆಱ।
ಲ್ಲಗೆ ನೀಂ ಕಲ್ಪಿಪ್ಪುದೆಮ್ಮಂ ನೆನೆದಿರ್ದೆಗಿಡಪಂತಾಗೆ ಪಾಲಿಪ್ಪುದಿಂತೀ
ಮೃಗಶಾಬೇಕ್ಷಣಾಕ್ಷಿಯುಂ ಮನ್ನಿಸುವುದೆನಿತನಾಂಬೇಡಿಪೆಂ ವಜ್ರಜಂಘಾ ॥ ೫೫

ವ॥ ಎಂದು ನುಡಿದು ಲಕ್ಷ್ಮೀಮತಿಮಹಾದೇವಿಯುಂ ತಾನುಮಾತ್ಮೀಯಪ್ರಿಯಾತ್ಮಜೆಯುಮೊಗಮನಕ್ಕರ್ತೆ ನೋಡಿ,

ಮನಮಱಿದಂಜೆ ಬೆರ್ಚೆ ಬೆಸಕೆಯ್ ನಿಜವಲ್ಲಭನೀನನೆಂದೊಡಂ
ಕಿನಿಸದಿರೊಂದಿವಗ್ರಮಹಿಷೀಪದದಲ್ಲಿ ಪದಸ್ಥೆಯಾಗು ನಂ ।
ದನರನಗಣ್ಯಪುಣ್ಯಧನರಂ ಪಡೆಯೆಂದಮರ್ದಪ್ಪಿಕೊಂಡು ತ
ತ್ತನುಜೆಯಗಲ್ಕೆಯೊಳ್ ನೆಗಪಿದರ್ ಬಸಮಲ್ಲದ ಬಾಷ್ಪವಾರಿಯಂ ॥ ೫೬

ವ॥ ಆಗಳ್ ವಜ್ರದಂತನನಂತಸಾಮಂತಾಂತಃಪುರಪರಿವಾರಂ ಬೆರಸು ಪೋಗಿ ಮಗಳುಮನಳಿಯನುಮಂ ಕಿಱಿದಂತರಂಬರಂ ಕಳಿಪಿ ಮಗುಳ್ವಾಗಳ್,

ಪೊಡೆವಡುವಪ್ಪಿಕೊಳ್ವ ನೆನೆಯುತ್ತಿರಿಮೆಂಬ ಸಮಸ್ತವಸ್ತುವಂ
ಕುಡುವ ಪಲರ್ಮೆಯಿಂ ಪರಸಿ ಸೇಸೆಯನಿಕ್ಕುವ ಬುದ್ಧಿವೇೞ್ವ ಕೈ ।
ಯೆಡೆ ನಿಮಗೆಂದೊಡಂಬಡಿಪ ನಲ್ಲರಗಲ್ಕೆಗೆ ಕಣ್ಣ ನೀರ್ಗಳಂ
ಮಿಡಿವ ಬಹುಪ್ರಕಾರಜನಸಂಕಟಮೊಪ್ಪಿದುದಾಪ್ರಯಾಣದೊಳ್ ॥ ೫೭

ವ॥ ಅಂತು ವಜ್ರದಂತಚಕ್ರವರ್ತಿ ಕಳಿಪಿ ಮಗುಳೆ, ವಜ್ರಬಾಹುಮಹೀಭುಜಂ ವಜ್ರಜಂಘನುಮಂ ಶ್ರೀಮತಿಯುಮಂ ಮುಂದಿಟ್ಟು ಕತಿಪಯಪ್ರಯಾಣಂಗಳಿಂ,

॥ ಉಜ್ಜ್ವಳ ॥

ಜಳವಿಹಂಗಮಭೃಂಗನಿನಾದವ್ಯಾಪ್ತಸರೋವರಸಂಕುಳಂ
ಗಳೊಳೆ ಪೂತದಿರ್ಮುತ್ತೆಯ ಸುತ್ತಿಂ ಸುತ್ತಿದ ಸೈಕತಭೂತಳಂ ।
ಗಳೊಳೆ ಮೆಲ್ಲನೆ ಬೀಡುವಿಡುತ್ತುಂ ಪೋಗಿ ಮಹೀಭುಜನೆಯ್ದಿದಂ
ಫಳವಿನಮ್ರಮಹೀಜಸಹಸ್ರಘಾಟಮನುತ್ಪಳಖೇಟಮಂ ॥ ೫೮

ವ॥ ಆಗಳ್ ನಿರಂತರಸಮುತ್ಥಾಪಿತಂಗಳುಂ ಕನಕರಜತಮಯಾನೇಕಸ್ಥಾಸಕಾಲಂಕೃತಂಗಳುಂ ವಿಚಿತ್ರಚೀನಾಂಶುಕರುಚಿರಂಗಳುಂ ಪಿನದ್ಧವಿವಿಧ

ಮಣಿದರ್ಪಣಧ್ವಜಂಗಳುಂ ಆಲಂಬಿತಜಾಂಬೂನದಘಂಟಾಜಾಲವಿರಾಜಿತಂಗಳುಂ ಆಮೋದಕುಸುಮದಾಮನಿಕಾಮಕಮನೀಯಂಗಳುಂ ಅಪ್ಪ ತೋರಣಂಗಳನೆ ನುಗುಳುತ್ತುಂ ಕಾಶ್ಮೀರಮೃಗಮದಚ್ಛಟಾಸಿಕ್ತಾಂಗಣಮುಂ ಅಂಗಣರಚಿತಮೌಕ್ತಿಕರಂಗಬಲಿಯುಂ ಬಲಿಕುಸುಮನಿಪತದಳಿಕುಳಾರಬ್ಧಗೀತಮುಂ ಗೀತಾನುಗತವಾದ್ಯಲಯಲಲಿತವಿಳಾಸಿನೀನೃತ್ಯಮುಮಪ್ಪುತ್ಪಳಖೇಟಮಂ ಪುಗುವಾಗಳ್,

ತಳಿರ್ಗಳ ತೊಂಗಲಿಂದಮಲರೋಳಿಗಳಲ್ಲುಗುವಂತೆ ಕೆಂದಳಂ
ಗಳಿನುದಿರ್ವಕ್ಕಿಗಳ್ ನಿಮಿರ್ದ ಬಾಂಗುಡಿಯಂತಿರೆ ನೀಳ್ದ ತೋಳ್ಗಳು ।
ಚ್ಚಳದಳಿಗಾನದಂತೆ ಮಣಿಕಂಕಣನಾದಮೊಱಲ್ಚೆ ಸೇಸೆಯಂ
ತಳಿದರನಂಗಜಂಗಮಲತಾಲಲಿತಾಂಗಿಯರಂದು ರಾಗದಿಂ ॥ ೫೯

ವ॥ ಆಪ್ರಸ್ತಾವದೊಳ್ ಪೂರ್ವವಧೂವರರಿರ್ವರಂ ಶ್ರೀಮತೀವಜ್ರಜಂಘರಂ ನೋಡಲೆಂದು,

ಅಳಕೋತ್ಸಾರಿತಕೇಶಸಂಚಯಮನೀವೀಬಂಧನಾವಿಷ್ಕೃತ
ಸ್ಖಳಿತಂ ವಿಸ್ಮೃತಪಕ್ಷ್ಮಪಾತನವಪೂರ್ವಾಳೋಕನಾಕೌತುಕಾ ।
ಕುಳಿತಾಂತಃಕರಣಂ ಸ್ವಕೀಯಭವನವ್ಯಾಪಾರಚಿಂತಾಂತರಂ
ಗಳನೆಲ್ಲಂ ಮಱೆದಿಂತು ಕೂಡೆ ನೆರೆದತ್ತುತ್ತುಂ ಪುರಸ್ತ್ರೀಜನಂ ॥ ೬೦

ವ॥ ಅಂತು ನೆರೆದು,

ದಿವಿಜೇಂದ್ರಾವಾಸದೊಳ್ ಮುನ್ನೊಡನೆ ದಿವಿಜಭೋಗಂಗಳಂ ಭೋಗಿಸಿರ್ದೀ
ಭವದೊಳ್ ಬಂದಿಲ್ಲಿ ಜಾತಿಸ್ಮರರೆನೆ ನೆರೆದೋರೊರ್ವರೊಳ್ ಮತ್ತಮತ್ಯು।
ತ್ಸವದಿಂದಂ ಮರ್ತ್ಯಭೋಗಂಗಳನನುಭವಿಸಲ್ ನೋಂತರಿಂತೀಗಳಿಂತುಂ
ತವರಂತೇಂ ಪುಣ್ಯಮಂ ಪುಂಜಿಸಿದರೊ ಪಿರಿದುಂ ಶ್ರೀಮತೀವಜ್ರಜಂಘರ್ ॥

ವ॥ ಎಂದತಿಪ್ರಮೋದಪ್ರಮತ್ತಪುರಜನಜನಿತಾನುರಾಗದೊಡನಾದಂಪತಿಯುಮೊಡನೆ ರಾಜಮಂದಿರಮಂ ಪೊಕ್ಕು ರಾಜ್ಯಲಕ್ಷ್ಮೀದೇವತೆಯು ಪರಿವಾರದೇವತೆಯರೆನಿಸುವ ವಾರಸೌಂದರಿಯರ ಸೂಸುವ ಪರಮಾನಂದಸ್ಮಿತಸುಧಾಸ್ಯಂದಸಂತತಾದ್ರ್ರಂಗಳಪ್ಪಾದ್ರ್ರಾಕ್ಷತಸಿತಕುಸುಮಾಂಜಳಿಗಳನಿದಿ

ಗೊಂಡು ಪಂಡಿತೆಗೆ ವಿವಿಧವಿನೋದಂಗಳಂ ತೋಱಿ ಮೊಱೆದು ದಾನಸ ನ್ಮಾನಾದಿಗಳೊಳ್ ಸಂತೋಷಂಬಡಿಸಿ ಪುಂಡರೀಕಿಣಿಗೆ ಕಳುಪಿ ಕೆಲವುದಿವ ಸವಿರ್ಪನ್ನೆಗಂ ಶ್ರೀಮತಿಗೆ ಗರ್ಭಚಿಹ್ನಂಗಳ್ ತೋಱೆ,

ರಮಣೀಯಂ ಪುಷ್ಪಿತಲತೆ
ಕಮನೀಯಮುಮಪ್ಪ ಕಾಯ್ತದೆನೆ ಭುವನಮನು |
ಕ್ರಮದಿಂ ನಾಲ್ವತ್ತೊಂಭ
ತ್ತುಮಳ್ಗಳ್ ಪುಟ್ಟಿದುವು ಗುಣದಮಳ್ ಪುಟ್ಟಿದವೊಲ್ ‖ ೬೦

ವ॥ ಅನ್ನೆಗಂ ವಜ್ರಬಾಹುಮಹಾರಾಜಂ ಮತ್ತೊಂದು ದಿವಸಂ,

ಶರದುದಿತೇಂದುಕುಂದಧವಳೋನ್ನತಸೌಧತಳಸ್ಥಿತಂ ಮನೋ
ಹರಗಗನಾಂಬುರಾಶಿನವಫೇನಸಮಾನಮನುದ್ಧಕೂಟಸಂ |
ಭರಮನದೊಂದುನೀರದಮನೞ್ತಿಯೆ ನೋಡಿ ಜಿನೇಂದ್ರರುಂದ್ರಮಂ
ದಿರಮನದೊಂದನೀದೊರೆತೆ ಮಾಡಿಪೆನೆಂದವದಱಂದಮಂ ನೃಪಂ ‖ ೬೧

ವ॥ ಬರೆಯಲೆಂದು ಬಟ್ಟಗೆವಲಗೆಯಂ ತರಿಸಿ ತಿಟ್ಟವಿಟ್ಟು ಬರೆವನ್ನೆಗಂ,

ಸಿರಿಯ ಶರೀರದ ರೂಪಿನ
ಸರ್ರೈಶ್ವರ್ಯದ ಪೊದಪ್ಕೆಗಳ್ ಕರಗುವವೊಲ್ |
ಶರದಂಬುಧರಂ ಭೋಂಕನೆ
ಕರಗಿದೊಡೆರ್ದೆ ಕರಗಿ ಕೊರಗಿದಂ ಧರಣೀಶಂ ‖ ೬೨

ವ॥ ಆಗಳ್,

ಘನದ ಕರಗಿದುದನಱಿದಪೆ
ಘನದ ವಿಳಾಸಮನದೆಂತು ನಂಬುವುದೊ ಘನಾ |
ಘನದಿಂದಮಱಿಯಲಾದುದು
ಘನಾಘನಂ ಜವನ ದಾಟಿಗಿಲ್ಲೆಂಬಿನಿತಂ ‖ ೬೩

ಅನ್ನೋಡೆ ನೋಡೆ ನೋಡೆ ಮ
ನನ್ನೋಡುವವೊಲ್ ಶರದ್ಘನಂ ಕರಗಿದುದೆಂ |
ತೆನ್ನನೆನಗೆಂಬೆನೆಂದೊಡ
ಮೆನ್ನಳಿಪಿಂಗೆನ್ನ ತನುವೊಡಂಬಟ್ಟಪುದೇ ‖ ೬೪

ಮಹಾಪೂತಜಿನಾಲಯಮೇ ನಿರತಿಶಯಭಕ್ತಿಪುರಸ್ಸರಪೂಜಾವಿಚಿತ್ರವಿರಚ
ನಾದಿಸಂಪದಾಸ್ಪದಮಾಗೆಯುಂ ಪಾತ್ರದಾನವಿಧಾನಮೆ ವಿನೋದಮಾಗೆ
ಯುಂ ಇಂತು ನಿತ್ಯೋತ್ಸವಂಗಳ್ ಕೆಲವುಕಾಲಂ ಸಲೆ ಸಲ್ಗೆವೆರಸಿದ ತನ್ನ
ನಣ್ಪನೊಟ್ಟಜೆಯುಂ ತೋಱೆ ವಜ್ರಬಾಹುಮಹೀಪತಿಯುಂ ಕರೆದುಮಮಿ
ತತೇಜಂಗೆ ಭವದೀಯಾತ್ಮಜೆಯಂ,

ಕುಡು ಕುಡದಂದುಮೆನ್ನ ತನಯಂ ಭವದಾತ್ಮಜೆಗೀಶನೆಂದು ಬೆ
ಳ್ಗೊಡೆಯೊಡೆಯಾತನರ್ಥಿವಡೆ ಕೊಳ್ಕೊಡೆಗಾಗಳೆ ವಜ್ರಬಾಹು ದಾಂ।
ಗುಡಿವಿಡೆ ರಾಗಮುರ್ಬಿಯೊಳೆ ನಾಂದರಿಯುಂ ಕುಡೆ ಬಂಧುಗಳ್ ಮನಂ
ಬಡೆ ಕಡುರಯ್ಯಮಾಯ್ತು ಮಿತತೇಜನೊಳಂದು ವಿವಾಹಮಂಗಳಂ ॥ ೫೩

ವ॥ ಆವಿವಾಹಕಲ್ಯಾಣಾನಂತರಂ ನಿಜತನೂಜೆಯುನಳಿಯನೊಡನೆ ಕಳು
ಪುವುದ್ಯೋಗಮನೆತ್ತಿಕೊಂಡು,

ಎನಗೀಷಟ್ಖಂಡಭೂಮಂಡಳಪತಿಯೆನಿಸಲ್ನಾಲ್ಗುಮುದ್ಯದ್ಯಶೋಲಾಂ
ಛನಮಾಶ್ವೇತಾತಪತ್ರಂ ಕಳೆದುಱಿದುವುವಂ ತನ್ನಿಮಿನ್ನೆಂದು ಮಾರಾಂ।
ಗನೆಯರ್ ಜಾತ್ಯಶ್ವವೃಂದಂ ಸಮದಕರಿಕುಳಂ ತಾರಹಾರಂಗಳೆಂದಿಂ
ತಿನಿತಾನುಂ ವಸ್ತುಮಂ ತಾಂ ತರಿಸಿದನಧಿಕಪ್ರೀತಿಯಿಂ ವಜ್ರದಂತಂ ॥ ೫೪

ವ॥ ಅಂತು ತರಿಸಿ ಮತ್ತಮಾತ್ಮೀಯಸ್ಥಪತಿರತ್ನವಿರಚಿತಮಣಿಕನಕಖ
ಚಿತಶಿಬಿಕಾಂದೋಳಾದಿಯಾನಂಗಳುಮಂ ಕನಕಯೋಗಾಳಂಕೃತಂಗಳಾಗಿ
ಸೊಗಯಿಸುವ ಕರಿಯ ಪಿರಿಯುಮೆಯ್ಯ ನಿಡಿಯಕಿವಿಯ ಕುಱಿದು ಮೆಟ್ಟ
ವಜ್ಜರಿಗತ್ತಗಳುಮಂ ವ್ಯೂಹದೊಳ್ ನಿಟ್ಟುವಟ್ಟು ಮಣಿಮಯಮಂಡನಾ
ಯೋಗದೊಳೊಡಂಬಟ್ಟ ಪಿಡಿಗಳುಮಂ ಮುಳಿವ ತಿಳಿವ ಗಂಡರ ಪೆಂಡಿರ
ನುಡಿಗಳನೆ ಬಣ್ಣಿಸುವ ಪುರುಳಿಗಳುಮಂ ಅಕಾಂಡತಾಂಡವಾರಂಭಶೌಂಡಶಿ
ಖಂಡಿಮಂಡಳಮುಮಂ ಲೀಲಾಲಸಗಮನಮಂ ಗಜಗಮನೆಯರ್ಗುಪದೇಶಂ
ಗೆಯ್ವ ದೀವದ ರಾಜಹಂಸೆಗಳುಮಂ ಕುಬ್ಜವಾಮನಬಧಿರಮೂಕಕಿರಾ
ತೋನ್ಮತ್ತಜಡಜನಂಗಳುಮಂ ಗಾಯಕವಾದಕನರ್ತಕಕಥಕಪ್ರಣ್ಯಪಾಠ
ಕವೈತಾಳಿಕನಿಕರಮುಮಂ ಕೊಟ್ಟು ಪಂಡಿತೆಯುಮನೊಡವ್ರೋಪೆಂತು
ಮಾಡಿ ರಾಜಾಧಿರಾಜನಳಿಯನ ಮೊಗಮಂ ನೋಡಿ,

ದಿನಪಾಸ್ತಸಮಯದೊಳ್ ಮು
ನ್ನಿನ ದಿವಸಂ ತತ್ಪಯೋಜದೊಳ್ ಮಡಿದಳಿ ತೊ ।
ಟ್ಟನೆ ಬೀಪೆ ತೂಗಿ ತಲೆಯಂ
ಜನನಾಥಂ ವಿಸ್ಮಯಸ್ಮಿತಂಬೆರಸಿನಿಸುಂ ॥ ೨೧

ಈಮಮಪಂ ದಳಿತಾಂಭೋ
ಜಾಮೋದಾಸಕ್ತನಕ್ಕಟಾ ಮಡಿದುದು ಪೇಃ ।
ಲೀಮನುಜರಖಿಳಕರಣ
ಗ್ರಾಮಮನೊಂದೊಡಲೊಳೆಂತೊಡಂಬಡಿಸಿದರೋ ॥ ೨೨

ಬಂದೊಂದೆ ರಸದ ಸೋಲಮ
ದೊಂದೊಂದನೆ ಕೊಲ್ಗುಮೋಪ್ರೊ ಲಂಪಳರಪ್ಪೆ ।
ಮ್ಮಂದಿಗರಂ ಬಗೆವಂದದೆ
ಕೊಂದಿಕ್ಕವೆ ಸಕಳವಿಷಯವಿಷಮವಿಷಂಗಳ್ । ೨೩

ಪಾಕದೊಳತಿವಿಷಮಂ ಕಿಂ
ಪಾಕಫಳಪ್ರತಿಮಮಖಿಳವಿಷಯಸುಖಂ ಪೇಃ ।
ಪೇಕಳಿಪಿ[1] ಸುಟಿವೆನಱಿಯು
ತ್ತೇಕೆ ವಿಮೋಹಿಸುವೆನೇಕೆ ಬರ್ದುಕುವೆನಿದಱೊಳ್ ॥ ೨೪

ತೃಣಶಿಖರಾಧ್ಯುಷಿತಾಂಭಃ
ಕಣಸಂಚಳಮಮರಚಾಪಚಪಳಂ ವಿದ್ಯುತ್ ।
ಕ್ಷಣಿಕಂ ನಿಟ್ಟಿಯೆ ತನುಭೃ
ದ್ಗಣಯೌವನರೂಪವಿಭವಭೋಗಾಭೋಗಂ ॥ ೨೫

ತೆಱಪನೆ ಪಾರ್ದಿರ್ಪಂ ಮಾ
ಯ್ದಱುಗುಲಿ ಜವನದಱನಿನಿಸು ಪ್ರೊಱ್ತುಂ ತನ್ನಂ ।
ಮಱೆದಿರಲಕ್ಕುಮೆ ತಳರದೆ
ತಱಸಲದಿನ್ನೆಱೆದುಮಱೆದುಮಿರ್ಪುದೆ ಚದುರಂ ॥ ೨೬

---

1ಕ.— ವಿಷಯಾಂಗಳಿನಿಂ । ತೇಕಳಿಪಿ.

ಕಿಱುರಿಯುಂ ಪುತ್ತ್ರಂ ಧನದಂ
ಬಱುರಿಯುಂ ತೊಱೆದಂ ಗೃಹಸ್ಥನೆನ್ನದೆ ಮುಂಬಿ।
ಟ್ಟುಬಸಿ ಕೊಲುತಿರ್ಪ ಜವನೆಂ
ಬಱುಕೆಯು ಪಗೆವಂಗದೆಂತು ಪಂಗಿಗನಪ್ಪೆಂ ॥ ೭೭

ನಿಧಿ ರತ್ನವ್ರಾತಮಂತಃಪುರಮೆಸೆವ ಷಡಂಗಂ ಬಲಂ ಹೈಮ[1]ಶೈಲಾ
ವಧಿಷಟ್ಖಂಡಂ ಮಹೀಮಂಡಳಮನಿಧನಮಲ್ತೆಮ್ಮನೀಡಾಡಿ ಸಲ್ಗುಂ।
ನಿಧನಕ್ಕಂತಪ್ಪುವಂ ಮುಂ ಬಿಸುಡುವುದೆ ಚದುರ್ ನೆಟ್ಟನೆಂದಲ್ತೆ ಮುಂಪೋ
ದಧರಾಧೀಶರ್ ತಪೋಮಾರ್ಗದೊಳೆಸಗಿದರಾಮಾರ್ಗಮಿನ್ನೆಮ್ಮ ಮಾರ್ಗಂ॥

ವ॥ ಎಂದು ನಿರ್ವಾಣಸಾಮ್ರಾಜ್ಯಮನೆ ಬಯಸಿ ಸಕಳಸಾಮ್ರಾಜ್ಯಮಂ ರಾಜಾಧಿರಾಜಂ ನಿಜಾಗ್ರತನೂಜಂಗಮಿತತೇಜಂಗೆ ಕೊಟ್ಟಾಗಳಾತನಿಂತೆಂದಂ—

ಇನಿತಂ ನಿಮ್ಮ ಮನಕ್ಕೆ ಕೊಕ್ಕರಿಕೆಯಂ ಮಾಡಿರ್ದ ಸಾಮ್ರಾಜ್ಯಮೆಂ
ತೆನಗೊಳ್ಪಂ ಪಡೆದಪ್ಪುದಿಂತೆನಗಿದಾಚಂದ್ರಾರ್ಕಮೋ ದೇವ ನೀ।
ಮೆನಗೀಗಳ್ ದಯೆಗೆಯ್ವುಡಿಂತು ಬೆಸಸಲ್ ಸಾಲ್ಕಿಂದೆ ಪೋಪೆಂ ತಪೋ
ವನಕೆನ್ನಟ್ಟೆಯೆ[2] ಪೊರ್ದದಿರ್ಕೆ ಭವದಾಜ್ಞಾಲಂಘನಂ ಭೂಪತೀ॥ ೭೯

ವ॥ ಎಂಬುದುಂ ವಜ್ರದಂತಚಕ್ರವರ್ತಿ,

ನೀನೆಮ್ಮಂ ಮೀಱದೆ ರಾ
ಜ್ಯಾನುಷ್ಠಾನಮನೊಡಂಬಡೀಗಳ್ ನಿಜಸಂ।
ತಾನಕ್ಕೆ ಮುಗಂಬಡೆಯೆ[3] ತ
ಪೋನಿಯಮಂ ಮಗನೆ ಕಡೆಯೊಳಿರ್ದಪುದಲ್ತೇ॥ ೮೦

ವ॥ ಎಂದಾಗಳಮಿತತೇಜಂ ದಂತಾಂಶುಧೌತಕಪೋಳಫಳಕನಾಗಿ,

ಪಿರಿದೊಂದಾಗ್ರಹದಿಂದಮಾದ ದಯೆಯಿಂದಂ ದೇವರೆನ್ನಂ ಧರಾ
ಭರದೊಳ್‌ತಂದು ತೊಡರ್ಚಿ ಪೂಣ್ದು ತಲೆಗೋದಿ[4]ರ್ದಂ ಬಟಿಕ್ಕಂತುಮೀ।

---

[1]ಕ. ಖ.— ಹರ್ಮ್ಯ. [2]ಖ.—ವಸಕಂಮತ್ತೆಯೆ.
[3]ಕ.—ಬಳೆಯೆ. [4]ಖ.—ತಲೆಗಂಡಿರ್ದಂ.

ಧರಣೀಭಾರಮನಾಂ ಬಿಸುಪ್ಪೊಡದು ಚೀಃ ಲೋಕಕ್ಕೆ ಖಾತ್ಯಾಸಮೀ
ಕರಣಂ ಭೌತಿಕಮೋದಕವ್ಯತಿಕರಂ ತಾನೆಂಬುದಂ ಮಾಡಗೇ ॥ ೮೧

ವ॥ ಎಂಬುದುಮಾತನ ಪರಿಚ್ಛೇದಮನಱಿದು ತತ್ಸಹೋದರರ್ಸಾಸಿರ್ವರೋರೊರ್ವರುಮೊಲ್ಲದಿರ್ದೊಡಮಿತತೇಜಂಗಮನುಂದರಿಗಂ ಪುಟ್ಟಿದ ಪುಂಡರೀಕನೆಂಬ ಬಾಳಕನಂ ಸಂತಾನಪಾಲನಾರ್ಥಂ ನಿಱಿಸಿ ಷಷ್ಟಿ[1]ಸಹಸ್ರಾಂಗನಾಜನಮುಂ ವಿಂಶತಿಸಹಸ್ರಮಕುಟಬದ್ಧರುಂ ಸಹಸ್ರಪ್ರಮಿತನಿಜತನೂಜರುಂ ಪಂಡಿತೆಯೆಂಬ ಪೆಸರನಾಪ್ರಸ್ತಾವ[2]ದೊಳ್ ನನ್ನಿಮಾಡಿದ ಪಂಡಿತೆಯುಂ ಬೆರಸು ಯಶೋಧರಮುನೀಂದ್ರಪಾದಪದ್ಮೋಪಾಂತದೊಳ್ ವಜ್ರದಂತಮಹಾರಾಜಾದಿರಾಜಂ ದಿಗಂಬರಾಂಬರವಿಳಾಸದಿಂ ತ್ರಿಲೋಕಶಿಖರಿಶೇಖರನಾದಂ; ಲಕ್ಷ್ಮೀಮತೀಮಹಾದೇವಿಯುಮನುಂದರಿವೆರಸು ಚಕ್ರವಲ್ಲಭವ್ಯಪಾಯದೊಳ್[3] ಪುಂಡರೀಕನಂ ಕೈಕೊಂಡಿರೆ,

ತನುವಿಧುವೊಂದನುಳ್ಳ ನಭದೊಳ್ ಶಿಶುಕೇಸರಿಯೊಂದನುಳ್ಳ ಕಾ
ನನದೊಳದೊಂದು ಕುಟ್ಮಳಮನುಳ್ಳ ಸರೋವರದೊಳ್ ಪೊಣರ್ಚಿ ನೆ।
ಟ್ಟನೆ ದೊರೆಯಾದುದೀಕುಲಮುಮೀಶಿಶುವೊರ್ಬನಿನೆಂಬಿನಂ ಜಗ
ಜ್ಜನಮತಿಮುಗ್ಧಬಾಳನರಪಾಳಕಮಾದುದು ಚಕ್ರಭೃತ್ಕುಲಂ ॥ ೮೨

ವ॥ ಅಂತದಂ ಕಂಡು ಕಪ್ಪಮೀಯದೆ ಚಪ್ಪರಿಸುವ ಮಂಡಳಿಕರುಮಂ ಅಡಂಗದಾಟವಿಕರುಮಂ ಬತ್ತಿ[4]ಬರ್ಪ ಪಾರ್ಷ್ಣಿಗ್ರಾಹಕರುಮಂ ಅಱಿದು ಲಕ್ಷ್ಮೀಮತಿಮಹಾದೇವಿ ವಜ್ರಜಂಘಂಗೆ ಬೞಿಯನಟ್ಟುವ ಕಜ್ಜಮಂ ಮಂತ್ರಿವರ್ಗದೊಳಾಳೋಚಿಸಿ,

ವನಜಾನೀಕಮೆ ಪಳ್ಳವೋಪ ತೆಱದಿಂ ಕಿತ್ತರ್ದ ಭೂಪಂ ತಪೋ
ವನಮಂ ಪುತ್ರಕಳತ್ರಮಿತ್ರಸಹಿತಂ ಪೊಕ್ಕಂ ಕರಂ ಬಾಳನೊ ।
ರ್ಬನಿವಂ ರಾಜ್ಯದೊಳಿರ್ದನಾನಬಲೆಯೆಂ ಕಾದಿರ್ದನೇಮಾತೊ ತ ।
ನ್ನನೆ ನಚ್ಚಿರ್ದುದು ಕಾಗುಮೆಂಬ ಬಗೆಯಿಂದಿಂತೀಮಹೀಮಂಡಲಂ ॥ ೮೩

---

1ಕ —ಅಷ್ಟ. 2ಕ.—ಪದ.
3ಕ.—ವಿಯೋಗ. 4ಕ.—ಎತ್ತಿ.

ಜಳಧಿತರಂಗತಾಟಿತಧರಾತಳಭೂರವಿದೆತ್ತ ಬಾಳನೆ
ತ್ತಳವಿನಿತುಂಟೆ ತಾಳ್ದಲಿದನೊಟ್ಟಜೆಯಿಂ ಕೊಳಲೆಂದು ವೈರಿಗಳ್ ।
ತಳರ್ದಪರೆಂತು ತನ್ನ ಬಲವಿಲ್ಲದೆ ತಾಳ್ದುವೆನೊಪ್ಪುಗೊಳ್ಗೆ ತ
ನ್ನಳಿಯನನೆಯ್ದೆ ಪಾಲಿಸುಗೆ ಬಂದಿದನೀಗಳನಾಥಯೂಥವಂ ॥ ೯೪

ವ॥ ಎಂದು ಬರೆದು ರತ್ನಕರಂಡಕದೊಳಟ್ಟು ಮುಚ್ಚಿ ಮುದ್ರಿಸಿದೋ ಲೆಯುಮನಪೂರ್ವೋಪಾಯನಮುಮಂ ಪರಿಣತಾಶೇಷಶಾಸ್ತ್ರಾರ್ಥರುಮು ನ್ನತಾನ್ವಯರುಂ ಗಂಧರ್ವಪುರಾಧಿನಾಯಕರುಮಪ್ಪ ಚಿಂತಾಗತಿ[1]ಯುಂ ಮನೋಗತಿಯುಮೆಂಬ ವಿದ್ಯಾಧರರ ಕಯ್ಯೊಳ್ಕೊಟ್ಟೆಮ್ಮಳಿಯನಂ ತಡೆಯು ದೆ ಮುಂದಿಟ್ಟೊಡಗೊಂಡು ಬನ್ನಿಮೆಂದಟ್ಟಿದೊಡಾಗಳಾಗಗನಚರರ್ ವಿಮಾ ನಾರೂಢರತಿತ್ವರಿತಗಮನದಿಂ ಪೋಗೆ ಪೋಗೆ,

ಗಾಳಿಯನೆಡೆಗಲಿಸಿದುದು[2] ವಿ
ನೀಳಘನಾಘನಮನಳಱಿ ಪಱಿದದು ಮುಕ್ತಾ ।
ಜಾಳಪರಿಲಂಬಿಲೋಲದು
ಕೂಳಪತಾಕಾವಿರಾಜಮಾನವಿಮಾನಂ ॥ ೯೫

ಪಾಱುವ ವಿಮಾನದೊಂದ
ಕ್ಕೇಱಿಂ ಪಱಿದುಗುವ ಮುಗಿಲ ನೀರ್ಗಳ ಪಲವುಂ ।
ಬೀಱುಗಳೊಳಳಸಿ ಖಚರರ
ನಾಱಿಸಿದುದು ಗಗನದೊಳ್ ವಿಯತ್ತಳಪವನಂ ॥ ೯೬

ವ॥ ಅಂತು ಬಂದುತ್ಪಳಖೇಟಮನೆಯ್ದಿ ವಜ್ರಜಂಘನುಮಂ ಶ್ರೀಮತಿ ಯುಮಂ ಕಂಡು ದೂರಾವನತಮಸ್ತಕರಾಗಿ[3]ತಮ್ಮ ತಂದುಪಾಯನಂ[4]ಬೆರ ಸು ರತ್ನಕರಂಡಕಮಂ ಮುಂದಿಟ್ಟಾಗಳದಱ ಮುದ್ರಿಕೆಯ ನೊಡೆದಂತಸ್ಸ್ಥಿತ ಕಾರ್ಯಪತ್ರಮಂ ಬಾಜಿಸಿ ನೋಡಿ, ವಿಸ್ಮಯಾಕ್ರಾಂತಚಿತ್ತನಾಗಿ,

ಅಱಿಪದೆ ಪದಗಳಿಪದೆ ಪೊಂ
ಪುಱಿಪೋಗೆ ಯಶಃಪ್ರಕಾಶಮಿಾಗಳೆ ಧರೆಯಂ[5] ।

---

[1] ಕ.—ಚಿತ್ರಗತಿ. [2] ಕ.—ಗಲಿಸಿದುದೆನೆ. [3] ಖ.— ದೂರೋತ್ಸಾರಿತಪ್ರಣತರಾಗಿ.
[4] ಗ.—ತಂದಪಾವುಡಂ. [5] ಕ —ಪ್ರಕಾಶಮಿಾಭುವನದೊಳೇಂ.

ಪಱಿಕೆಯುದ್ದ ತೊೞ್ತುನುೞಿವಂ
ತುೞಿವಂ ಸಾಮ್ರಾಜ್ಯಲಕ್ಷ್ಮಿಯುಂ ಚಕ್ರಧರಂ ॥ ೮೭

ತಂದೆ ಕುಡೆ ರಾಜ್ಯಮಂ ತೃಣ
ದಿಂದಂ ಲಘುವಾಗೆ ಬಗೆದು ಬಗೆದರ್ ತಾಮುಂ ।
ತಂದೆಯು ಬಗೆವುದನೆಂದೊಡ
ಗುಂದಲೆ ಪೊಗೞಲ್ಕೆ ಚಕ್ರಿನಂದನರಳವಂ ॥ ೮೮

ವ॥ ಎಂದು ನಿಜಸಭಾಜನಕ್ಕೆಲ್ಲಂ ಪೊಗೞ್ದು ತದ್ವಾರ್ತಾಕರ್ಣನೋದೀರ್ಣಶೋಕವ್ಯಾಕುಳೆಯಾಗಿರ್ದ ನಿಜವಲ್ಲಭೆಯಲ್ಲಿಗೆ ಬಂದು,

ಗುರುಶೋಕಾವೇಗಮಾದಂ ಗುರುವೆನಗಮದೇಕೆನ್ನದುಂ ನಮ್ಮ ಜನ್ಮಾಂ
ತರದಿಂದಂ ಬಂದ ಮೋಹಂ ಬಿಡದಲೆವುದಱಿಂದಾದೊಡಂ ಧೈರ್ಯದಿಂ ಸಂ।
ಸರಣಾಂಭೋರಾಶಿಯಂ ದಾಂಟುವ ಬಗೆಯುನೆ ಕೈಕೊಂಡನೆಂದಂದೆ ಮಾವಂ
ಚರಿತಾರ್ಥಂ ನೀನಣಂ ಚಿಂತಿಸದಿರು ನಮಗಿನ್ನೆಂತೆ ಶೋಕಾವಕಾಶಂ

ವ॥ ಎಂದು ಆಶೋಕಾವೇಗಮನಾಱಿಸಿ, ಬಂದ ವಿದ್ಯಾಧರರಂ ಯಥೋಚಿತಪ್ರತಿಪತ್ತಿಗಳಿಂ ಸಂತೋಷಂಬಡಿಸಿ[1] ನಿಜಪ್ರಿಯಪ್ರಧಾನಮಂತ್ರಿಮತಿವರನೊಳಂ ಸೇನಾಯಕನಕಂಪನೊಳಂ ಪುರೋಹಿತನಾನಂದನೊಳಂ ಪ್ರಧಾನಶ್ರೇಷ್ಠಿ ಧನಮಿತ್ರನೊಳಮಾಳೋಚಿಸಿ,

॥ ಹ ರಿ ಣಿ ॥

ನೆಣಸುವಹಿತರ್ ಮೇಲೇೞ್ವುದ್ಯೋಗಮಂ ಬಗೆದಿರ್ದರೆ
ನ್ನಣುಗಿನಳಿಯಂಗೆನ್ನಿಂ ಮೇಗಿಲ್ಲ ಕೂರ್ಪವರಿಂತಿದೇಂ ।
ಗಣಿದದೆಡೆಯೋ ಪೋಪೆಂ ಪೋಗೆಂದು ಮಾಣದೆ ಪುಂಡರೀ
ಕಿಣಿಗೆ ಪಯಣಂಬೋಗಲ್ ನಿಶ್ಚೈಸಿದಂ ಧರಣೀಶ್ವರಂ ॥ ೯೦

ವ॥ ಅಂತತಿತ್ವರಿತಗಮನನಿಶ್ಚಿತಮನನಾಗಿ ಬಲಾಧ್ಯಕ್ಷನಂ ಬರಿಸಿ,
ಮನಮೊಳ್ಳುನ್ಮದಗಂಧಸಿಂಧುರಚಯಂ ಚಂಡಾಜಿವಿಕ್ರಾಂತಮ
ತ್ಯನಿಳಾಕ್ರಾಂತಹಯೌಘಮೂರ್ಜಿತಜಯಪ್ರಖ್ಯಾತಜಂಘಾಳಪ ।

---

[1] ಗ.—ಪ್ರತಿಪತ್ತಿಯಿಂ ಮನ್ನಿಸಿ. [2] ಕ.—ಚಂಡಾಂಶುವಿಕ್ರಾಂತಮತ್ತ.

ತ್ತಿನಿಕಾಯಂ ಕದನೈಕದುರ್ಜಯಮದಸ್ಕಂಧಪ್ರಯಾಣಕ್ಷಮಾ
ವನಿಪಾಳವ್ರಜಮೀಗಳೆಮ್ಮೊಡನೆ ಬರ್ಕೆಂದಂ ರಣಾನಂದದಿಂ ॥ ೯೧

ವ॥ ಅಂತು ಬೆಸಸಿದಂದದೊಳೆ ಬಂದು ಮುಂದೆ ನಿಂದ ಚತುರಂಗಬಲಂ ಬೆರಸಬಳಾಬಾಳವೃದ್ಧವೃದ್ಧೋಕ್ಷಶಕಟಸಂಕಟಮಪ್ಪ ಕಟಕಮುಂ ಮೆಲ್ಲಮೆಲ್ಲನೊಡಗೊಂಡು ಬರ್ಪಂತು ಕೂರ್ಬಾಳತುಂದಿಳ[1]ಜರತ್ಸಾಮಂತಸಂದೋಹಕ್ಕಪ್ಪಯಿಸಿ ಶುಭದಿನಮುಹೂರ್ತದೊಳ್ ಪ್ರಯಾಣಭೇರಿಯಂ ಪೊಯಿಸಿ, ಪೊಱಮಟ್ಟಾಗಳ್,

ಕೊಡೆ ತಟೆ ತಳ್ತ ಸೀಗುರಿ ಕರೀಂದ್ರಘಟಾಳಿ ತುರಂಗಸೈನ್ಯಮು
ಕ್ಕಡುಗದೆ ಬರ್ಪ ನಾಯಕಬಲಂ ರಥಸಂತತಿ ಖಡ್ಗಿವೃಂದಮೋ।
ಗಡಿಸದ ಗಾಡಿಕಾರ್ತಿಯರ ಬರ್ಪ ನಿಯೋಗಿಗಳಾದ ಚೆಲ್ವನಾ
ವೆಡೆಯೊಳಮಾಯೆ ಕಣ್ಗೊಸಗೆಯುಂ ಪಡೆದತ್ತು[2]ಸಮಸ್ತಸಾಧನಂ ॥ ೯೨

ವ॥ ಅಂತು ಪುಂಡರೀಕಿಣಿಗಭಿಮುಖನಾಗಿ ಪಯಣಂಬಂದು ಸರ್ಪಸರೋವರಮೆಂಬ ಕೊಳನಂ ಬಳಸಿದ ಮಾಧವೀಲತೆಯ ಮಂಟಪಂಗಳೊಳಂ ಚೂತಲತೆಯ ಬಳ್ಳಿಗಾವಣಂಗಳೊಳಂ ಅಶೋಕಲತೆಯ ವಿಳಾಸಗೃಹಂಗಳೊಳಂ ನವಮಾಲಿಕಾಲತೆಯಿಱುಂಬುಗಳೊಳಂ[3] ತಮಾಳಲತೆಯ ಕೊಂಚೆಯಂಗಳೊಳಂ[4] ತಾಂಬೂಲಲತೆಯಳಂಕಾರಭವನಂಗಳೊಳಂ ಎಳಲತೆಯ ಗಣಿಕಾವಾಸಂಗಳೊಳಮಿಂಬಱಿದು ಬೀಡಂ ಬಿಡಿಸಿದಾಗಳ್,

ಇದು ಗಹನಾಂತರಾಳಮಿದಱೊಳ್ ನೆಲಸಿರ್ದ ಮದೀಯತೋಯದಿಂ
ದೊದವಿದ ನೀರಜಾವಳಿಯ ಚೆಲ್ವು ನಿರರ್ಥಕಮಾಗದಿಂದು ಪೊ।
ರ್ದಿದ ಜನದಿಂ ಕರಂ ಸಫಲಮಾದುದು ಪೆಂಪಿನಗಾದುದೆಂದು ರಾ
ಗದಿನುಲಿವಂತುಟಾಯ್ತು ಕಳಹಂಸನಿನಾದದಿನಾಸರೋವರಂ ॥ ೯೩

ಆಗಳೆ ಮಾಟ್ಪ ಪುಷ್ಪರಚನಾಳಿಗೆ[5] ಜೈನಗೃಹಕ್ಕೆ ಕಾಂತಕಾಂ
ತಾಗಣಕರ್ಣಪೂರಕುಸುಮಾಭರಣಾಳಿಗೆ ಯೋಗ್ಯಮಾಗಿ ಮೇ।

---

1ಕ.—ಕೂರ್ಬಾಳರುಂ ದೀಕ್ಷಾಳ. 2ಖ.—ಕಣ್ಗೆ ಪಸರಂಬಡೆದತ್ತು. 3ಗ.—ಲತೆಯ. ಱೊಂಜೆಗಳೊಳಂ; ಕ.—ಲತೆಯಕುಂಜಗಂಳೊಳಂ. 4ಖ.—ಗೊಂಚಲ್ಗಳೊಳಂ. 5ಕ—ಚಿತ್ರರಚನಾಳಿಗೆ.

ಲಾಗಿ ತೆರಳ್ದು ಪೊಕ್ಕು ಪೊಱಮಟ್ಟು ಮದೇಭಗಣಕ್ಕೆ ಮಂಡನಾ
ಯೋಗಮುಮಾದುವಾಕೊಳದ ಕೋಮಳ ನೀರಜಪುಷ್ಪಜಾತಿಗಳ್‌॥ ೯೪

ಚಳಕಳಹಂಸಸಾರಸರಥಾಂಗಮದಾಳಿನಿನಾದಕೈರವೋ
ತ್ಪಳಶತಪತ್ರಮಂದಮಕರಂದರಸೋತ್ಕಟಗಂಧಬಂಧುರಂ ।
ಲಳಿತನ್ಯಪಾಂಗನಾಳಕಚಯಂಗಳನಾಡಿಪುದಾಯ್ತು ಸಂತತೋ
ಚ್ಛಳಿತತರಂಗಶೀಕರತುಷಾರಜಳಂ ಸರಸೀಸಮೀರಣಂ ॥ ೯೫

ವ॥ ಅಂತಾಮಂಡಳೇಶ್ವರನಾಸರೋಜಷಂಡದೊಳ್ ಬೀಡಂಬಿಟ್ಟಿರ್ಪನ್ನೆಗಂ ಸ್ವರ್ಗಾಪವರ್ಗಮಾರ್ಗದಂತಪಗತಕಲ್ಮಷರುಂ, ಅಂಬರದಂತೆ ಸನ್ಮಾರ್ಗರುಂ, ಅಂಭೋಧಿಯಂತೆ ಗಂಭೀರಾಶಯರುಂ, ಆದಿತ್ಯನಂತೆ ನಿರ್ಧೂತತಮಸ್ತಮರುಂ, ಚಂದ್ರನಂತೆ ಸರ್ವಸತ್ತ್ವಸೌಮ್ಯರುಂ, ಅನಿಲನಂತೆ ನಿಸ್ಸಂಗರುಂ, ಚಿಂತಾಮಣಿಯಂತೆ ಭವ್ಯಜನಮನೋಭಿಲಷಿತಫಲಪ್ರದರುಂ, ಮೇರುವಿನಂತಚಳಿತಧೈರ್ಯಗುಣರುಮಪ್ಪ ಧರ್ಮವರಸಾಗರಸೇನರೆಂಬ ಗಗನಚಾರಣರ್ ಕಾಂತಾರಚರ್ಯಾಮಾರ್ಗದೊಳ್ ತಮ್ಮ ವಾಸಕ್ಕೆ ಬರ್ಪರಂ ಶ್ರೀಮತಿಯುಂ ತಾನುಂ ಕಂಡು ಸಸಂಭ್ರಮಂಬೆರಸಿದಿರಂ ನಡೆದು ಬದ್ಧಾಂಜಳಿಪುಟಘಟಿತನಿಟಿಲರಾಗಿ ನಿಲ್ಕೆಂದು ನಿಲಿಸಿ,

ಇದಿರ್ಗೊಳ್ವುದು ಕಾಲ್ಗರ್ಚುವು
ದುದಾತ್ತಮಪ್ಪೆಡೆಯೊಳಿರಿಪುದರ್ಚಿಪುದೆಱಗಿ ।
ಪುದು ಕರಣಶುದ್ಧಿವಡೆವುದು
ಪದೆದನ್ನಮನೀವುದೆಂಬ ನವವಿಧಪುಣ್ಯಂ ॥ ೯೬

ವ॥ ತಮಗೆ ದೊರೆಕೊಳೆ,

ನೆಱೆದಱ್ತಿ ಭಕ್ತಿ ದಯೆ ಪುದಿ
ದಱಿವೌದಾರ್ಯಂ ಕ್ಷಮಾಗುಣಂ ಶಕ್ತಿಯುಮೆಂ ।
ಬಱಿಕೆಯಗುಣಮೇೞಱೊಳಂ
ನೆಱೆದಿರ್ದರ್ ಮುನಿಯುಗಕ್ಕೆ ದಾನಮನವರ್ಗಳ್ ॥ ೯೭

ಸುರತೂರ್ಯಧ್ವಾನಮೆಯ್ತಂದೆಸಲರ ಸರಿ ಪೊದಳ್ದಿರ್ದ ರೈಧಾರೆ ದೇವೇಂ
ದ್ರರ ಘೋಷಾನ ಪ್ರಸಿದ್ಧಧ್ವನಿ ಸುರಭಿಸಮೀರಪ್ರಚಾರಂ ಜಗಕ್ಕೆ ।

ಚ್ಚರಿ ಪಂಚಾಶ್ಚರ್ಯಮೊತ್ತಂ ನೆಗಪೆ ಶಿಬಿರದೊಳ್ ವಿಸ್ಮಯಾಕ್ರಾಂತನಿರ್ದಂ
ಪಿರಿದೊಂದಾನಂದದಿಂದಂ ಸುಕವಿಜನಮನೋಮಾನಸೋತ್ತಂಸಹಂಸಂ ॥

ವ॥ ಅಂತು ಬೀಡಿಂಗಮಾಶ್ಚರ್ಯಂ ನೆಗಪೆ,

ಕ್ಷಿತಿಚಕ್ರಾರ್ಚಿತ[1]ಚಕ್ರವರ್ತಿಪದಮುಂ ದೇವೇಂದ್ರರಾಜ್ಯೋದಯೋ
ನ್ನತಿಯುಂ ಭವ್ಯಜನಂಗಳಾಶೆವಡುತಿರ್ಪಾರ್ಹಂತ್ಯಮುಂ ಸಾರ್ಗಮು ।
ನ್ನಿತದಾನಂಗರಿದುಂಟೆ ಸೌಖ್ಯಮೆನುತುಂ ದಾನಪ್ರಭಾವಕ್ಕೆ ಸಂ
ಚಿತಪುಣ್ಯೋದಯನಾಗಳಾದಮೊಸೆದಂ ಸಂಸಾರಸಾರೋದಯಂ ॥೯೯

ಗ॥ ಇದುದೇವೇಂದ್ರಮುನೀಂದ್ರವಂದ್ಯಪರಮಜಿನೇಂದ್ರಮುಖ
ಚಂದ್ರವಾಕ್ಚಂದ್ರಿಕಾಪ್ರಸರಪ್ರಸಾದೋದೀರ್ಣಸೂಕ್ತಿ
ಕಲ್ಲೋಲಮಾಲಾಕೀರ್ಣಕವಿತಾಗುಣಾರ್ಣವ
ಪ್ರಣೀತಮಪ್ಪಾದಿಪುರಾಣದೊಳ್
ಚಾರಣಯುಗಳದಾನೋತ್ಸವವರ್ಣನಂ
ಚತುರ್ಥಾಶ್ವಾಸಂ
ಸಂಪೂರ್ಣಂ.

---

[1] ಖ.—ಚಕ್ರೋಚಿತ.

## ಪಂಚಮಾಶ್ವಾಸಂ.

ಶ್ರೀಮತಿವರಸಾಗಳತಿ
ಪ್ರೇಮದೆ ಮುನಿಯುಗಳನಿಕಟಮಂ ಸಾರ್ದನಿತೇ ।
ಕೀವೋಹಮಿವರೊಳೆನೆಗಂ
ದಾಮಹಿಮಹಿತಂ ಸರಸ್ವತೀಮಣಿಹಾರಂ ೧

ವ॥ ಬೆಸಗೊಂಡಾಗಳ್ ವೃದ್ಧಕಂಚುಕಿ,

ಇನಿತುವರಂ ವ್ಯಾಮೋಹಂ
ನಿನಗೇಕಾದಪುದು ಒಗೆದು ಭಾವಿಸಿ ನೋಡೀ ।
ಮುನಿಯರ್ ನಾಲ್ವತ್ತೊಂಭ
ತ್ತನೆಯುಮಳ್ಗಳ್ ನಿನ್ನ ತನಯರಲ್ಲರೆ ನೃಪತೀ ॥ ೨

ವ॥ ಎಂಬುದುಮರಸನಱಿದುಸಿರದಿರಿಮೆಂದು ತನ್ಮುನಿಗಳ ಪಾದಪ್ರಕ್ಷಾಳನೋದಕದೊಳ್ ಪೊರಳ್ದು ಪುಷ್ಪವರ್ಷದ ಪೂಗಳೊಳ್ ಪುದಿದು ದಾನಾನುಮೋದಪ್ರಭಾವದಿಂದುಪಶಮಭಾವಮಂ ತಾಳ್ದಿ ಮುನಿಪತಿಯ ಮುಖಾರವಿಂದಮಂ ನೋಡುತಿರ್ದ ಶಾರ್ದೂಲವರಾಹಗೋಲಾಂಗೂಲನಕುಳಂಗಳಂ ನೋಡುತ್ತುಮವರ್ಕೆ ಭಕ್ಷ್ಯಧೂಪಂಗಳಂ ತರಿಸಿ ನೀಡುತ್ತುಮಿದಾರ್ತ್ಮೀಯಪರಮಪ್ರಸಾದಭೂಮಿಗಳಾಗಿರ್ದ ಮಂತ್ರಿಸೇನಾನಾಯಕಪುರೋಹಿತಶ್ರೇಷ್ಠಿಪದಸಿಯುಕ್ತರಪ್ಪ ಮತಿವರಾಕಂಪನಾನಂದಧನಮಿತ್ರರೆಂಬ ನಾಲ್ವರ ಭವಾವಳಿಯುಂ ಬೆಸಗೊಳೆ ದಮವರಮುನಿನಾಥನವಧಿಬೋಧದಿಂದನುಕ್ರಮಂದಪ್ಪದೆ,

ಕೆದಱಿದಪುದು ದೆಸೆದೆಸೆಗಮ್ಮೃ
ತದ ಪನಿಯನಿದೊಂದು ಮುನಿಪಮುಖಚಂದ್ರಮನೆಂ ।
ಬುದನೆನಿಸೆ ದಶನದೀಧಿತಿ
ಮೃದುಮಧುರಗಭೀರನಿನದದಿಂ ಮುನಿ ನುಡಿದಂ ॥ ೩

ವ॥ ಈಮತಿವರನೀಭವಕ್ಕಯ್ದನೆಯ ಭವದೊಳೀಜಂಬೂದ್ವೀಪದ ಪೂ

ರ್ವವಿದೇಹದ ವತ್ಸಕಾವತೀವಿಷಯದ ಪ್ರತಿಬದ್ಧಪ್ರಭಾಕರೀಪುರದೊಳ್ ಮತಿವೃದ್ಧನೆಂಬ[1]ರಸನಾಗಿ,

ವಿವಿಧಾರಂಭಪರಿಗ್ರಹಂ ವಿಷಯಸೌಖ್ಯಾಯತ್ತನತ್ಯಂತಲೋ
ಭವಿಷಗ್ರಸ್ತನುಪಾದ್ರಿಯೊಳ್ ದ್ರವಿಣವಂ ಬಯ್ತುದ್ಧತಂ ತನ್ನ ಸಿರ್ ।
ತವೆ ಪಂಕಪ್ರಭೆಯೊಳ್ ದಶಾಬ್ಧ್ಯುಪಮೆಯಿಂ ದುಃಖಾಗ್ನಿಯೊಳ್ ಬೆಂದು ಮ
ತ್ತವನಲ್ಲಿಂ ಪೊಱಮಟ್ಟು ಮುನ್ನ ಧನಮಂ ಬಯ್ತಿರ್ದ[2]ಗಾರಣ್ಯದೊಳ್ ॥ ೪

ಪುಲಿಯಾಗಿ ಪುಟ್ಟಿ ತನ್ಮಂ
ಡಲನಾಥಂ ಪ್ರೀತಿವರ್ಧನಂ ರಿಪುನೃಪರಂ ।
ಚಲದಲೆದು ಬಂದು ಜಾತು
ರ್ಬಲಯುತನಾನಗದ ಬಳಸಿ ಬೀಡಂ ಬಿಟ್ಟಂ ॥ ೫

ಬಿಡೆ ತಿರ್ದಿದ ಶಕುನದ ನೆಯ
ದಡಿವಿಡಿದು ಪುರೋಹಿತಂ ನೃಪಂಗೀನುಡಿಯಂ ।
ನುಡಿದಂ ಕನಕದ ಪೂಜೆಯು
ಪಡೆಪಾದಪುದಿಲ್ಲಿ ಮುನಿಯ ದಾನದಿನಧಿಪಾ ॥ ೬

ಈಗಳೆ ನಿನಗೆಂಬುದುಮನು
ರಾಗದಿನಾಪ್ರೀತಿವರ್ಧನಂ ಮುನಿವರರೆಂ ।
ತೀಗಿರಿಗೆ ಚರಿಗೆವರ್ಪರ
ನಾಗತಮತಿ ಬಗೆಯ ನೀನುಪಾಯಾಂತರಮಂ ॥ ೭

ಎನೆ ಪೊಱಲ ಬೀದಿವೀದಿಗ
ಳನಿತುಮನೋರಂತೆ ತಳಿದು ಗುಡಿಗಟ್ಟಿಸಿ ಸೀಂ ।
ನನೆಯ ಮುಗುಳಲರ ತುಱುಗಲ
ನನಂತಮಂ ನೆಱೆಯೆ ಕೆದಱವೇೞ್ ನೃಪತಿಳಕಾ ॥ ೮

---

[1] ಗ.—ಪ್ರಭಾವತೀಪುರದೊಳತಿವೃದ್ಧನೆಂಬ; ಖ.—ಪುರದೊಳುಮತಿಗೃದ್ಧನೆಂಬ.

[2] ಗ.—ಬಯ್ತಿತ್ತಗಳಾರಣ್ಯದೊಳ್.

ಎಂದೊಡೆ ನೃಪನಾತನ ಪೇ
ೞ್ದಿಂದದೊಳದನಂತೆ ಮಾಡವೇೞ್ಕೊಡೆ ಮುನಿಪಂ ।
ಸಂದ ಪಿಹಿತಾಸ್ರವಂ ಪುಗು
ತಂದಂ ನೋಂತೊಂದು ತಿಂಗಳಿಂಗಾಪುರವಂ ॥ ೯

ತಳಿಯೆ ಕೆಸಱಾದ ಧರೆ ಪೂ
ಗಳ ತುಱುಗಲೊಳಿಸೆಯೆ ಪೊೞಲಿದಪ್ರಾಸಕಮೆಂ ।
ದೊಳಪುಗದೆ ನಿಯಮದಿಂ ನಿ
ರ್ಮಳಚರಿತಂ ಚರಿಗೆವೊಕ್ಕನರಸನ ಬೀಡಂ ॥ ೧೦

ಪುಗೆ ನೃಪನಿದಿರಂ ಬಂದಾ
ವಗಮರ್ಥಿಯೊಳಱಿದು ನಿಱಿಸಿ ದಾನೋನ್ನತಿಯೊಳ್ ।
ಗಗನತಳದಿಂದಮೊರ್ಮೆಯೆ
ನೆಗೆದತ್ತಾಶ್ಚರ್ಯಮಾಗೆ ಪಂಚಾಶ್ಚರ್ಯಂ ॥ ೧೧

ವ॥ ಆಗಳಾಪರ್ವತದೊಳಿರ್ದ ಶಾರ್ದೂಲಂ ಜಾತಿಸ್ಮರನಾಗಿ ಪರಿತ್ಯಕ್ತಾಹಾರಶರೀರನಾಗಿ ಉಪಶಾಂತಸ್ವಾಂತನಿರ್ದುದೆಂಬುದಂ ತನ್ಮುನೀಂದ್ರರವಧಿಜ್ಞಾನದಿಂದಱಿದು ಆಪ್ರೀತಿವರ್ಧನನಂ ಪ್ರತಿಬೋಧಿಸುವ ಬಗೆಯೊಳಾಶಾರ್ದೂಲನ ಪೂರ್ವಭವವೃತ್ತಾಂತಮುಮಂ ಕಾಲಲಬ್ಧಿ ದೊರೆಕೊಳೆ ಶರೀರಪರಿತ್ಯಾಗಂಗೆಯ್ದಿರ್ದುದೆಂಬುದುಮನಱಿಪಿ ತದ್ಗಿರಿತಟದೊಳ್ ಮುನ್ನೆ ಪೂಳ್ದ ಸುವರ್ಣಪೂರ್ಣಕಟಾಹಂಗಳಂ ತೋಱಿದಾಗಳ್ ಚೋದ್ಯಂಬಟ್ಟು,

ಪಿರಿದುಂ ಪೂಜೆಯನರಸಂ
ಪರಿವಾರಂಬೆರಸು ಮಾಡೆ ಮುನಿಪತಿಯು ಪದಾಂ ।
ಬುರುಹದ ಮೊದಲೊಳ್ ನೋಂತುದು
ಭರದಿಂ ಪದಿನೆಂಟು ದಿವಸಮುಂ[1] ಶಾರ್ದೂಲಂ ॥ ೧೨

ವ॥ ಅಂತು ನೋಂತು,

---

1ಕ.—ಪನ್ನೊಂದುದಿವಸ.

ಸುಡುವುದರಾಗ್ನಿ ಯುಮೊಡಲಂ
ಮಿಡುಕುವಿನಂ ಕಡಿವ ಕಟ್ಟಿಱುಂಪೆಗಳುಮದಾ ॥
ಪೆಡೆಯುನುರಿಸುವುದೊ ನರಕದ
ಕಡುದುಃಖದೊಳಗಿದು ಸುಗಿದು ನಮೆದೆನಗೀಗಳ್ ॥ ೧೩

ವ॥ ಎಂದು ಧೈರ್ಯಮನೆ ಮನದೊಳವಲಂಬಿಸಿ ಸಮಾಧಿವಡೆದೀಶಾನಕಲ್ಪದೊಳ್ ದಿವಾಕರಪ್ರಭಮೆಂಬ ವಿಮಾನದೊಳ್ ದಿವಾಕರಪ್ರಭನೆಂಬದೇವನಾದಂ. ಆಪ್ರೀತಿವರ್ಧನನುಮಾಭಟ್ಟಾಕರರ್ ದಯೆಗೆಯ್ದ ದೀಕ್ಷೆಯೆಂಬ ಕಲ್ಪಲತೆಯ ಫಲದಿಂದಮೃತಪದವಿಯುಂ ಪಡೆದಂ. ಆತನ ಸೇನಾನಾಯಕಮಂತ್ರಿಪುಂಗವಪುರೋಹಿತರ್ ಮೂವರುಂ ನೃಪನ ದಾನಾನುಮೋದದ ಫಲದಿಂದಮುತ್ತರಕುರುವಿನೊಳಾರ್ಯರಾಗಿ ಜೀವಿತಾಂತ್ಯದೊಳೀಶಾನಕಲ್ಪದೊಳ್ ಸೇನಾನಾಯಕನಪ್ಪಾರ್ಯಂ ಪ್ರಭಾಕರವಿಮಾನದೊಳ್ ಪ್ರಭಾಕರನೆಂಬೊಂದೇವನಾದೊಂ; ಮಂತ್ರಿಯಪ್ಪಾರ್ಯಂ ಕಾಂಚನವಿಮಾನದೊಳ್ ಕನಕಪ್ರಭನೆಂಬ ದೇವನಾದಂ; ಪುರೋಹಿತನಪ್ಪಾರ್ಯಂ ತುಷಿತಾಖ್ಯವಿಮಾನದೊಳ್ ಪ್ರಭಂಜನನೆಂಬೊಂ ದೇವನಾದಂ; ಮುನ್ನ ಪೇೞ್ದ ಶಾರ್ದೂಲಚರನಪ್ಪದೇವಂ ಬೆರಸು ಅಂತು ನಾಲ್ವರ್ ದೇವರ್ ಲಲಿತಾಂಗದೇವನಾದಂದು ನಿನಗೆ ಪರಿವಾರದೇವರಾದರ್; ಆಲಲಿತಾಂಗದೇವನ್ನೈ ನೀನಿಲ್ಲಿ ಬಂದು ವಜ್ರಜಂಘನಾದೈ; ನಿನ್ನ ದೇವಿಯಪ್ಪ ಸ್ವಯಂಪ್ರಭೆಯುಮೀಗಳ್ ಶ್ರೀಮತಿಯಾದಳ್; ಶಾರ್ದೂಲಚರನಪ್ಪ ದಿವಾಕರದೇವಂ ಬಂದು ಮತಿಸಾಗರನೆಂಬಂಗಮಾತನ ಭಾರ್ಯೆ ಶ್ರೀಮತಿಗಂ ತನೂಜನಾಗಿ ನಿನಗೆ ಮಂತ್ರಿಮತಿವರನಾದಂ; ಪ್ರಭಾಕರಾಮರಂ ಬಂದು ಅಪರಾಜಿತಂಗಮಾರ್ಜವೆಗಂ ನಂದನನಾಗಿ ಸೇನಾನಾಯಕನಕಂಪನಾದಂ; ಕನಕಪ್ರಭದೇವಂ ಬಂದು ಶ್ರುತಕೀರ್ತಿಗಮನಂತಮತಿಗಂ ತನಯನಾಗಿ ಪುರೋಹಿತನಾನಂದನಾದಂ; ಪ್ರಭಂಜನಕಲ್ಪಜಂ ಧನದತ್ತಂಗಂ ಧನದತ್ತೆಗಂ ಪುತ್ರನಾಗಿ ನಿಜಶ್ರೇಷ್ಠಿ ಧನಮಿತ್ರನಾದಂ; ಅದು ಕಾರಣದಿಂದಿವರೊಳಪ್ಪ ಸ್ನೇಹಂ ಪಿರಿದಾದುದು. ಈಭವಕ್ಕೆಂಟನೆಯ ಭವದೊಳ್ ಭರತದೊಳ್ ನೀನಾದಿತೀರ್ಥಪ್ರವರ್ತಕನಾದಂದೀಶ್ರೀಮತಿ ದಾನತೀ

---

1ಕ.—ನಡೆವೆನಗೀಗಳ್.

ರ್ಥಪ್ರವರ್ತಕಂ ಶ್ರೇಯಾಂಸನಕ್ಕುಂ; ಈನಿನ್ನ ಮಂತ್ರಿ ಮತಿವರನೆಂದು ನಿನಗೆ ಭರತೇಶ್ವರನೆಂಬನಾತ್ಮಜನಕ್ಕುಂ; ಈಭವದೀಯಸೇನಾನಾಯಕನ ಕಂಪನಂ ಬಾಹುಬಲಿಯೆಂಬ ತನಯನಕ್ಕುಂ; ಈಭವತ್ಪುರೋಹಿತನಾನಂದಂ ವೃಷಭಸೇನನೆಂಬೊಂ ತನೂಜನಕ್ಕುಂ; ಈನಿನ್ನ ಶ್ರೇಷ್ಠಿಧನಮಿತ್ರನನಂತವೀರ್ಯನೆಂಬ ತನೂಭವನಕ್ಕುಮೆಂಬುದುಮತಿಪ್ರೀತಿಯಿಂ ವಿಕಸಿತವದನಸರೋಜನಾಗಿ,

ಪಿಂಗಿದುದೀಗಳೆನ್ನ ಬೆಸಗೊಂಡೆಡೆಯೊಂದು ತಮಂ ತ್ವದೀಯವಾ
ಕ್ಯಂಗಳಿನಿನ್ನುಮೊಂದೆನಗೆ ವಿಸ್ಮಯಮಾದಪುದೀತ್ವದಂಘ್ರಿಸ |
ದ್ಮಂಗಳನೈದೆ ಮುಟ್ಟಿ ನೆಲಸಿರ್ದಪುವೀಪುಲಿ ಪಂದಿ ಕೋಡಗಂ
ಮುಂಗುರಿಯೆಂಬ ನಾಲ್ಕಱ ಜವಾವಳಿಯುಂ ಬೆಸಸಿಂ ಮುನೀಶ್ವರಾ || ೧೪

ವ|| ಎಂಬುದುಂ ಗಗನಚಾರಣರಿಂತೆಂದು ಬೆಸಸಿದರ್:—ಈಶಾರ್ದೂಲಂ ಪ್ರಾಗ್ಜನ್ಮದೊಳೀವಿಷಯದ ಹಸ್ತಿನಾಪುರದ ಪರದಂ ಧನದತ್ತಂಗಮಾತನ ಪರದಿತಿ ಧನದತ್ತೆಗಮುಗ್ರಸೇನನೆಂಬೊಂ ತನೂಜನಪ್ರತ್ಯಾಖ್ಯಾನಕ್ರೋಧದಿಂ ತಿರ್ಯಗಾಯುಷ್ಯಂಗಟ್ಟಿ,

ಅರಸನ ಕೋಷ್ಠಾಗಾರದ
ಕರಣಂಗಳ ಕಾಪನೆಯ್ದೆ ಬಂಚಿಸಿ ಕಳ್ದಂ |
ಕರೆದುವೊಳಗೊಳಗೆ[1]ನುಡಿಯು |
ತ್ತಿರೆ ನೃಪನದನಱಿದು ಪಿಡಿದು ತರವೇೞ್ದಾಗಳ್ || ೧೫

ಘಾತಿಸಿ ಚಪೇಟಚರಣಾ
ಘಾತದೊಳಳಿದಿಲ್ಲಿ ಬಂದತಿಕ್ರೋಧನನಿಂ |
ತೀತೆಱದಿಂ ಪುಲಿಯಾದನ
ತೀತಭವಾಂತರದೊಳೀವರಾಹನುಮರಸಾ || ೧೬

ವ|| ಈವಿಷಯದ ವಿಜಯಪುರದೊಳಾನಂದನೃಪತಿಗಂ ವಸಂತಸೇನೆಗಂ

---

[1] ಖ.—ಕಿಱದೊಂದುದಿವಸ.

ಹರಿಕಾಂತನೆಂಬ ತನೆಯನಪ್ರತ್ಯಾಖ್ಯಾನಮಾನದೊಳ್ ತಂದೆಗವಿನೀತನಾಗಿ ಪೇೞ್ದುದಂ ಗೆಯ್ಯದೆ,

ಶಿಲೆಯೊಳ್ ತಾಟಿಸಿ ತನ್ನಯ
ತಲೆಯಂ ಜರ್ಜರಿತಮಸ್ತಕಂ ಮಡಿದತ್ತಾ ।
ಕುಲನೀವರಾಹದೇಹಮ
ನಲಸದೆ ಪೊತ್ತಿರ್ದು ನಮೊದಪಂ ಧರಣಿಪತೀ ॥ ೧೩

ವ॥ ಈವಾನರಂ ಪೂರ್ವಜನ್ಮದೊಳ್ ಧಾನ್ಯಪುರದೊಳ್ ವಣಿಗ್ವರಂ ಕುಬೇರದತ್ತಂಗಂ ತದ್ವನಿತೆ ವಸುದತ್ತೆಗಂ ನಾಗದತ್ತನೆಂಬೊಂ ಮಗನಪ್ರತ್ಯಾಖ್ಯಾನಮಾಯೆಯಂ ಕೈಕೊಂಡು ,

ಬಂಚಿಸಿ ತನ್ನನುಜೆಯ ಧನ
ಮಂ ಚಪಳಂ ಕೊಂಡು ಪುಸಿದು ಕಳವಳಿಸಿ ಖಳಂ ।
ಪಂಚತ್ವಮನ್ನೈದಿ ಮರು
ಜ್ಜಂಚಳಮನನೀಗಳಲ್ತೆ ವಾನರನಾದಂ ॥ ೧೪

ವ॥ ಈನಕುಳಂ ಪೋದ ಭವದೊಳ್ ಸುಪ್ರತಿಷ್ಠಪುರದೊಳ್ ಅಪ್ರತ್ಯಾಖ್ಯಾನಲೋಭಾಭಿಭೂತಂ ದ್ರವ್ಯಲೋಲುಪನೆಂಬೊಂ ಕಲ್ಲುರಿಗನಾಗಿ,

॥ ಉ ಜ್ಜ್ವಳಂ[1] ॥

ಪುರವರೇಶನ ಮಾಡಿದ ಚೈತ್ಯಕ್ಕಿಟ್ಟಿಗೆಗಳ್ ಬರೆ ನೋಡಿ ಕ
ಲ್ಲುರಿಗನೊಯ್ಯನೆ ಪೂರಿಗೆಗೊಟ್ಟೈದಾಬನೆ ಕೊಂಡವನತ್ತಿಯಿಂ ।
ದೊರಸಿ ನೋೞ್ಪುದುವೊಂದವಱೊಳ್ ಪೊನ್ನಿಟ್ಟಿಗೆಯಾದೊಡೆ ರಾಗದಿಂ
ಪಿರಿದು ಬಿಟ್ಟಯಮಂದಿರ ಕಯ್ಯಿಂದಿಟ್ಟಿಗೆಗೊಂಡವನೊಟ್ಟಿದಂ ॥ ೧೫

ವ॥ ಬಂದುದಿವಸಮಾತಂ ಕೆಲದೂರ್ಗೆ ಪೋಗುತ್ತುಂ ತನ್ನ ಮಗಂಗಿಟ್ಟಿಗೆಗೊಳ್ವ ಬೆಸನಂ ಪೇೞ್ದು ಪೋದೊಡವನೊಂದುಮಂ ಕೊಳ್ಳದಿರೆ ಮಗುೞ್ದು ಬಂದು,

---

1 ಕ.—ಮುದ್ರಿಕೆ.

ಬಡಿ[1]ಯೊಳ್ ನಿಜತನಯನ ತಲೆ
ಯೊಡೆವಿನೆಗಂ ಬಡಿದ ಕಾರಣಂ ಕೊಂಡುಯ್ವರ್ ।
ಪಡೆಪುಗಿಡುವಿನೆಗಮೆಂದಾ
ಕಡುಲೋಭಂ ತನ್ನ ಕಾಲ್ಗಳಂ ಪಿಡಿದುಡಿದಂ ॥ ೨೦

ವ॥ ತದ್ವೃತ್ತಾಂತಮೆಲ್ಲಮನಱಿದು ತತ್ಪುರಾಧೀಶಂ ದಂಡಿಸೆ ಗತಜೀವಿತನಾಗಿ ಬಂದಿಲ್ಲಿ ನಕುಳನಾದಂ; ಇಂತೀಶಾರ್ದೂಲವರಾಹಗೋಲಾಂಗೂಲನಕುಲಂಗಳ್ ನಾಲ್ಕುಂ ಭವದ್ದಾನಾನುಮೋದದಿಂ ಜಾತಿಸ್ಮರಂಗಳಾಗಿ ಭೋಗಭೂಮಿಗೆ ಬದ್ಧಾಯುಷ್ಯಂಗಳಾದುವು. ಅಂತು ದಿವ್ಯಮಾನುಷಗೋಚರಮಪ್ಪ ಸುಖಂಗಳಂ ನಿನ್ನೊಡನನುಭುತ್ತುಂ ಬಂದು ಭರತದೊಳ್ ನೀಂ ಭವಿಷ್ಯತ್ತೀರ್ಥಕರನಾದಂದನುಕ್ರಮದೊಳ್ ನಿನಗನಂತವೀರಾಚ್ಯುತವೀರರೆಂಬ[2]ತನಯರಪ್ಪರೆಂದಿಂತು ಚಾರಣಮುನೀಂದ್ರರ್ ಬೆಸಸಿ ಸತ್ಪಥೋನ್ನತಿಯಂ ನನ್ನಿ ಮಾಡುವಂತೆ ಸತ್ಪಥಾತಿಥಿಗಳಾದರ್. ಅರಸನುಂ ಶ್ರೀಮತಿಯುಮಂದೆಲ್ಲರುಮವರ ಗುಣಂಗಳನೆ ಮತಿವರಾದಿಗಳೊಳ್ ನುಡಿಯುತ್ತುಮಿರ್ದು ಮಱುದಿವಸಂ ಸಮಸ್ತಸಾಮಗ್ರಿಯಿಂ ಪಯಣದ ಮೇಲೆ ಪಯಣಂಬೋಗಿ ಪುಂಡರೀಕಿಣಿಯನೆಯ್ದಿ,

ಮಿಗೆಳದ್ಬಾಷ್ಪಾಂಬುದೀನಾನನೆಯೆನಿಸಿದ ಲಕ್ಷ್ಮೀಮತೀದೇವಿಯಂ ಮೆ
ಲ್ಲಗೆ ಸಂತೈಸುತ್ತುಮಾತ್ಮಾನುಜೆಯ ಮನದ ನಿರ್ವೇಗಮಂ ಪಿಂಗಿಸುತ್ತುಂ ।
ಬಗೆಯುತ್ತುಂ ಮಂತ್ರಿವರ್ಗಂಗಳೊಳತಿನಯಮಂ ಪುಂಡರೀಕಂಗೆ ಸಾಮಾ
ದಿಗಳಿಂ ನಿಷ್ಕಂಟಕಂಮಾಡಿದನಖಿಳಮಹೀಚಕ್ರಮಂ ವಜ್ರಜಂಘಂ ॥ ೨೧

ವ॥ ಅಂತಾತ್ಮೀಯಭಾಗಿನೇಯನನಾರಾಜ್ಯದೊಳ್ ಪದುಳಂಮಾಡಿ ಮಹಾಸಾಮಂತಮಂತ್ರಿಮಂಡಳಕ್ಕಪ್ಪಯಿಸಿ ನಿಜವಿಜಯರಾಜಧಾನಿಗುತ್ಪಳಖೇಟಕ್ಕೆವಂದು,

ದಿವಿಜೇಂದ್ರಾವಾಸಸಾಖ್ಯಕ್ಕತಿಶಯಮೆಸೆವೀಸಾಖ್ಯಮಾದೇವಿಗಂ ರೂ
ಪವಿಳಾಸಶ್ರೀಯೊಳೀದೇವಿಯೆ ಮಿಗಿಲಮರಾಕಾರಮಂ ಗೆಲ್ದುದೀಮಾ ।

1ಗ.—ಪಡಿ. 2ಖ.—ಅಚ್ಯುತವೀರಸುವೀರರೆಂಬ.

ನವದೇಹಾಕಾರವೆಂಬಂತಿರೆ ಭುವನಜನಂ ಶ್ರೀಮತೀವಕ್ತ್ರಚಂದ್ರ
ಚ್ಛವಿ ಚೆಲ್ವಂ[1]ಮಾಳ್ಪಿನಂ ಭೋಗಿಸಿದನಖಿಳಭೋಗಂಗಳಂ ವಜ್ರಜಂಘಂ ‖

ವ॥ ಅಂತನೇಕಸಂವತ್ಸರಂಗಳ್ ಸಲ್ವಿನೆಗವೊಂದುದಿವಸಂ ರಜನೀಸಮಯದೊಳನರ್ಘ್ಯಮರಕತಮಣಿಶಿಲಾಸಂಪಾದಿತಮೇದಿನೀವಿಭಾಗದೊಳ್ ಅಮರಖಚರಕಿನ್ನರ ಮಿಥುನಸನಾಥವಿಚಿತ್ರಭಿತ್ತಿವಿರಾಜಿತದೊಳತಿಬಹಳಕಾಳಾಗರುಧೂಪಧೂಮಾಮೋದದೊಳತಿವಿಶದಮಣಿಪ್ರದೀಪಿಕೋದ್ಯೋತದೂರೀಕೃತತಮಸ್ತಮದೊಳನೇಕರತ್ನರಚಿತಪ್ರತಿಪಾದುಕವಿನ್ಯಸ್ತಕಾಂಚನಮಂಚೋಪಶೋಭಿತದೊಳ್ ಪಯಃಪಯೋಧಿಫೇನಸಂಕಾಶದುಕೂಲೋಪಪ್ರಚ್ಛದಾಚ್ಛಾದಿತವಿಚಿತ್ರನೇತ್ರೋಭಯೋಪಧಾನಶಯ್ಯಾತಳದೊಳನೇಕವಿಳಾಸಿನೀವಿಳಾಸಾವಾಸಭವನದೊಳಾದಂಪತಿಗಳನ್ಯೋನ್ಯಾಂಗಸ್ಪರ್ಶಸುಖೋನ್ಮೀಳಿತವಿಲೋಚನರಂತಂತೆ ನಿದ್ರಾರಸವಶಗತರಾಗಿರ್ದರ್; ಅನ್ನೆಗಮಲ್ಲಿ ಮುಚ್ಚಿರ್ದ ಹರಿನೀಲಗವಾಕ್ಷಜಾಲಕವಾಟಪುಟಂಗಳಂ ತೆಱೆಯಲ್ಮಱೆದು ಸೂರ್ಯಕಾಂತದ ಧೂಪಗುಂಡಿಗೆಯೊಳಳವಱಿಯದೆ ಸೆಜ್ಜೆವಳನಿಕ್ಕಿದ ಕೇಶಸಂಸ್ಕಾರ[2]ಕಾಳಾಗರುಧೂಪಂ,

ಮೊದಲೊಳ್ ನೀಳ್ದು ಪೊದಱ್ದು ಪರ್ಬಿ ಪದಪಂ[3]ಕೈಕೊಂಡು ಮಂದೈಸಿ ಮಾ
ಣದೆ ತನ್ನಂದದೊಳೇೞ್ಗೆಗುಂದದೆ ನಿರುದ್ಧೋಚ್ಛ್ವಾಸಮುಪ್ಪನ್ನೆಗಂ ।
ಪುದಿದಾದಂಪತಿಯುಂ ಪುದುಂಗೊಳಿಸಿ ಲೋಕಾಶ್ಚರ್ಯಮಂ ಮಾಡಿ ಕೊಂ
ದುದು ಕೃಷ್ಣಾಗರುಧೂಪಧೂಮನಿವಹಂ ಕೃಷ್ಣೋರಗಂ ಕೊಲ್ವವೊಲ್ ೨೩

ಬಿಡದೆ ಪೊಗೆ ಸುತ್ತೆ ತೋಳಂ
ಸಡಿಲಿಸದಾಪ್ರಾಣವಲ್ಲಭರ್ ಪ್ರಾಣಮನಂ ।
ದೊಡೆಗಳೆದರೋಪರೋಪರೊ
ಳೊಡೆಸಾಯಲ್ಪಡೆದರಿನ್ನವೇಂ ಸೈಪೊಳವೇ ‖ ೨೪

ಭೋಗಾಂಗಮಾಗಿಯುಂ ಕೃ
ಷ್ಣಾಗರುಧೂಪಂ ಮುಸುಂಕಿ ಕೊಂದಿಕ್ಕಿದುದಾ[4]।

---

[1]ಕ.—ವಜ್ರದಂತಚ್ಛವಿ ಪೆರ್ಚಿ. [2]ಕ.—ಶೇಷಸಂಸ್ಕಾರ. [3]ಖ.—ಪರಪಂ. [4]ಖ.—ಕೊಂದುದುನೋಡಾ.

ಭೋಗಿಗಳನಿಂತು ಸಂಸ್ಕೃತಿ
ಭೋಗಂಗಳ್ ಭೋಗಿಭೋಗದಿಂ ವಿಷಮಂಗಳ್ ॥ ೨೪

ಅನಿತು ಸುಖದನಿತು ಭೋಗದ
ಮನುಜಯುಗಂ ನೋಡೆ ನೋಡೆ ತತ್‌ಕ್ಷಣದೊಳ್ ತಾ ।
ನಿನಿತೊಂದು ದೆಸೆಯನೆಯ್ದಿದು
ದೆನೆ ಜಡರೇನೆಂದು ನಂಬುವರ್ ಸಂಸ್ಕೃತಿಯಂ ॥ ೨೬

ಬೆಳಗುವ ಸೊಡರ್ಗುಡಿ ಕಿಡೆ ಮನೆ
ಯೊಳಗೆ ತಮಂ ಪರ್ಬುವಂತೆ ಜೀವಂ ತನುವಿಂ ।
ತಳರಲೊಡಂ ವಿಚ್ಛಾಯತೆ
ಗೊಳಗಾದುವು ತೊಳಗುವವರ ಸೌಂದರತನುಗಳ್ ॥ ೨೭

ವ॥ ಆಗಳಾದಿತ್ಯೋದಯದಿನವರಂ ನೋಡಿ ಹಾಹಾಕ್ರಂದನಧ್ವನಿಗಳಂ ತಃಪುರಕ್ಕಂ ಪುರಕ್ಕಂ ನೆಗಳೆ ಮತಿವರಾದಿಗಳ್ ತದ್ದಂಪತಿಗಳ್ಗೆ ಶರೀರಶೋಭೆಯಂ ಮಾಡಿ ಚಂದನಹರಿಚಂದನೇಂಧನಂಗಳೊಳ್ ದಹನಕ್ರಿಯೆಯಂ ನಿರ್ವರ್ತಿಸಿ ತದ್ಧೂಪಧೂಮದೊಳಲ್ಲಿಯೆ ವಿಗತಜೀವಿತಂಗಳಾದ ತಿರ್ಯಗ್ಜಾತಿಗಳುಮಂ ಸಂಸ್ಕರಿಸಿ, ಬಳಿಯಂ ಶ್ರೀಮತೀತನಯಂ ವಜ್ರಬಾಹುವೆಂಬಂಗೆ ಧರಾಭಾರಮಂ ಕೊಟ್ಟು ರಾಜ್ಯದೊಳ್ ನಿಱಿಸಿ ತಪೋಭರದೊಳ್ ನಾಲ್ವರುಂ ನಿಂದು ಜೀವಿತವ್ಯಪಾಯದೊಳಧೋಗ್ರೈವೇಯಕದೊಳಹಮಿಂದ್ರಪದವಿಯಂ ತಾಳ್ದಿದರ್; ಅಂತು ಪಂಚತ್ವಮನೈದಿದ ವಜ್ರಜಂಘಂಗಂ ಶ್ರೀಮತಿಗಮಾತಿರಿಕಂಗಳ್ಗ ಮುತ್ತಮಪಾತ್ರದಾನಾನುಮೋದದ ಪುಣ್ಯಫಲದಿಂದಮಾಜಂಬೂದ್ವೀಪದ ಮಂದರಮಹೀಧರದುತ್ತರದಿಗ್ಭಾಗದೊಳಿರ್ದುತ್ತರಕುರುವೆಂಬುತ್ತಮಭೋಗಭೂಮಿಯೆ ಜನ್ಮಭೂಮಿಯಾದುದು; ಅಲ್ಲಿ,

ದರ್ಪಣಸಮತಳಮೆನೆ ಸಂ
ಸರ್ಪದ್ರತ್ನಾಂಶುಜಾಳಜಟಿಳಿತಮೆನೆ ಕಂ ।
ದರ್ಪಸುಖನಿಳಯಮೆನೆ ಸಂ
ತರ್ಪಣಕರಮಖಿಳಭೋಗಭೂಮಿವಿಭಾಗಂ ॥ ೨೮

ವ॥ ಮತ್ತಮಲ್ಲಿ,

ಹಿಮವೆಂದಾತಪಬಾಧೆಯೆಂದು ಮೞೆಯೆಂದಿಲ್ಲಾನೆಲಂ ಪಂಚರ
ತ್ನಮಯಂ ನಾಲ್ವೆರಲಲ್ಲದಾಗದೆಳವುಲ್ ನೀಲೋತ್ಪಳಾಬ್ಜಾಕರಾ |
ಳಿ ಮನಂಗೊಳ್ವುದು ಮೆಲ್ಲನಲ್ಲಿ ಸುೞಿಗುಂ ಮಂದಾನಿಳಂ ನೀರ್ ಸುಧಾ
ಸಮಮುದ್ಯಾನವನಂ ಮದೋತ್ಕಪರಪುಷ್ಟೋದ್ದಾಮಕೋಳಾಹಳಂ ||೨೯

ಪಗಲಿರುಳೆಂಬ ಭೇದಮುನಯುಂ ಬಡವರ್ ಕಡುಬಲ್ಲಿದರ್ ವಿಷಾ
ಹಿಗಣಮನೇಕರೌದ್ರಮೃಗಜಾತಿಗಳಾಳರಸೆಂಬುದೊಂದು ದಂ |
ದುಗಮುಳಿಪಾಯಿಲಂ ಮುಱುಕಮಾಮಯಮುಪ್ಪಪಮೃತ್ಯುವೆಂಬಿವ
ಲ್ಲಿಗೆ ಪೊಱಗೆಂದೊಡಿಂ ಸುಖಮನೇವೊಗೞ್ವುದೊ ಭೋಗಭೂಮಿಯಾ||

ವ|| ಮತ್ತಮಲ್ಲಿ,

ಮದ್ಯವಿಭೂಷಣವಸ್ತ್ರಾ
ತೋದ್ಯಸ್ರಗ್ಭವನಭಾಜನಾಶನದೀಪ |
ಪ್ರೋದ್ಯಜ್ಜ್ಯೋತಿಸ್ಥಿತಿಯೊಳ
ಮುದ್ಯೋತಿಸೆ ತುದಿಯೊಳಂಗಮಿಂತು ದಶಾಂಗಂ || ೩೧

ವ|| ಎನಿಸಿದ ನಾನಾರತ್ನಮಯಂಗಳುಮಪ್ರತಿಹತಪ್ರಭಾದ್ಯೋತಿತ ದಿಙ್ಮುಖಂಗಳುಮಪ್ಪ ಕಲ್ಪವೃಕ್ಷಂಗಳ್,

ಕುಡಿದೊಡೆ ಸೊರ್ಕಿಸದವು ನಾ
ಣ್ಗೆಡಿಸದವು ಮನಕ್ಕಲಂಪನೀವುವು ರತಮಂ |
ನಡೆಯಿಪುವೆನಿಸುವ ಮಧುಗಳ
ನೆಡೆಯುಡುಗದೆ ಕುಡುಗುಮುಚಿತಮದ್ಯಾಂಗಕುಜಂ || ೩೨

ಮಕುಟಂ ಕೇಯೂರಂ ಕ
ರ್ಣಕುಂಡಲಂ ಕೊಪ್ಪು ಸರಿಗೆ ದುಸರಂ ಮಣಿಮು |
ದ್ರಿಕೆ ತಿಸರಮೆಂಬ ಭೂಷಾ
ನಿಕರಮನಾಭೂಷಣಾಂಗತರು ಕುಡುತಿರ್ಕುಂ || ೩೩

ಪಟಿ ಚಿತ್ರಾವಳಿ ಜೋಗಂ
ಪಟಿಯುಂ ದೇವಾಂಗಮೆಂಬ ವಸನಂಗಳನೇಂ |

ಘಟಿಯಿಸುವವೊಲ್ ಮಡಿವಳ್ತನ
ಪಟಿಯುತನನೆ ಪೋಲ್ತು ವಿಶದವಸನಾಂಗಕುಜಂ ॥ ೩೪

ಅತಿಮೃದುರವದಾಯಿಗಳಂ
ತತಘನಸುಷಿರಾವನದ್ಧವಾದ್ಯಂಗಳನೇಂ ।
ವಿತತಮಱಿದೋಲಗಿಪ್ಪುದೊ ದಂ
ಪತಿಗೆಂದುನುವಾರ್ಯವೀರ್ಯತೂರ್ಯಕ್ಷ್ಮಾಜಂ ॥ ೩೫

ಮಗಮಗಿಪ ಜಾದಿ ಪೊಂಗೇ
ದಗೆ ಮಲ್ಲಿಗೆಯೆಂಬ ಪಲವು ಪೂಮಾಲೆಗಳಂ ।
ಬಗೆಯಱಿದೋಲಗಿಪ್ಪುದು ಮಾ
ಲೆಗಾಱನಂ ಪೋಲ್ತುದಗ್ರಮಾಲ್ಯಮಹೀಜಂ ॥ ೩೬

ಹಾಟಕಭಿತ್ತಿಸಮನ್ವಿತ
ನಾಟಕಶಾಲೆಗಳ ವಿವಿಧಸೌಧಂಗಳ ಕೊಂ ।
ಡಾಟಮನೆ ಮೆಱೆದು ಮೆಚ್ಚಂ
ಪಾಟಿಸುವುವು ಮಿಥುನತತಿಗೆ ಗೃಹಮಹಿಜಾತಂ ॥ ೩೭

ಅನತಿಶಯಸೌಖ್ಯಭಾಜನ
ಜನಕ್ಕೆ ಭಾಜನಮಿವಪ್ಪುವೆಂಬಂತೆ ಕನ ।
ತ್ಕನಕಮಣಿಖಚಿತಬಹುಭಾ
ಜನಂಗಳಂ ಭಾಜನಾಂಗತರು ಕುಡುತಿರ್ಕುಂ ೩೮

ಅಮರ್ದನ ಸವಿಯೊಳಗೀಸವಿ
ಸಮನೆನೆ ತೇಜೋಬಳಾಯುರಾರೋಗ್ಯಸಮೋ ।
ತಮನಮೃತಾನ್ನಮನೊಲ್ದೀ
ಗುಮಾಗಳುಂ ಭೋಜನಾಂಗಕಲ್ಪಾವನಿಜಂ ॥ ೩೯

ಆಪೊತ್ತುಂ ಮಣಿದೀಪಕ
ಳಾಪೋದ್ಯಜ್ಜ್ಯೋತಿಗಳ್ ದಿಶಾಮಂಡಲಮಂ ।

ವ್ಯಾಪಿಸುತಿರೆ ಸೊಗೆಯಿಸುವುವು
ದೀಪಾಂಗಜ್ಯೋತಿರಂಗಕಲ್ಪಕುಜಂಗಳ್ ‖ ೪೦

ನೀಡಿದ ಕಯ್ಗೆ ನೀಡಿರದೆ ಬೇಡಿದ ಭೋಗಮನೇನಾದೊಡಂ
ನೀಡುವ ಕಲ್ಪವೃಕ್ಷನಿಕರಂಗಳೆ ಭೋಗದಲಂಪನಾವಗಂ ।
ಮಾಡೆ ಮನಂ ವಿನೋದರಸದೊಳ್ ತಡಮಾಡೆ ಮಗುಳ್ದು ಮನ್ಮಥ
ಕ್ರೀಡೆಗೆ ನೋಡೆ ನಾಡೆ ಗುಱಿಯಪ್ಪುವು ದಂಪತಿ ಭೋಗಭೂಮಿಯೊಳ್ ‖

ವ॥ ಮತ್ತಮಲ್ಲಿ ಕುಶೀಲಕುತ್ಸಿತಾಚಾರಕುವೇಷಕುದೃಷ್ಟಿಗಳುಂ ಗೃಹೀತವ್ರತಪರಿಚ್ಯುತರುಂ ಮಾಯಾಚಾರಪರಿಣತಮಪ್ಪಪಾತ್ರದಾನಿಗಳುಂ ತಿರ್ಯಗ್ಜಾತಿತ್ವಮಂ ಪೊರ್ದಿದ ಮಿಥುನಂಗಳಾಗಿ ಪುಟ್ಟಿ ಪರಸ್ಪರವೈರಂಗಳಿಲ್ಲದೆ ಅನಾಮಯಂಗಳುಮುಪಗತಬಾಧಂಗಳುಮಾಗಿ ರಮಿಯಿಸುವುವು. ಮತ್ತಮುತ್ತಮಪಾತ್ರದಾನಾನುಮೋದಫಲದಿಂದಲ್ಲಿ ಪುಟ್ಟುವ ಜೀವಂಗಳ್ ನಾರೀಪುರುಷಸಂಯೋಗನಿಯೋಜಿತಶುಕ್ಲಾರ್ತವಂಗಳೊಳ್ ಜೀವಯುಗಳಂಗಳಾಗಿ ನೆಲಸಿ ಕಲಿಲಘನಫೇನ[1]ಬುದ್ಬುದಾದಿಪರಿಣತಿಯಿಂ ನವಮಾಸಾವಸಾನಸಮಯದೊಳ್ ಸ್ತ್ರೀಪುರುಷಯುಗಳಮಿಯಾಗಿ ಪುಟ್ಟುಗುಂ; ಪುಟ್ಟಿದಾಗಳೆ ಮಾತಾಪಿತೃಯುಗಳಂಗಳ್ ಸೀಂತುಮಾಗುಳಿಸಿಯುಂ ಪರಾಸುಗಳಾಗೆ ನಿಜಶರೀರಂಗಳ್ ಮಂಜು ಕರಗುವಂತೆ ಕರಗೆ ಸಹಜದೊಳಪಾಪಿಗಳುಮಾರ್ಜವಂಗಳುಂ ಅತಿಮೃದುಗಳುಮಪ್ಪುದಱಿಂದೆ ನಾಕಲೋಕಪ್ರಾಪ್ತಂಗಳಕ್ಕುಂ; ಆವರ್ಕೆ ಪುಟ್ಟಿದ ಯುಗಳಂಗಳ್ ಏೞುದಿವಸಮುಂ ಪುರಾತನಪುಣ್ಯಕರ್ಮಕಾಮಧೇನುಸ್ತನೋಪಮಾನನಿಜಾಂಗುಳಿಜನಿತರಸಾಯನಾಸ್ವಾದದೊಳಮುತ್ತಾನಶಯ್ಯೆಯೊಳಂ ಕಳುಪಿ, ಪೆಱಗೇೞುದಿವಸದೊಳ್ ತೆಮಳ್ದುಂ, ಪೆಱವೇೞುದಿವಸಕ್ಕೆ ತಳರ್ನಡೆನಡೆದುಂ, ಪೆಱವೇೞು ದಿವಸದೊಳ್ ಪದುಳಂ ನಡೆದುಂ, ಪೆಱವೇೞುದಿವಸದೊಳ್ ಕಳಾಕಳಾಪಪ್ರವೀಣಂಗಳಾಗಿಯುಂ, ಪೆಱವೇೞುದಿವಸದೊಳ್ ವಿಜ್ಞಾನವಿದಂಗಳಾಗಿಯುಂ, ಪೆಱವೇೞುದಿವಸದೊಳ್ ಸಂಪೂರ್ಣನವಯೌವನಂಗಳಾಗಿ ಶುಭಲಕ್ಷಣಲಕ್ಷಿತಶರೀರಂಗಳಾಗಿಯುಂ, ಅಂತು ನಾಲ್ವತ್ತೊಂಭತ್ತು ದಿವಸದೊಳ್ ಸಮುಚ

[1] ಕ — ಪೇಶ್ಯ.

ತುರಸ್ರ ಸಂಸ್ಥಾನಸಂಹನನಂಗಳುಂ ಸಾಸಿರಬಿಲ್ಲಿನುಡಿಯುಮಾಗಿ ದಿನತ್ರಯ ದೊಳ್ ಬದರೀಫಳಮಾತ್ರಾಹಾರಿಗಳುಮಾರೋಗ್ಯಶರೀರಂಗಳುಂ ಸೌಂದರಾ ಕಾರಂಗಳುಂ ತ್ರಿಪಲ್ಯೋಪಮಜೀವಿಗಳುಮಾಗಿ,

ತೊಲಗದ ಜವ್ವನಂ ತವದ ಮೆಚ್ಚು ಮರಲ್ವುವ ನೋಟಮುತ್ತಿಯಂ
ಸಲಿಸುವ ಭೋಗಮೊಲ್ದಗಲದೋಪರ ಕೂಟಮನಂಗರಾಗದೊಳ್ ।
ನಲಿವ ವಿನೋದಮಾದಮೆರ್ದೆಯೊಳ್ ತಡಮಾಡೆ ಸುಖಂಗಳೊಳ್ ಪಳಂ
ಚಲೆವುದು ಸಾಕಲೋಕಮುಮನೇನಿರದೀವುದೊ ಭೋಗಭೂತಳಂ ॥೪೨

ವ॥ ಅಂತನೇಕಭೋಗನಿವಾಸಮೆನಿಸುವ ಭೋಗಭೂಮಿಯೊಳ್,

ಅಗರುವ ಧೂಪಧೂಮದೊಳೆ ಸೊರ್ಕಿದ ಸೊರ್ಕುಗಳಾಗಳಲ್ಲಿ ತೊ
ಟ್ಟಗೆ ತಿಳಿದಂತೆ ತನ್ಮನುಜದಂಪತಿ ದಂಪತಿಯಾಗೆ ತೋಳ ತ ।
ಳ್ತಗಲದಲಂಪಿನಿಂಪು ತವದಚ್ಚುಗಳುರ್ಕೆ ನಿಮಿರ್ಕೆಗುಂದದಾ
ವಗಮತಿಸೌಖ್ಯಮಂ ಪಡೆವುದೀದೊರೆಯುನ್ನತಿ ಪಾತ್ರದಾನದಾ ॥ ೪೩

ದಾನಾನುಮೋದದಿಂದಂ
ತಾನಾಲ್ಕುಂ ಮೃಗಮುಮಲ್ಲಿ ಪುಟ್ಟಿದುವೆನೆ ಪೇ ।
ಳ್ವೇನಂ ಸುಖಮಂ ಮಾಡದೊ
ದಾನದ ದಾನಾನುಮೋದದನುಪಮಪುಣ್ಯಂ ॥ ೪೪

ವ॥ ಒಂದು ದಿವಸಂ ಆವಜ್ರಜಂಘಾರ್ಯನಾತ್ಮೀಯಪ್ರಾಣೇಶ್ವರಿವೆರಸು,

ತುಱುಗಿದುದೊಂದು ಕೊಂಬು ತಳಿರಿಂ ಮುಗುಳಿಂ ಪೆಱತೊಂದುಕೊಂಬುಸು
ತ್ತಿಱಿದುದು ತಳ್ತ ಬಳ್ಳಿಡಿಯೆಕಾಯ್ಗಳ ಗೊಂಚಲನೊಂದುಕೊಂಬು ಪೊ ।
ತ್ತೆಱಗಿದುದೊಂದೆ ಮಾಮರದೊಳೊಂದೆಳಗೊಂಬದುನೋಡ ನೋಡ ಪ
ಣ್ತೆಱಗಿದುದೇನಿದಂಗಜಮಹೀಭುಜನಿಕ್ಕೆಯೊ ಚಿತ್ರಶಾಲೆಯೋ ॥ ೪೫

ವ॥ ಎಂದು ಮತ್ತಮನೇಕಕುಸುಮಕಿಸಲಯಫಳಪರಿಣತಫಳಾವನ ಮ್ರಾಮ್ರತರುನಿರಂತರಿತವನಲಕ್ಷ್ಮಿಯನೊಱಲ್ದು ನೋಡುತಿರ್ಪನ್ನೆಗಂ ಗಗನತಳಜಳಧಿಯೊಳ್ ಬಹಿತ್ರದಂತೆ ಪರಿವ ಸೂರ್ಯಪ್ರಭನೆಂಬ ದೇವನ ವಿಮಾನಮಂ ನೋಡಿ,

ಪೋದ ಭವಂಗಳಂ ನೆನೆವಿನಂ ಗಗನಾಂತರದಲ್ಲಿ ಸೂರ್ಯಯು
ಗ್ಮೋದಯಮೊಂದುಮಿಲ್ಲದುದಿದಾದಪುದೆಂಬಿನೆಗಂ ವಿಶಾಲಪು ।
ಣ್ಯೋದಯಮಂದು ದಂಪತಿಗೆ ಸಾರ್ತಗೆ ಸಾರ್ತರೆ ವಂದುದಾರರಾ
ಗೋಚರಮಂ ನಿಮಿರ್ಚಿದುದು ಕಣ್ಗೆ ವಿಯತ್ತಳಚಾರಣೋದಯಂ ॥ ೪೬

ವ॥ ಅಂತವತರಿಸಿದ ಚಾರಣದ್ವಂದ್ವಕ್ಕಾದ್ವಂದ್ವಮಿದಿರ್ವಂದು ಭಕ್ತಿಭರಾನತಿನಿಪತತ್ಕರ್ಣಪೂರಪಲ್ಲವಂ ತದೀಯಪಾದಪಲ್ಲವಂಗಳನಾನಂದಾಶ್ರುಮಿಶ್ರಿತಜಳಂಗಳೊಳ್ ತೊಳೆದುಂ ನಿಜೋತ್ತರೀಯಪಲ್ಲವಂಗಳೊಳ್ ತೊಡೆದುಂ ಸಮುತ್ತುಂಗಮಣಿಮಯಾಸನದೊಳ್ ಕುಳ್ಳಿರಿಸಿ,

ಮುನಿವೃಂದಾರಕವಂದ್ಯ ನಿಮ್ಮ ಚರಣಾಂಭೋಜಂಗಳಂ ಕಂಡು ಕ
ಣ್ಬನಿಗಳ್ ಮಾಣ್ದಪುವಿಲ್ಲ ಕಾರಣಮಿದೇಂ ಚಿತ್ತಕ್ಕತಿಪ್ರೀತಿ ತೊ ।
ಟ್ಟನೆ ಕೈಗಣ್ಮುವುದೇಕೆ ಪೂರ್ವಭವದೊಳ್ ಬಂಧುತ್ವಮುಂಟಕ್ಕುಮಿಂ
ತಿನಿತೊಂದಿಲ್ಲದೊಡಾಗಲಾಯ್ತೆನಗಿದಂ ಕೇಳ್ವೊಂದು ಕೌತೂಹಳಂ ॥ ೪೭

ವ॥ ಎಂಬುದುಮವರೊಳಗ್ರಮುನಿ ಮುಗುಳ್ನಗೆನಕ್ಕು ಮಹಾಬಳವಿಯತ್ತಳಚರನಾದ ಭವದೊಳಾಂ ನಿನಗೆ ಸಚಿವನೆಂ ಸ್ವಯಂಬುದ್ಧನೆಂಬೆನಾಗಿ,

ಪಡೆದು ಸಮಾಧಿಯಂ ನಿನಗೆ ನಿನ್ನ ವಿಯೋಗದ ದುಃಖದೊಳ್ ತಪ
ಕ್ಕೊಡರಿಸಿ ಘೋರವೀರತಪದೊಳ್ ತನುವಂ ಬಡಮಾಡಿ ನೋಂಪಿಯೊಳ್ ।
ಮುಡಿಪಿ ನಿರಾಕುಳಂ ಮೊದಲ ಸಗ್ಗದೊಳಾಂ ಮಣಿಚೂಳನಾಮಮಂ
ಪಡೆದಮರೇಂದ್ರಲೋಕಸುಖಸಾರಸಮುಚ್ಚಯದಂತನೆಯ್ದಿದೆಂ ॥ ೪೮

ವ॥ ಅಲ್ಲಿಂ ತಳರ್ದು ಜಂಬೂದ್ವೀಪದ ಪೂರ್ವವಿದೇಹದ ಪುಷ್ಕಳಾವತೀವಿಷಯದ ಪುಂಡರೀಕಿಣಿಯನಾಳ್ವ ಗುಣಪ್ರಿಯಂ ಪ್ರಿಯಸೇನಮಹೀಭುಜಂಗಂ ತತ್ಸೌಂದರಿ ಸುಂದರಿಗಂ,

ಪ್ರೀತಿಂಕರನೆಂಬೆಂ ತನು
ಜಾತನೆನಾಂ ಪ್ರೀತಿದೇವನೆನ್ನಿಂ ಕಿಱಿಯಂ ।
ಖ್ಯಾತಯಶನೀತಪೋಧನ
ನೀತಪದಿಂದವಧಿಬೆರಸು ಚಾರಣಗುಣಮಂ ॥ ೪೯

ಪಡೆದವಧಿಬೋಧದಿಂದೀ
ಯೆಡೆಯೊಳ್ ನೀಂ ಬಂದು ಪುಟ್ಟಿದುದನಱಿದಱಿವಂ ।
ಕುಡಲೆಂದು ಬಂದೆನಿದು ನಿನ
ಗೆಡೆಯುಡುಗದೆ ಕುಡುಗುಮುಚಿತಮುಕ್ತಿಶ್ರೀಯಂ ॥ ೫೦

ನಿನಗೆ ಜಯವರ್ಮನಾದಂ
ದಿನ ಭವದಿಂದಿತ್ತ ಭೋಗಕಾಂಕ್ಷೆಯಿಂ ತ್ರಿಣ್ತಂ ।
ಮನದೊಳ್ ಸಮ್ಯಕ್ತ್ವದ ದೆಸೆ
ಯಿನಿತಿಲ್ಲ ದಲಮ್ಮ ಕೈಕೊಳಲ್ಕಿದು ಕಾಲಂ ॥ ೫೧

ಘನಮಿಥ್ಯಾತ್ವದವಾನಳ
ಪಿನದ್ಧಜೀವಕ್ಕೆ ದೃಷ್ಟಿಮೋಹಪ್ರವಿನಾ ।
ಶನಮಿಲ್ಲದಂದು[1] ಪುಟ್ಟಿದು
ಮನದೊಳ್ ಸ್ವರ್ಮೋಕ್ಷಸಾಧನಂ ಸಮ್ಯಕ್ತ್ವಂ ॥ ೫೨

ದೊರೆಕೊಳೆ ಕಾಲಲಬ್ಧಿ ಬಗೆದಂತಿರೆ ಕೂಡೆ ಗುರೂಪದೇಶಮಾ
ವರಿಸೆ ಜಿನೇಂದ್ರಭಕ್ತಿ ಪೊಱಪೊಣ್ಮೆ ದಯಾರಸಮಿಂತು ನಾಡೆಯುಂ ।
ಪರಿಕರದಿಂ ಮನಕ್ಕೆಱಿವು ಸಾರೆ ಭವಾಬ್ಧಿತಟಂ ಸಮೀಪಮಾ
ಗಿರೆ ದೊರೆಕೊಂಡ ದೃಷ್ಟಿವಿಭವಂ ಕಳೆಗುಂ ಖಿಳಕರ್ಮಬಂಧಮಂ ॥ ೫೩

ಸಮವಾಯಮಪ್ಪುದಲ್ತಂ
ದು ಮನಂ ಬಸಮಾಡಿ ದೋಷವಿರಹಿತನಾಪ್ತಂ ।
ಕ್ರಮದಾಪ್ತನೆ ಪೇೞ್ದುದದಾ
ಗಮಮಾಗಮದರ್ಥಮಾವುದದುವೆ ಪದಾರ್ಥಂ ॥ ೫೪

ಪರಮೋಪಶಮಂ ಧರ್ಮಾ
ನುರಾಗಮನುಕಂಪೆ ನೆಱೆವ ನಂಬುಗೆಯೆಂಬೀ ।
ಪರಮಜಿನಗದಿತಗುಣಪರಿ
ಕರದೊಳ್ ಕೂಡಿದುದೆ ನಿರುಪಮಂ ಸಮ್ಯಕ್ತ್ವಂ ॥ ೫೫

---

[1] ಖ — ಘನಮಿಥ್ಯಾತ್ವಾಶುಭ ಭಾ । ವನಂದಜೀವಕ್ಕೆ ದೃಷ್ಟಿಮೋಹಪ್ರವಿಕಾ । ಸನಮಿಲ್ಲದಂದು.

ಜೀವಾದಿನವಪದಾರ್ಥದೊ
ಳಾವಗವರ್ಥಿಯನೆ ಮಾಡು ಮೂಢತ್ರಯದೊಳ್ ।
ಭಾವಮನೆ ಬಿಸುಡು ಬೆಳಗುಗು
ಮೀವಿಧದಿಂ ನೆಗಟೆ ನಿನ್ನ ದರ್ಶನರತ್ನಂ ॥ ೫೬

ಜಿನಮತಪದಾರ್ಥಶಂಕಾ
ಪನಯನಮುಂ ಭೋಗಕಾಂಕ್ಷೆಯೊಳ್ ವಿಮುಖತೆಯುಂ ।
ಮುನಿಜನತನುಮಳವಿಚಿಕಿ
ತ್ಸನವರ್ಜನಮುಂ ತ್ರಿಮೂಢತಾನಿರಸನಮುಂ ॥ ೫೭

ಉಪಗೂಹನಮುಂ ಸದ್ಧ
ರ್ಮಪಥಚ್ಯುತಭವ್ಯಸಂಹತಿಸ್ಥಾಪನಮುಂ ।
ವಿಪುಳಗುಣವತ್ಸಳತ್ವಮು
ಮುಪಗತಮಳಜೈನಶಾಸನೋದ್ಭಾಸನಮುಂ ॥ ೫೮

ವ॥ ಎಂದು ಪೇೞ್ದೆಯೆಂಟುಗುಣಂಗಳುಂ ಸಮ್ಯಗ್ದರ್ಶನಾವಯವಂಗಳ್,

ಇವಱಿಂ ಸಮ್ಯಗ್ದರ್ಶನ
ಮವಶ್ಯಮುಜ್ಜ್ವಳಿಕುಮದುವೆ ಸಮ್ಯಗ್ಜ್ಞಾನ ।
ಕ್ಕವಕಾಶಮಕ್ಕುಮಂತದು
ಕವಲ್ತು ಸಮ್ಯಕ್ಚಾರಿತ್ರಮಂ ಪ್ರಕಟಿಸುಗುಂ ॥ ೫೯

ಈಸಂಸಾರಾಂಭೋಧಿಯು
ನೀಸುವ ನಿನಗಿದುವೆ[1] ನಾವೆ ತಡಿಗಾಣ್ಬೆಯನಾ ।
ಯಾಸದೊಳ್ ನಿನಗೆ ಮುಕ್ತಿ
ಪ್ರಾಸಾದಮನಡರಲಿವುವೆ ಸೋಪಾನಂಗಳ್ ॥ ೬೦

ಸೂಕ್ತಂ ಭವ್ಯಜನಪ್ರ
ವ್ಯಕ್ತಂ ಜೈನಾಗಮೋಕ್ತಮಿಂ ನಿನಗೆ ಮದೀ ।
ಯೋಕ್ತಮಿದೆರ್ದೆಯೊಳ್ ನೆಲಸುಗೆ
ಮುಕ್ತಿಶ್ರೀಹಾರವಿಭ್ರಮಂ ಸಮ್ಯಕ್ತ್ವಂ ॥ ೬೧

---

1 ಕ.—ಬಗೆಗಿದುವೆ.

ಎಂದೆಂದೊಡಮ್ಮ[1] ನೀನುಂ
ಸಂದೆಯಮಣಮಿಲ್ಲದಿದನೆ ನಂಬಿನಿತಂ ನೀ ।
ನೊಂದಿದ ನಾರೀರೂಪದ[2]
ದಂದುಗದೊಳ್ ತೊಡರ್ದು ಬಿಡದೆ ನಮೆಯುತ್ತಿರ್ಪೈ ॥ ೬೦

ರಮಣೀಜಾತಿಯೊಳಲ್ತಿ ನಂಬಿದವರ್ಗಳ್ ಸಮ್ಯಕ್ತ್ವಮಂ ಪುಟ್ಟರಾ
ರುಮಘೋಭೂಮಿಯೊಳಂತೆ ಮೂಱುಮಮರಾವಾಸಂಗಳೊಳ್ ಪೇಟ್ವೋ ಡಂ।
ತ್ತಮಸಮ್ಯಕ್ತ್ವಫಲಂ ದಗುಂತಿ ಮಗಳೇ ನೀನಿಂತಿದಂ ನಂಬನು
ಕ್ರಮದಿಂದಂ ದೊರೆವೆತ್ತ ಸಪ್ತಪರಮಸ್ಥಾನಂಗಳಂ ಪೊರ್ದುವೈ ॥ ೬೨

ವ॥ ಎಂದತಿಪ್ರೀತಿಯಿಂ ಪ್ರೀತಿಂಕರಾಚಾರ್ಯರ್ ವಜ್ರಜಂಘಾರ್ಯಂಗಂ ಶ್ರೀಮತ್ಯಾರ್ಯೆಗಂ ಶಾರ್ದೂಲಾರ್ಯಾದಿಗಳ್ಗಂ ಮುಕ್ತಿಸಾಮ್ರಾಜ್ಯಪದವಿಗಿದುವೆ ಯುವರಾಜಚಿಹ್ನಮೆನಿಸಿದ ಸೂತ್ರಾನುಗತಮಪ್ಪ ಸಮ್ಯಗ್ದರ್ಶನಮೆಂಬ ಕಂಠಿಕೆಯಂ ಕಂಠಿಕಾಬಂಧನಮಂ ಮಾಡಿ,

ದರ್ಶನಮಘಸಮಿತಿಗೆ ಸ
ದ್ದರ್ಶನದಿಂದಪ್ಪುದಕ್ಕೆ ನಿಮಗಕ್ಕೆ ಪುನ ।
ರ್ದರ್ಶನಮೆಂದಾರಾಧಿತ
ದರ್ಶನರಾಚಾರಣರ್ ನಭಕ್ಕೊಗೆದಾಗಳ್ ॥ ೬೪

ಆದಂಪತಿಗಳ್ ಜೊಮ್ಮನೆ
ಪೋದಂತಿರ್ದವರ ಗಗನತಳಗಮನದೊಳಂ ।
ದಾದ ಬೆಡಂಗಂ ನೋಡಿದ
ರಾದರದಿಂ ತಮ್ಮ ಕಣ್ಬೊಲಂಗಳವಿನೆಗಂ[3] ॥ ೬೫

ವ॥ ನೋಡಿ ತಮ್ಮ ಮನದೊಳವರುಪದೇಶಪರಾನುಗ್ರಹಬುದ್ಧಿಯುಂ ಸನ್ಮಾರ್ಗದರ್ಶನಕೌಶಲಮುಂ ನಿಸರ್ಗಸ್ನೇಹಸಂಬಂಧಮುಮಂತರಂಗದೊಳ್ ತಣ್ಮಲೆಯೆ,

---

[1]ಕ. — ಎಂದೆಂದರಬ್ಬ. [2]ಖ. — ನೊಂದಿದನಾದಿಯರೂಪದ.
[3]ಖ — ಕಣ್ಬೊಣರ್ ದಣಿವಿನೆಗಂ.

ಪರಮತಪೋಧನರ್ ಪುಗುವರೆಂಬುದಸಂಭವಮಲ್ತೆ ಭೋಗಭೂ
ಚರರ ನಿವಾಸಮಂ ಕಿಱಿದು ನಮ್ಮ ಪುರಾತನಪುಣ್ಯಮಿಲ್ಲಿಗಂ ।
ಬರಿಸಿದುದೀಮುನೀಶ್ವರರನೀಯುಪದೇಶದಿನಾದುದುಗ್ರಸಂ
ಸರಣಮಹಾಸಮುದ್ರತರಣಂ ಚರಣಂ ಶರಣಂ ಮುನೀಂದ್ರರಾ॥ ೬೬

ಮುನ್ನ ಮಹಾಬಳನಾದಂ
ದೆನ್ನಂ ಪ್ರಿಯಸಚಿವನಾಗಿ ಸಂಬೋಧಿಸಿ ಮಾ ।
ನೋನ್ನತರೀಗಳುಮೆಮ್ಮುಱೊ
ಳೆನ್ನಂ ಸಮುಱ್ಕೆ ಬಂದರಿಂತುಟ ಮೋಹಂ ॥ ೬೭

ಕಾಮಸುಖೋಚಿತಮತಿಗಳ್
ನಾವೆತ್ತ ಮುಮುಕ್ಷುವೃತ್ತಿಯಂ ತಾಳ್ದದವರ್ ।
ತಾವೆತ್ತಂತುಮನುಗ್ರಹ
ಮೀಮುನಿಪತಿಗೆಮ್ಮೊಳಾಯ್ತಿದೇಂ ವಿಸ್ಮಯಮೋ ॥ ೬೮

ವಾಮಂ ಕರತಳಮದು ಕೆಂ
ದಾಮರೆಯರಲನಿಪುದುಚಿತಪರ್ಯಂಕದೊಳು ।
ದ್ದಾಮಮುಪದೇಶಹಸ್ತಮ
ವಾಮಂ ಮಾರ್ದವಮನಭಿನಯಿಪ್ಪುದು ಮುನಿಯಾ ॥ ೬೯

ವ॥ ಎಂದು ತದ್ಗಗನಚಾರಣಮುನಿಗುಣಮಣಿಹಾರಮನಾತ್ಮೀಯಹೃದಯದೊಳನಿಬರುಂ ತಾಳ್ದಿ ಸಮ್ಯಗ್ದರ್ಶನಮನಸ್ಖಲಿತಮಾರಾಧಿಸಿ ಪಲ್ಯೋಪಮತ್ರಯಾಯುಷ್ಯಾವಸಾನದೊಳೋಷಧಿಗಳಂತೆ ಫಳಪಾಕಾಂತದೊಳ್ ಕ್ಷುತವಿಜೃಂಭಣವ್ಯಾಜದಿಂ ಲೋಕಾಂತರಿತರಾಗಿ,

ಮನೆಯಿಂದಂ ಮನೆಗೆಂದು ಪೋಪ ತೆಱದಿಂ ಮೋಹ ಸೂಸೆ ಪಾಸೆಂಬ ಮಾ
ತಿನ ಪಾಂಗಿಂದನಿತುಂ ಯುಗಂ ತಳರ್ದು ತದ್ಭೋಗಾವನೀಭಾಗದೊಳ್ ।
ತನುಗಳ್ ವೈಕ್ರಿಯಕಂಗಳಂತೆ ಕರಗುತ್ತಿರ್ಪನ್ನೆಗಂ ಪುಣ್ಯಸಂ
ಜನಿತೈಶ್ವರ್ಯದಿನಿಂತು ಬಂದು ನೆಲಸಿತ್ತೀಶಾನಕಲ್ಪಾಗ್ರದೊಳ್ ॥ ೭೦

ವ॥ ಅಲ್ಲಿ ವಜ್ರಜಂಘಾರ್ಯಂ ಸುರತಸುಖನಿವಾಸದೊಳ್ ಶ್ರೀಪ್ರಭವಿಮಾನದೊಳ್ ಶ್ರೀಧರನೆಂಬದೇವನಾದಂ, ಶ್ರೀಮತ್ಯಾರ್ಯೆಯುಂ ಸಮ್ಯಕ್ತ್ವ

ಮಾಹಾತ್ಮ್ಯದಿಂ ಸ್ತ್ರೀರೂಪಮಂ ಪತ್ತುವಿಟ್ಟು ತತ್ಸ್ವಯಂಪ್ರಭವಿಮಾನದೊಳ್ ಶ್ರೀಧರಂಗೆ ಸಾಮಾನಿಕದೇವಂ ಸ್ವಯಂಪ್ರಭನೆಂಬ ದಿವಿಜನಾದಂ ಶಾರ್ದೂಲಾರ್ಯನುಂ ಚಿತ್ರಾಂಗವಿಮಾನದೊಳ್ ಚಿತ್ರಾಂಗದಾಮರನಾದಂ; ವರಾಹಾರ್ಯನುಂ ನಂದನವಿಮಾನದೊಳ್ ಮಣಿಮುಕುಟಕೇಯೂರಮಣಿಕುಂಡಲವಿಭೂಷಣನಾಗಿ ಮಣಿಕುಂಡಲನೆಂಬೊಂ ದಿವಿಜನಾದಂ; ವಾನರಾರ್ಯನುಂ ನಂದ್ಯಾವರ್ತವಿಮಾನದೊಳ್ ಸುರನಾರೀಮನೋಹರಂ ಮನೋಹರನೆಂಬನಿಮಿಷನಾದಂ; ನಕುಳಾರ್ಯನುಂ ಪ್ರಭಾಕರವಿಮಾನದೊಳ್ ಮನೋರಥಾವಾಪ್ತದಿವ್ಯಭೋಗಂ ಮನೋರಥನೆಂಬ ಕಲ್ಪಜನಾದಂ, ಇಂತಿನಿಬರುಂ ಸಹಾಯರೊಡನೆ,

ನಯನಾನಂದವಿಳಾಸರೂಪನಮರೀನೀಲಾಲಕಾಲೀಢಪಾ
ದಯುಗಂ ತತ್ಕುಚಕೂಟಘಟ್ಟಿತವಿಶಾಲೋರಸ್ಸ್ಥಲಂ ಸ್ವರ್ಗಲ |
ಕ್ಷ್ಮಿಯ ಮೇಲಕ್ಕುಱೊಳಂದದೇಂ ನಲಿದನೋ ಸಂಭೋಗಸಮ್ಮರ್ದನಿ
ರ್ದಯನಿಷ್ಪೀಡಿತದೇವವಾರವನಿತಾಬಿಂಬಾಧರಂ ಶ್ರೀಧರಂ || ೩೧

ವ|| ಒಂದು ದಿವಸಮಾದೇವನವಧಿಬೋಧದಿಂ ಪ್ರೀತಿಂಕರಾರ್ಯರ[1]ಕೇವಲಜ್ಞಾನೋತ್ಪತ್ತಿಯನಱಿದು ದೇವನಿಕಾಯದೊಡನನೇಕವಿನೋದದೊಳಪೂರ್ವ[2]ಪ್ರಭೆಯಂ ತಾಳ್ದಿರ್ದುತ್ತುಂಗಶ್ರೀಪ್ರಭಾಚಳಕ್ಕೆಪೋಗಿ,

ವಿವಿಧಾರ್ಚನೆಗಳನರ್ಚಿಸಿ
ವಿವಿಧಸ್ತುತಿಶತಸಹಸ್ರದಿಂ ಸ್ತುತಿಯಿಸಿ ಬಂ |
ದವನತಮುಕುಟಂ ಶ್ರೀಧರ
ದಿವಿಜಂ ಬೆಸಗೊಂಡನಖಿಳಭವಭಯಹರನಂ || ೩೨

ಪ್ರೀತಿಂಕರ ಶಂಕರ ವಿ
ದ್ಯಾತಿಶಯನಿಧಾನ ನಿನ್ನ ದಯೆಮೆರೆಸಿದತಿ |
ಪ್ರೀತಿಯೊಳಾನತ್ಯುತ್ತಮ
ಜಾತಿಗಳೊಳ್ ಪುಟ್ಟಿ ಸುಖಮನುಣುತುಂ ಬಂದೇಂ || ೩೩

---

[1]ಗ.—ಪ್ರಿಯಂಕರಾಚಾರ್ಯರ. [2]ಗ.—ದೇವನಿಕಾಯವೊಡವರೆಯುತಿವರ್ಪಿನೊಳಪೂರ್ವ; ಕ.—ದೇವನಿಕಾಯಸಹಿತಂಬಂದವರಿರವಿನೆಳೊಳಪೂರ್ವ.

ಆನೆಂಬಿರಚರನಾದಂ
ದಾನಾಲ್ವರೊಳಲ್ಲಿ ಮೂವರುಂ ಮಂತ್ರಿಗಳ್ಂ ।
ತೇನಾದರಖಿಳಮಿಥ್ಯಾ
ಜ್ಞಾನಾವೃತಚರಿತರುಚಿತಪರಹಿತಚರಿತಾ ॥ ೨೪

ಬೆಸಸೆನೆ ದಿವಿಜನ ಮನದೊಳ್
ಪಸರಿಸಿದ ತಮಸ್ತಮಂ ತೆರಳ್ದಿರೆ ಪರಮಂ ।
ಬೆಸಸಿದನಾಗಳ್ ಭವ್ಯ
ಪ್ರಸಾದಕರನಿಜವಚೋಂಶುಗಳ್ ಬೆಳಗುವಿನಂ ॥ ೨೫

ಸಂಭಿನ್ನಮಹಾಮತಿಗಳ್
ಗಂಭೀರನಿಗೋದದೊಳ್ ತಮೋಮಯದೊಳ್ ದುಃ ।
ಖಾಂಭೋಧಿಯ ಕಡೆಗಾಣದೆ
ಜೃಂಭಿತದುಷ್ಕರ್ಮದಿಂದೆ ನವೆದಪರಿನ್ನುಂ ॥ ೨೬

ಶತಮತಿ ಮಿಥ್ಯಾಜ್ಞಾನಾ
ವೃತಮತಿ ಸಂದಂ ದ್ವಿತೀಯನರಕಕ್ಕೀಸಂ ।
ಸ್ಮೃತಿಯೊಳ್ ಧರ್ಮಾಧರ್ಮ
ಸ್ಥಿತಿಯೆ ವಲಂ ಸ್ವರ್ಗನರಕಸುಖದುಃಖಕರಂ ॥ ೨೭

ಧರ್ಮಮಮರೇಂದ್ರಗತಿಯನ
ಧರ್ಮಮಧೋಗತಿಯನೆಸಗುಮೆಸಕದೊಳೀಗುಂ ।
ಧರ್ಮಾಧರ್ಮಕ್ರಿಯೆಗಳೆ
ನೆರ್ಮಂ ಜೀವಕ್ಕೆ ಮನುಜಗತಿಯೊಳೆ ಮಾಳ್ಕುಂ ॥ ೨೮

ಪುಸಿಯದುದು ಪರಾಂಗನೆಗಾ
ಟಿಸದುದು ಕೊಲ್ಲದುದು ಮೋಹಮಿಲ್ಲದುದಱಿವಂ ।
ಪೊಸಯಿಸುವುದು ವೈರಾಗ್ಯದ
ದೆಸೆಗೆಸಪುದು ಧರ್ಮಮದಱ ತಡೆವುದಧರ್ಮಂ ॥ ೨೯

ಮಾಂಸಮಧುಮದ್ಯಸೇವನೆ
ಹಿಂಸಾರುಚಿ ಪರಮಜಿನಮತಾರುಚಿ ಕುಲಟಾ ।

ಸಂಸರ್ಗಮೆಂಬಿವಲ್ಲದೆ
ಸಂಸಾರಭ್ರಮಣಕಾರಣಂ ಪೆಱವೊಳವೇ ॥ ೮೦

ಕಳಿಪಂ ಕಳ್ವನಗುರ್ವು ಪರ್ವೆ ಕೊಲಿಪಂ ಕೊಲ್ವಂ ಪರಸ್ತ್ರೀಯುರಂ
ಕೊಳಿಪಂ ಕೊಳ್ವನೆನಿಪ್ಪ ಪಾಪಿಯುಮತಿಕ್ರೂರಾತ್ಮನುಂ ಸಾಧುಸಂ।
ಕುಳಮಂ ಕಂಡೊಡೆ ಕಾಯ್ವನುಂ ಪೞಿವನುಂ ಧರ್ಮಕ್ಕತಿದ್ರೋಹನುಂ
ಖಳನುಂ ಕಳ್ಳುಣಿಯುಂ ಘುಳುವಮ್ಮನಿೞಿಗುಂ ಶ್ವಭ್ರಾಂತಮಂ ತಾಪಿನಂ।೮೧

ವ॥ ಆನರಕಂಗಳುಂ ರತ್ನಶರ್ಕರಾವಾಳುಕಾಪಂಕಧೂಮತಮೋಮಹಾತಮಃಪ್ರಭಾನಾಮಮುಂ ತಾಳ್ದುವವಱೊಳ್,

ಮೇಗಣ ನಾಲ್ಕಱೊಳೈದಱ
ಮೇಗಣ ಭಾಗದೊಳಗುರ್ವ ಘರ್ಮಂ ಹಿಮದಿಂ ।
ದಾಗಳೆ ಮುರುಂಟುವರ್ ಮಹಿ
ಭಾಗದೊಳುೞಿದವಱೊಳನ್ನವೇೞುಂ ನರಕಂ ॥ ೮೨

ವ॥ ಮತ್ತವಱೊಳನುಕ್ರಮಂದಪ್ಪದೆ,

ಮೂವತ್ತಿರ್ಪತ್ತೈವ
ತ್ತಾವಗೆ ಪದಿನೈದು ಪತ್ತು ಮೂಱೈಯ್ದೂನಂ ।
ಭಾವಿಪ್ಪೊಡಿಂತಿವು ಲಕ್ಕಗ
ಳೀವ್ರೊಗೆಬ್ವಿದೊ ಬೞಿಯಮೆಯ್ದೆ ನರಕಬಿಲಂಗಳ್ ॥ ೮೩

ವ॥ ಆಬಿಲಂಗಳುಮಿಂದ್ರಕಶ್ರೇಢೀಬದ್ಧಪ್ರಕೀರ್ಣಕಂಗಳೆಂದು ಮೂಱುತೆಱನಕ್ಕುಂ. ಅವಱ ಮೇಗಣಟ್ಟುಗಳೊಳಿಟ್ಟ ಜೇನ ಪುಟ್ಟಿಗಳನನುಕರಿಸುವತಿರೌದ್ರ[1]ಬೀಭತ್ಸಕುತ್ಸಿತೋತ್ಪತ್ತಿಸ್ಥಾನಂಗಳೊಳ್ ಕೃಷ್ಣನೀಲಕಪೋತಲೇಶ್ಯಾಬಹ್ವಾರಂಭಪರಿಗ್ರಹತ್ವಾದ್ಯಶುಭಪರಿಣಾಮಂಗಳಿಂ ಜೀವಂ ನೆಲಸಿ ಬೞಿಯಮಂತರ್ಮುಹೂರ್ತದೊಳಾಹಾರಶರೀರೇಂದ್ರಿಯೋಚ್ಛ್ವಾಸಭಾಷಾಮನಃಪರ್ಯಾಪ್ತಿಗಳೊಳ್ ನೆರೆದು,

---

[1]ಗ.—ನುಕರಿಸುವ ಬಟ್ಟೆಯ ನಾಯ ತೋಳನ ಬಳ್ಳುವಿನ,
ನರಿಯಾಕಾರದ ಪೆರವುಮತಿರೌದ್ರ.

ಕೊಟ್ಟಸುಗಟ್ಟುಗಳಿಂದಂ
ತೊಟ್ಟನೆ ಪಱಿಪಟ್ಟು ಬೀೞ್ವವೊಲ್ ಬಿರ್ದರ್ ನಭಂ।
ಮುಟ್ಟೆ ಸಿಡಿಲ್ದೆಡೆಗಿಡುವಿನ
ನೆಟ್ಟಿದ ಕೈದುಗಳ ಮೇಲೆ ಬಿರ್ದನನಾಗಳ್॥ ೮೪

ಮನದೊಳ್ ಮುನಿಸೊದವೆ ಪುರಾ
ತನನಾರಕರೇವದಿವನನಿಱಿ ತಱಿ ಕೊಲ್ ಮೆಲ್।
ಎನೆ ಬಗೆದು ಬಗೆದು ಮನದೊಳ್
ಜನಿಯಿಸುಗುಮವಂಗೆ ಖಳವಿಭಂಗಜ್ಞಾನಂ॥ ೮೫

ವ॥ ಅಂತು ಪುಟ್ಟಿದ ವಿಭಂಗಜ್ಞಾನದಿಂದಪಗತನರಕಲೋಕವೃತ್ತಾಂತರಾದಿಂಬೞಿಯುಮೇರೋರ್ವ್ವರ ನೆಱಂಗಳುಮನನ್ಯೋನ್ಯವೈರಕಾರಣಂಗಳುಮನುಗ್ಘಡಿಸಿತ್ತಮೇರೊರ್ವ್ವರೋರೊರ್ವ್ವರನಿಕ್ಷುಯಂತ್ರಂಗಳೊಳ್ ಕಬ್ಬಂ ಪಿೞಿವಂತೆ ಪಿೞಿವರುಂ, ಕಾಯ್ದ ವಜ್ರಮೂಷೆಯೊಳಿಕ್ಕಿ ಲೋಹಮಂ ಕರಗಿಸುವಂತೆ ಕರಗಿಸುವರುಂ, ಬಾಪೆವಾಟೆ ತಿದಿಯುಗಿವರುಂ, ಮಿಡುಮಿಡುಕೆ ಬಡಿತಂಗಾಸುವರುಂ, ನೋಡೆ ನೋಡೆ ಕಣ್ಗಳಂ ಮಿಂಟುವರುಂ, ನುಡಿಯೆ ನುಡಿಯೆ ನಾಲಗೆಯಂ ಪಿಡಿದು ಪೆಡತಲೆಯಿಂದುರ್ಚುವರುಂ, ಕಾಯ್ದ ಕರ್ಬೊನ್ನ ಸೂಜಿಗಳಂ ಬೆರಲ್ಗಳೊಳ್ ಬೆಟ್ಟುವರುಂ, ನಟ್ಟು ಪರಗುವರುಂ, ತಳ್ತಳನೆ ಕುದಿವ ಕರ್ಬೊನ್ನ ಕಾಯ್ಗೊಂಡೆಣ್ಣೆಯೊಳ್ ಬಳಲೆ ತೆಗಪುವರುಂ, ಪಸಿಯತೊವಲ ತಿದಿಯೊಳ್ ಪುದಿದು ಪುಟಪಾಕಂಸುಡುವರುಂ, ಕಾಯ್ದ ಕಾವಲಿಗಳೊಳ್ ಪೆರ್ಮರನಾಗೆ ತಾಳಿಸುವರುಂ, ಕೂಟಶಾಲ್ಮಲಿಗಳನಡರವೇೞ್ದಿದಿರಂ ಬೞಿಯನುರ್ಚುವರುಂ, ಉರಿವ ಕೈದೀವಿಗೆಗಳೊಳ್ ಮೊಗಮಂ ಚುರ್ಚುವರುಂ, ಬಳ್ಳನುರಿವ ಪುಣ್ಗಳೊಳ್ ಕ್ಷಾರವಾರಿಗಳನೆಱೆದೊರಸಿ ಕರ್ಚುವರುಂ, ಅಂತುಮಲ್ಲದೆಯುಂ,

ಅಡಗಿನ ಬಸನಿಗನೈ ತಿನ್
ಪಿಡಿಯೆಂದವನಡಗನವನ ಬಾಯೊಳ್ ಗಿಡಿವರ್।
ಕುಡಿ ಕಳ್ಳನೆಂದು ಕರಗಿಸಿ
ಕುಡಿಯಿಸುವರ್ ಲೋಹರಸಮನೆರ್ದೆಗರಗುವಿನಂ॥ ೮೬

ಪುಸಿಬಸನವೆಂದು ಕೆಲಬರ್
ಕುಸಿವರ್ ನಾಲಗೆಯನಿಕ್ಕುಪೊಳ್ ಪರವಧುದು ।
ವ್ಯಸನಂ ನಿನಗೆಂದಮರ್ದ
ಪ್ಪಿಸುವರ್ ಕೆಂಪೆಸೆಯೆ ಕಾಯ್ದಯಃಪುತ್ರಿಕೆಯಂ ॥ ೮೭

ವ॥ ಅಂತು ಸದ್ಯಸ್ಸಂತಾಪಿತಲೋಹಪುತ್ರಿಕಾಪರಿರಂಭಸಂಭೃತಪ್ರ್ಲೋಷಜಲಜ್ವಾಂಗಳಗಳದ್ರುಧಿರವಿಚಳದಸ್ಥಿನಿರ್ಯನ್ಮಜ್ಜಾಶುಷ್ಯತ್ಕಂಠಸ್ವಿದ್ಯದ್ವದನನಿಮೀಳನ್ನೇತ್ರಸೀದದ್ಗಾತ್ರಮುಹ್ಯನ್ಮಾನಸಾಕ್ರಂದತ್ಸ್ವರಪರಿಗತರ್ ಸೈರಿಸಲಾಱದೆ ತಡತಡಿಸಿ ಪರಿತಂದತಿದ್ರುತಪ್ರವಾಹದಿನಾರುಷ್ಕರದ್ರವಾವರ್ತಗರ್ತಗಂಭೀರೆಯಂ ಗಂಭೀರನಾರಕಭೀಷಣಮಕರಮುಖಕುಹರನಿಪತಿತಾಕ್ರಂದದಾರ್ತಪರುಷಸ್ವರವಿರಸಭಯಂಕರೆಯಂ ಭಯಂಕರಶಿಂಶುಮಾರವಿಕಟದಂಷ್ಟ್ರಾಕ್ರಕಚಪಾಟ್ಯಮಾನನಾರಕನಿಕರರುಧಿರಚ್ಛಟಾಚ್ಛುರಣಾರುಣಿತಸಲಿಲಲಹರಿಕಾನಿಕರಕರಾಳೆಯಂ ಕರಾಳನಕ್ರಚಕ್ರಚರ್ವಿತನಿಕೀರ್ಣನಿರಯಜನಿಕುರುಂಬಶಲ್ಯಶಕಲಪರಿಪೂರಿತಧವಳಪ್ಲವದುರ್ನಿರೀಕ್ಷಣವಿಷಮೆಯಂ ವಿಷಮಕರೋರಕರ್ಮಘರ್ಮನಿರ್ಭರೋಚ್ಛ್ವಾಸಭರದ್ವಿಲಧೀಭವದಂಭಃಪ್ರಕಟಿತಾಗಾಧರಂಧ್ರಾವರ್ತಮಾನಜಳಚರಸಂಚರಣವಿಸ್ಮಯನೀಯಭಯಾನಕೆಯಂ ಭಯಾನಕೋಭಯತಟಗುಹಾಗಹ್ವರನಿರ್ಯಜ್ಜರದಜಗರಗಳಗಳಿತಗರಳಶಬಳಿತಸಲಿಲಪ್ರವಾಹೆಯಂ ಪ್ರವಾಹಾತ್ಯುಷ್ಣತಾಪಹಸಿತಪ್ರಳಯಕಾಲಪ್ರೌಢತರತರಣಿಯಂ ವೈತರಣಿಯಂ ಪೊಕ್ಕಾಗಳ್,

ಸುಡುವುದು ನಂಜುನೀರ್ ಪಿಡಿದು ನುಂಗುವುವಲ್ಲಿಯ ಮಿಂಗಳೆತ್ತಮೋ
ರಡಿ ಮಿಡುಕಲ್ಕೆ ಬಾರದೆಮಗಾರ್ ಶರಣೆಲ್ಲಿಗೆ ಪೋಪೆವೆಂದು ಮೆ ।
ಳ್ಪಡಿಸಿಸಿಪತ್ರನಂದನಮನೊಯ್ಯನೆ ಸಾರ್ದುಮಲ್ಲಿ ಮೈಯೊಳ
ರ್ದಿಡುವುವು ಪತ್ರಪುಷ್ಪಫಲಸಂಕುಳದಂದದ ಶಸ್ತ್ರಕೋಟಿಗಳ್ ॥ ೮೮

ವ॥ ಅಂತು ಶಾರೀರಮಾನಸಕ್ಷೇತ್ರಜಪರಸ್ಪರೋದೀರಿತದನುಜೋದೀರಿತಂಗಳೆಂಬಯ್ದುಂ ತೆಱದ ದುಃಖಂಗಗಳೊಳರ್ದು ನಿಮಿಷಮಾತ್ರಮುಪ್ಪೊಡಮುಸಿರ್ಪೊತ್ತಂ ಪಡೆಯದೆ,

॥ ಮಾ ಲಿ ನಿ ॥

ನರಕನಗರಲಗ್ನಾಕಸ್ಮಿಕಾಗ್ನಿಸ್ಫುಲಿಂಗ
ಸ್ಫುರದವಿರಳಲಾಕ್ಷಾಗೇಹಪೂರ್ವೈಕಭಾವ ।
ತ್ವರಿತವಿಕಳದಸ್ಥಿಗ್ರಂಥಿಸಂಸ್ಥಾನಬಂಧರ್
ಖರಪರುಷನಿನಾದರ್ ನಾರಕರ್ ಬರ್ದುಗಿರ್ಪರ್ ॥ ೮೯

ವಾನರವಾರಣೋಷ್ಟ್ರಖರಮರ್ತ್ಯಕಳೇವರಪೂತಿಗಂಧಮೋ
ನೇನೊಳವುಳ್ಳುವೊಂದೆಡೆಗೆ ಬಂದುಮಿವಂದಿರ ಮೆಯ್ಯ ಗಂಧಮು ।
ದ್ಧಾನಿಗೆ ವಾರದೆಂಬಿನಮದೇಂ ನೆಱೆ ಪೋಲ್ತುದೊ ಹುಂಡಹುಂಡಸಂ
ಸ್ಥಾನದೆ ಗುಂಡುದೀವಿದ ತಡಂಗಮನಂಗದ ಪಾಂಗಮಂದಿರಾ ॥ ೯೦

ದೊರೆಕೊಂಡ ಕೃಷ್ಣಲೇಶ್ಯಾ
ಪರಿಣಾಮಮೆ ಕೃಷ್ಣವರ್ಣಮಂ ಪುಟ್ಟಿಸಿದಂ ।
ತಿರೆ ಕರಿಕರ್ ಪೇಡಿಗಳತಿ
ಪರುಷಸ್ವರಪರುಷನಯನಪರುಷಶರೀರರ್ ॥ ೯೧

ಏಱೆ ಧನು ಮೂಱುಮೆಱಿನಿಂ
ಪೇಱೆ ಷಡಂಗುಲಮೆ ಮೊದಲ ನಾರಕರೊಡಲಂ ।
ತೇಱುವರಂ ತದ್ದ್ವಿಗುಣಂ
ಸೂಱೊಳ್ ನಾರಕರ ಕಠಿನದೇಹೋತ್ಸೇಧಂ ॥ ೯೨

ಮೊದಲಿಂದಂ ತುದಿಯೆಯ್ದೆ ಸಂದ ನರಕಾಯುಷ್ಯಾಬ್ಧಿ ಕೇಳೊಂದು ಮೂ
ಱಿದಱಿಂದಂ ಬೞಿಕೇೞು ಪತ್ತು ಪದಿನೇೞಿರ್ಪತ್ತಿರಟ್ಟೊಱು ಪೆ ।
ರ್ಚಿದ ಮೂವತ್ತನೆ ತಮ್ಮ ಮುಂ ನೆರಪಿದಾಯುಷ್ಯಂಬರಂ ಮಾಯುಮಾ
ಗದು ಮೆಯ್ಸಣ್ಣಿಗೆಯೊಳ್ ಮಗುೞ್ದೊಡಮೇಂದುಃಖಕ್ಕವರ್ನೋಂತರೋ

ಕ್ರಮದೊಳಸನ್ನಿಯಿಂ ಸರಿಸೃಪಾವಳಿಯುಂ ವಿಹಗಾಳಿಯುಂ ಭುಜಂ
ಗಮತತಿಯುಂ ಮೃಗಾರಿಗಣಮುಂ ಲಲನಾಜನಮುಂ ಮನುಷ್ಯಮು ।
ಸ್ತ್ರಮಿಕುಳಮುಂ ಹಿಮಾಂಶುನಯನಾಗ್ನಿಕಷಾಯಹೃಷೀಕಷಣ್ಮುನಿ
ಕ್ರಮನರಕಂಗಳೊಳ್ ನೆಲಸುಗುಂ ದಿವಿಜೋತ್ತಮ ನಂಬು ನೀನಿದಂ ॥ ೯೪

ವ॥ ಮುನ್ನೆ ನಿನ್ನೆ ಬೆಸಗೊಂಡ ಶತಬುದ್ಧಿಯುಮತ್ಯಂತಪಾಪಬುದ್ಧಿ ಯಿಂದಮಿಂತುಟಪ್ಪ ದುಃಖಮನೆರಡನೆಯ ನರಕದೊಳನುಭವಿಸಿದಪ್ಪನೆಂ ಬುದುಂ ಶ್ರೀಧರಾಮರನತ್ಯಂತಧರ್ಮಸಂವೇಗಪರಾಯಣನಾಗಿ ಸರ್ವಾಂಗಾ ಲಿಂಗಿತಮಹೀತಳಂ ಗುರೂಪದೇಶದಿಂದಾತನಂ ಪ್ರತಿಬೋಧಿಸಲಲ್ಲಿಗೆ ಪೋಗಿ,

ಅಱಿಯಮೆ ತಿಣ್ಣಂ ನಿನಗೇ
ನಱಿವೋ ಮಹಾಬಳನೆ ನಿನ್ನನೆಲೆ ಶತಮತಿ ನಿ।
ನ್ನಱಿಯಮೆಯೆ ನಿನ್ನನಿನಿತಂ
ಮಱುಗಿಸಿದುದು ಪಾಪಕರ್ಮ ನೀಂ ಕಂಡುಂಡೈ ॥ ೯೫

ಇನ್ನುಂ ನಿಜಮಿಥ್ಯಾಜ್ಞಾ
ನೋನ್ನತಿಯುಂ ಬಿಸುಟು ನಂಬು ಸಮ್ಯಕ್ತ್ವಮನಿಂ।
ತೆನ್ನನೆ ಕಂಡಿಂ ತಿಳಿಯೆನೆ
ಸನ್ನುತಸಮ್ಯಕ್ತ್ವರತ್ನಮಂ ಕೈಕೊಂಡಂ ॥ ೯೬

ವ॥ ಕೈಕೊಂಡು ಕಾಲಾಂತರದಿಂದಾನರಕದಿಂದಾತಂ ಬಂದು ಪುಷ್ಕರವರ ದ್ವೀಪದ ಪೂರ್ವಮಂದರದ ಪ್ರಾಗ್ವಿದೇಹದ ಮಂಗಳಾವತೀವಿಷಯದ ರತ್ನ ಸಂಚಯಪುರಮನಾಳ್ವ ಮಹೀಧರಂಗಂ ತತ್ಸೌಂದರಿ ಸಾಂದರಿಗಂ ಜಯಸೇ ನನೆಂಬ ಮಗನಾಗಿ ಪುಟ್ಟಿ, ವಿವಾಹಸಮಯದೊಳ್ ತನ್ನನಾಶ್ರೀಧರದೇವನೇ ಬಂದು ಮಗುಳ್ದುಂ ಮೂದಲಿಸೆ, ಯಮಧರಗುರುಗಳ ಪಾದಮೂಲದೊಳ್ ದುಶ್ಚರತಪಶ್ಚರಣಪರಾಯಣಂ ಜೀವಿತಾಂತ್ಯದೊಳ್ ಸಮಾಹಿತಚಿತ್ತನಾಗಿ,

ಪಡೆದಂ ಬ್ರಹ್ಮೇಂದ್ರತೆಯಂ
ಗಡಮಾತಂ ಬಗೆದು ನೋಡೆ ನಾರಕನೆತ್ತಲ್।
ಗಡ ದೇವನೆತ್ತ ಕರ್ಮಮೆ
ಕಡುಬಲ್ಲಿತ್ತದಱ ತಿರಿವದೇಂ ಬಹುವಿಧಮೋ ॥ ೯೭

ವ॥ ಅನ್ನೆಗಂ,

ಉಪಕಾರಸ್ಮರಣಾ ಮನ
ಕ್ಕೆ ಪುಟ್ಟೆ ತದ್ದಿವಿಜವಲ್ಲಭಂ ಶ್ರೀಧರನಂ।

ನಿಪುಣಂ ಪೂಜಿಸಿದಂ ಗಡ
ಮುಪಕಾರಮನಱಿಯದಾತನುಂ ಮಾನಸನೇ ‖ ೯೮

ವ‖ ಅನ್ನೆಗಂ,

ದಿವಿಜವನಿತಾಸವಿಭ್ರಮ
ಧವಳಾಪಾಂಗಮೆ ನಿಜಾಯುರಂಭೋನಿಧಿಯಂ ।
ತವೆ ಪೀರ್ದುದೆನಿಸೆ ತೊಟ್ಟನೆ
ದಿವದಿಂದಂ ಶ್ರೀಧರಂ ಪರಿಚ್ಯುತನಾದಂ ‖ ೯೯

ವ‖ ಆಗಿ ಜಂಬೂದ್ವೀಪದ ಪೂರ್ವವಿದೇಹದ ವತ್ಸಕಾವತೀವಿಷಯದ ಸುಸೀಮಾನಗರಮನಾಳ್ವ ಸುದೃಷ್ಟಿಮಹೀಪಾಳಂಗಂ ಸೌಂದರಸುನಂದಾಮಹಾದೇವಿಗಂ,

ತವೆ ನೋಡಲ್ ನೋಡಿ ಮೆಚ್ಚಲ್ ಮನದೊಳಸದಳಂ ಮೆಚ್ಚಿ ನಾನಾವಿಶೇಷ
ಸ್ತವದಿಂದಂ ಕೀರ್ತಿಸಲ್ಕತ್ತಳಗಮಮರನಾಥಂಗಮೆಂಬನ್ನೆಗಂ ರೂ ।
ಪವಿಳಾಸಶ್ರೀಯೊಳಾಶ್ರೀಧರನಧಿಕಯಶಶ್ರೀಧರಂ ಪುತ್ರನಾದಂ
ಸುವಿಧಿಶ್ರೀನಾಮದಿಂದಂ ಸುಕವಿಜನಮನೋಮಾನಸೋತ್ತಂಸಹಂಸಂ ‖ ೧೦೦

ಪ್ರಿಯಪುಷ್ಪಸ್ತಬಕಂಗಳಿಂ ತುಱುಗಿದೊಂದಿಮ್ಮಾವನತ್ಯಂತಕಾಂ
ತಿಯೊಳಾಶಾಂತರಮೆಲ್ಲಮಂ ತೊಳಪ ಸಂಪೂರ್ಣೇಂದುವಂ ತನ್ನ ಶೋ ।
ಭೆಯ ತನ್ನುಜ್ಜ್ವಳಕಾಂತಿಯೊಂದುವಿಭವಂ ಗೆಲ್ವನ್ನೆಗಂ ಯೌವನೋ
ದಯದೊಳ್ ನೋಡಿದರಂ ಮನಂಗೊಳಿಸಿದಂ ಸಂಸಾರಸಾರೋದಯಂ ‖ ೧೦೧

ಗ‖ ಇದು ದೇವೇಂದ್ರಮುನೀಂದ್ರವಂದ್ಯಪರಮಜಿನೇಂದ್ರಮುಖ
ಚಂದ್ರವಾಕ್ಚಂದ್ರಿಕಾಪ್ರಸರಪ್ರಸಾದೋದೀರ್ಣಸೂಕ್ತಿ
ಕಲ್ಲೋಲಮಾಲಾಕೀರ್ಣಕವಿತಾಗುಣಾರ್ಣವ
ಪ್ರಣೀತಮಪ್ಪಾದಿಪುರಾಣದೊಳ್
ಸುವಿಧಿಮಹಿಮೋತ್ಪತ್ತಿ ವರ್ಣನಂ
ಪಂಚಮಾಶ್ವಾಸಂ
ಸಂಪೂರ್ಣಂ.

ಶ್ರೀಯುಂ ಸೊಗಯಿಸುವ ವಣಿಕ[1]
ಶ್ರೀಯುಂ ತನ್ನೀಕ್ಷೆಯೊಳ್ ಪ್ರಾಪಿಸ್ಸೆಸೆಯೆ ಯುವನಾ!
ಶ್ರೀಯುವನೇಂ ಸುಭಗನಾಯಾ
ಶ್ರೀಯುವುನಾಂತನೊ ಸರಸ್ವತೀವರ್ಣಿಹಾರಂ ೧

ನೆಗೞ್ದ ಭಯಕ್ಷೀಷಕಶ್ರೀಯು
ಮಗಳ್ ಮನೋರಮೆಯು ಮದುವೆಗಂ ರಾಜ್ಯಂ ಪ!
ತ್ತುಗೆಗಂ ಗುರೂಪರೋಧ
ಕ್ಕಗಿವು ಮನಂದಂಪನಾ[2] ಜಿತಾತ್ಮನೊ ಪುರುಷಂ ೨

ವ॥ ಅಂತಗಣ್ಯಪುಣ್ಯಾಸ್ಪದನೆನಿಸಿದ ಸುವಿಧಿಗವನಾತನ ಮನೋರಮೆ ಮನೋರಮೆಗಂ ಶ್ರೀಮತೀಚರನನೆನಿಸಿದಾಸ್ವಯಂಪ್ರಭದೇವಂ ದೇವಲೋಕದಿಂದವತರಿಸಿ,

ಪ್ರಿಯವನಿತಾಚರನೆ ಗಡಂ
ಪ್ರಿಯತನಯಂ ಕೇಶವಾಂಕನಾದನಿದೇಂ ವಿ।
ಸ್ಮಯಕರವೊ ಸಂಸೃತಿಸ್ಥಿತಿ
ಬಯಸುವುದೆಂತಯ್ಯೋ[3] ಪೇೞಿವಿಂತಪ್ಪುದುಮಂ ॥ ೩

ವ॥ ಮತ್ತಮಾವಿಷಯದೊಳ್ ಶಾರ್ದೂಲಚರನಪ್ಪ ಚಿತ್ರಾಂಗದೇವಂ ದೇವಲೋಕದಿಂದವತರಿಸಿ ಬಂದು ಸವಮಾನಪುಣ್ಯಾತ್ಮಂ ಕಾರಣಮಾಗಿ ಸುವಿಧಿಸಮಾನನಪ್ಪ ಮಂಡಳಿಕಂ ವಿಭೀಷಣಂಗಂ ಪ್ರಿಯದತ್ತೆಯೆಂಬ ತತ್ಪ್ರಿಯ ಲಲನೆಗಂ ವರದತ್ತನೆಂಬೊಂ ಮಗನಾದೊಂ; ವರಾಹಾರ್ಯಚರನಪ್ಪ ಮಣಿಕುಂಡಲದಿವಿಜಂ ನಂದಿಷೇಣಂಗಮನಂತಮತಿಗಂ ವರಸೇನನೆಂಬೊಂ ತನಯನಾದಂ; ವಾನರಾರ್ಯಚರನಪ್ಪ ಮನೋಹರಾಮರಂ ರತಿಷೇಣಂಗಂ ಚಂದ್ರಮತಿಗಂ ಚಿತ್ರಾಂಗದನೆಂಬೊಂ ತನಯನಾದಂ; ನಕುಳಾ

1 ಖ.—ಜಯ. 2 ಖ.—ವಣಿ. 3 ಕ.—ದೇಕಯ್ಯ.

ಸ್ಯೆಚರನಪ್ಪಮನೋರಥಕಲ್ಪಜಂ ಪ್ರಭಂಜನಂಗಂ ಚಿತ್ರಮಾಲೆಗಂ ಶಾಂತಮದನನೆಂಬ ಪುತ್ರನಾಗಿ,

ಪೂರ್ವಭವಸ್ನೇಹಮದೋ
ರೊರ್ವರನಲೆದೊಂದು ಮಾಡೆ ತಮ್ಮನಿಬರುಮಂ ।
ದೊರ್ವ್ವಳಿ ನೆರೆದತಿಲಲಿತತ[1]
ರೋರ್ವೀತಳಸುಖಮನನುಭವಿಸುತುಮಿರೆ ಪಲಕಾಲಂ ॥ ೪

ವ॥ ಒಂದುದಿವಸಂ ಸುವಿಧಿಧರಾಧೀಶಂ ತಮ್ಮ ಮಾವನಪ್ಪಭಯಘೋಷಚಕ್ರವರ್ತಿ ವಿಮಳವಾಹನಜಿನಚರಣವಂದನಾಭಕ್ತಿಗೆ ಪೋಗೆ, ತಾನುಂ ವರದತ್ತವರಸೇನಚಿತ್ರಾಂಗದಶಾಂತಮದನರೆಂಬ ನಾಲ್ವರ್ ಸಹಾಯರುಂ ತನ್ನ ಮಗಂ ಕೇಶವನುಂ ಬೆರಸು ಪೋಗಿ ಸುವಿಧಿ ಸುವಿಧಿಯಿಂ ಜಿನೇಂದ್ರಪಾದಾರವಿಂದಂಗಳಂ ವಂದಿಸುತ್ತಿರ್ಪನ್ನೆಗಮಭಯಘೋಷಂ ಧರ್ಮಾಮೃತರಸಮನಾಸ್ವಾದಿಸಿ ಸಂಸಾರಶರೀರಭೋಗನಿರ್ವೇಗಪರಾಯಣನಾಗಿ,

ಸಾಸಿರ್ವರ್ ವನಿತೆಯರ
ಯ್ಸಾಸಿರ್ವರ್ ಪ್ರಿಯತನೂಜರಱಿಕೆಯ ಪದಿನೆ ।
ಣ್ಸಾಸಿರ್ವರರಸುಗಳ್ ವೆರ
ಸಾಸಾಸಿಗನುಚಿತದೀಕ್ಷೆಯಂ ಕೈಕೊಂಡಂ ॥ ೫

ಸುವಿಧಿಯುಮಾತ್ಮತನೂಭವ
ಭವವಿಪುಳಸ್ನೇಹನಿಗಳದಿಂದಮೆ ತೊಡರ್ದಾ ।
ಧವಳಾತಪವಾರಣಕಕು
ದವಿಭೂತಿಯ[2]ನುಜಿದು ನೆಗೞ್ದುಪಾಸಕನಾದಂ ॥ ೬

ಪದವು ಜಿನೇಂದ್ರಪಾದಕಮಳಂಗಳೊಳಾವಗಮಾಗೆ ಕರ್ಮಬಂ
ಧದ ಬಿಗಿಪೊಯ್ಯನೊಯ್ಯನೆ ಸಡಿಲ್ದಿರೆ ಬಾಡವರೂಪದಿಂದೆ[3] ಕೊ ।
ಲ್ಲದ ಪರನಾರಿಗಾಟಿಸದ ಕಳ್ಳದಸತ್ಯದೊಳೊಂದದಾಗಳುಂ
ಕುದಿದಪತೃಷ್ಣೆಯಂ ಕುಸಿದು ಮಾಣಿಸುವಯ್ದುಮಣುವ್ರತಂಗಳಂ ॥ ೭

[1] ಕ.—ನೆರೆದತಿಬಲಯುತರುರ್ವೀತಳ. [2] ಕ.—ಚಮರವಿಭೂತಿ.
[3] ಖ.—ಬಾದರರೂಪದಿಂದೆ; ಕ.—ಬಾಂಧವರೂಪದಿಂದೆ.

ದೆಸೆಗಳ ಮೇರೆಯುಂ ನಿಱಿಸಿ ಪ್ರೋಸ್ತ್ರದಮಾಭರಣಪ್ರಸೂನಸ
ದ್ವಸನವಿಲೇಪನಾದಿಗಳೊಳಂ[1] ಕೆಲವಂ ಗುಱಿವಿಡಿಕೊಂಡು ಸೇ |
ವಿಸುವುದುಮಸ್ತ್ರದಂಡವಿಷಪಾಶವಿಶೇಷಮನೀಯದಿರ್ಪುದೊಂ
ದೆಸಕಮುಮೊಂದು ಮೂಱುತೆಱದಿಂ ನೆಗೞ್ದರ್ದ ಗುಣವ್ರತಂಗಳಂ || ೮

ವಿವಿಧಪ್ರಾಣಿಗಣಂಗಳೊಳ್ ಸಮತೆ ಸಂದಾಹಾರದಾನಂ ಜಿನ
ಸ್ತವನಕ್ಕಂ ಜಿನಪೂಜೆಗಂ ಮನಮನೊಲ್ದೀರಂತೆ[2] ತಂದಾದಮು |
ತ್ಸವದಿಂ ನೋಂಪುದು ಜೀವಿತಾಂತ್ಯದೆಡೆಯೊಳ್ ಸನ್ನ್ಯಾಸಮಂಮಾಳ್ಪುದೆಂ
ಬಿವು ನೇರ್ಪಟ್ಟೆಸೆವನ್ನೆಗಂ ನೆಗೞ್ದವಂ ಶಿಕ್ಷಾವ್ರತಂ ನಾಲ್ಕುಮಂ ೯

ವ|| ತಾಳ್ದಿ,

ನುತಸಮ್ಯಕ್ತ್ವಮಣುವ್ರತಸ್ಥಿತಿ ಸಮತ್ವೀಭಾವನಂ ಪ್ರೋಷಧ
ಬ್ರತಮೊಂದೂಪಸಿಯೊಂದುಮಂಮುಱಿಯೆನೆಂಬೀಪ್ರೌಢ್ಕೆ ಮಾಡೆಂ ಪಗಲ್
ರತಿಯುಂ ಸ್ತ್ರೀಯರೊಳೆಂಬುದೊಂದು ನಿಯಮಂ ಸದ್ಬ್ರಹ್ಮಚರ್ಯವ್ರತಂ
ಸತತಾರಂಭಪರಿಗ್ರಹಚ್ಯುತಿ ಪರಿತ್ಯಕ್ತಾನುಮೋದೋದಯಂ ೧೦

ಪರಮಮುನಿಗದಿತಮಾರ್ಗಾ
ಚರಣಮುಮೆಂದಿಂತು ನೆರೆಯೆ ಭೂಭುವನದೊಳಂ |
ಪರೆದೇಕಾದಶನಿಳಯಮು
ನರಸನನುಕ್ರಮದಿನಿಸಿತುಮಂ ಕೈಕೊಂಡಂ || ೧೧

ವ|| ಅಂತು ಕೈಕೊಂಡುತ್ಕೃಷ್ಟಚಾರಿತ್ರದೊಳ್ ನೆಗೞ್ದು ಜೀವಿತಾವಸಾನದೊಳ್ ಸಂಸಾರಕ್ಷಪಕನಾಗಿ ಸಮಾಧಿವಿಧಿಯಿಂ ಶರೀರಪರಿತ್ಯಾಗಂಗೆಯ್ದು,

ಎನಗಿದು ಚೋದ್ಯಂ ಪೆಣ್ಣೊಂ
ದನೆಯುದು ನೆಲೆ ತನ್ನ ನೆಗೞ್ದುದಂತದು ಪದಿನಾ |
ಱನೆಯ ನೆಲೆಗುಯ್ದುದೆಂಬುದ
ನೆನೆ ಸುವಿಧಿನರೇಂದ್ರನಚ್ಯುತೇಂದ್ರನುಮಾದಂ || ೧೨

1ಬ.—ವಿಲೇಪನಂಗಳೊಳವಂ. 2ಬ.—ಮನಮನೋರಂತೆಯ್ದಿ.

ವ॥ ಕೇಶವನುಮಾತ್ಮೀಯಗುರುವಿಯೋಗದೊಳ್ ಪರಿತ್ಯಕ್ತಸಕಲರಾಜ್ಯಪರಿಚ್ಛೇದಂ ಪ್ರವ್ರಜ್ಯಾಪದವಿಯೊಳ್ ಪರಿತ್ಯಕ್ತನುಮಾಗಿ ತದಚ್ಯುತಕಲ್ಪದೊಳ್ ಪ್ರತೀಂದ್ರನಾದಂ,

॥ ತ್ರಿಪದಿ ॥

ವರದತ್ತಂ ಮೊದಲಾಗೆ ಧರಣೀಶರವರ್ಗೆಲ್ಲಂ
ಸುರಲೋಕಂ ಸುವಿಧಿಯೊಡನಾದುದಂತುಟ
ನೆರೆದರನಿತೀ ಸುರಲೋಕಂ ॥ ೧೩

ವ॥ ಅಂತು ಮೇರುಮೂಲದಿಂ ತಗುಳ್ದಾರುರಜ್ಜು ನೆಗೆದೆಡೆಯೊಳಚ್ಯುತಕಲ್ಪಮಿರ್ದುದು. ಅಲ್ಲಿ ತನ್ನ ನಾಲ್ವರುಂ ಸಹಾಯರಪ್ಪ ಸಾಮಾನಿಕದೇವರುಂ ತತ್ಪ್ರತೀಂದ್ರನುಂ ಬೆರಸಚ್ಯುತೇಂದ್ರಂ ನವಪಂಚಾಶದಧಿಕತ್ರಿಶತವಿಮಾನಾಧೀಶನುಂ, ತ್ರಯಸ್ತ್ರಿಂಶತ್ಪರಿಮಿತತ್ರಯಸ್ತ್ರಿಂಶಾಮರಪರಿವೃತನುಂ, ಅಯುತಪ್ರಮಿತಸಾಮಾನಿಕಸುರಾನೀಕನುಂ, ಚತುರಯುತಮಿತಾಂಗರಕ್ಷಕಪರಿವೃತನುಂ, ಲೋಕಪಾಲಚತುಷ್ಟಯಾಧಿಷ್ಠಿತನುಂ, ಹಸ್ತ್ಯಶ್ವರಥಪದಾತಿವೃಷಭಗಂಧರ್ವನರ್ತಕೀಪ್ರಮುಖಸಪ್ತಾನೀಕಸಮೇತನುಂ, ಅಂತರ್ಮಧ್ಯಬಾಹ್ಯಪರಿಷತ್ಪ್ರಕಟಿತವಿಭವನುಂ, ದ್ವಾತ್ರಿಂಶತ್ಪ್ರಮಾಣಪ್ರಧಾನದೇವೀನಿವಹವಿಳಾಸಧವಳವಿಲೋಚನಗೋಚರನುಂ, ತ್ರಿಷಷ್ಟಿಸಂಖ್ಯಾತವಲ್ಲಭಿಕಾವಿಭ್ರಮಭ್ರೂಲತಾತ್ರಿಭಾಗಭಾಜನನುಮಾಗಿ,

ಮಾದೇವಿಯರೆಣ್ಬರ್ ಮದ
ನೋದಯಮುಮಂ ಕುಡೆ ಮನಃಪ್ರವೀಚಾರದೊಳಂ ।
ತಾದೇವಂ ಸಂಚಿತಪು
ಣ್ಯೋದಯದಿಂದನಿತು ಮಹಿಮೆಯಂ ಕೈಕೊಂಡಂ ॥ ೧೪

ದೇವಿಯರೊಳೊರ್ಬರೊರ್ಬರ್
ದೇವಿಯ ಪರಿವಾರರಪ್ಸರೋಗಣಮುಮಂ ತ ।
ದ್ದೇವೀವಿಕರಣಸಂಭವ
ದೇವಿಯರುಂ ಪಲಬರೆನಗೆ ಪೊಗೞಲಳುಂಬಂ ॥ ೧೫

ಸ್ಮರಿಯಿಪನಿರ್ಪತ್ತಿರ್ಚ್ಛಾರ್
ಸಿರಬರಿಸಕ್ಕೊರ್ಮೆ ಮನದೊಳುಣಿಸಂ ಸುಯ್ಪಂ ।
ಸುರಯಿಯು ಕಂಪನೆ ಗೆಲೆ ತ
ತ್ಸುರಪತಿ ಪನೆನ್ಕಿಂದು ತಿಂಗಳಿಂಗೊರ್ಮೆ ಗಪಂ ೧೭

ದ್ವಾವಿಂಶತ್ಯಂಬುಧಿಮಿತ
ಜೀವಿತಮುಂ ಮಾಱುವೊಱದ ದಿವ್ಯಾಂಗಮುಮಾ ।
ದೇವಂಗಾಯ್ತು ಜಿನಾಗಮ
ಭಾವನೆಯಿಂ ಪಿರಿದುಮಕ್ಕುಮಿದು ಪಿರಿದಾಯ್ತೇ ೧೮

ವ॥ ಅಂತು ದಿವ್ಯಭೋಗಸಂಪತ್ಪರಂಪರಾಪರಿಗತನಾಗಿ,

ದೆಸೆಯೆಲ್ಲಂ ಪಂಚರತ್ನದ್ಯುತಿಜಟಿಳಿತನಾನಾವಿಮಾನಂಗಳೊಳ್ ರಂ
ಜಿಸೆ ದೇಹಚ್ಛಾಯೆಯೆಲ್ಲಂ ಸಹಜಮಣಿವಿಭೂಷಾಮಯೂಖಂಗಳೊಳ್ ರಂ।
ಜಿಸೆ ತನ್ನಾಸ್ಥಾನಮೆಲ್ಲಂ ಲಲಿತಸುರವಧೂರವ್ಯಸಂಗೀತಕಂ ರಂ
ಜಿಸೆ ಪೀರ್ದಂ ದಿವ್ಯಭೋಗಾಮೃತರಸಮನೊಲ್ದೆತ್ತಯಿಂದಚ್ಯುತೇಂದ್ರಂ ॥

ಸವಿತಂದಪುದು ಸಮುದ್ರೋ
ಪಮಮೆನೆ ಮಂದಾರಮಾಳಿಕಾಮ್ಲಾನತೆಯುಂ ।
ಸಮಕೊಳಿಸಲಾರ್ತುದಿಲ್ಲ ದ
ಲಮರೇಂದ್ರನದೊಂದು ಮುಖಪರಿಮ್ಲಾನತೆಯುಂ ॥ ೧೯

ಜಿನಪತಿಪದಪಂಕಜಮನೆ
ಮನದೊಳ್ ಬಗೆದಮರೆ ಮುಗಿದ ಕೈವೆರಸು ಸುರಾಂ ।
ಗನೆಯರ್ ನಿಜವದನಮನಿ
ಮ್ಮನೆ ನೋಟ್ಪಿನ[1]ಮಚ್ಯುತಂ ಪರಿಚ್ಯುತನಾದಂ ॥ ೨೦

ವ॥ ಅಂತಾದೇವನಲ್ಲಿಂ ತಳರ್ದು ಜಂಬೂದ್ವೀಪದ ಪೂರ್ವವಿದೇಹದ ಸೀತಾನದಿಯ ಬಡಗಣ ತಡಿಯ ಪುಷ್ಕಳಾವತೀವಿಷಯದ ಪ್ರತಿಬದ್ಧಪುಂಡರೀಕಿಣೀಪುರದೊಳ್,

[1] ಖ.— ವದನಮನಿರ್ಮನಮಾರ್ಪಿನ.

ಅಮರೇಂದ್ರಾವಳಿಯಿಂದಮಿಂದ್ರಗಿರಿಯೊಳ್ ಜನ್ಮಾಭಿಷೇಕಕ್ಕೆ ನೋಂ
ತು ಮಹೀವಲ್ಲಭನಪ್ಪುದೊಂದು ಪದದೊಳ್ ರಾಜ್ಯಾಭಿಷೇಕಕ್ಕಮಾ |
ದಮೆ ನೋಂತುನ್ನತವಜ್ರಸೇನವಿಭುಗಂ ಶ್ರೀಕಾಂತೆಗಂ ಪುತ್ರನಾ
ಗಿ ಮನೋಜಾಕೃತಿ ವಜ್ರನಾಭಿವೆಸರಿಂದುತ್ಸಾಹಮಂ ತಾಳ್ದಿದಂ || ೨೧

ವ|| ಮತ್ತಮಾಪುಣ್ಯದಂಪತಿಗೆ ಮುಂ ಪೇಳ್ದ ಶಾರ್ದೂಲಾರ್ಯಸುರವರದತ್ತಚರಸಾಮಾನಿಕನುಂ, ವರಾಹಾರ್ಯದಿವಜವರಸೇನಾಚರಸಾಮಾನಿಕನುಂ, ವಾನರಾರ್ಯವೈಮಾನಿಕಚಿತ್ರಾಂಗದಚರಸಾಮಾನಿಕನುಂ, ನಕುಳಾರ್ಯಾಮರಶಾಂತಮದನಚರಸಾಮಾನಿಕನುಮನುಕ್ರಮದೊಳ್ ವಿಜಯವೈಜಯಂತಜಯಂತಾಪರಾಜಿತರೆಂಬ ನಾಲ್ವರ್ ತನೂಜರಾದರ್. ವಜ್ರಜಂಘನಾದ ಭವದೊಳಾತನ ಮಂತ್ರಿಪುರೋಹಿತಸೇನಾಧಿಪಪ್ರಧಾನರಾಜಶ್ರೇಷ್ಠಿಗಳಪ್ಪ ಮತಿವರಾನಂದಾಕಂಪನಧನಮಿತ್ರರೆಂಬ ನಾಲ್ವರುಮಧೋಗ್ರೈವೇಯಕದೊಳಹಮಿಂದ್ರರಾಗಿರ್ದವರಲ್ಲಿಂ ಬಂದು ಸುಬಾಹುಮಹಾಬಾಹುವೀರಮಹಾವೀರರೆಂಬ ತನಯರಾಗಿ ವಜ್ರನಾಭಿಗೆ ಸಹೋದರರಾದರ್. ಆಶ್ರೀಮತ್ಯಾರ್ಯಾಸ್ವಯಂಪ್ರಭದೇವಂ ಕೇಶವಚರಪ್ರತೀಂದ್ರಂ ಬಂದಾಪುರದೊಳ್ ವಣಿಗ್ವಂಶಾಗ್ರಣಿ ಕುಬೇರನಿಂದಧಿಕನೆನಿಸಿದ ಕುಬೇರದತ್ತಂಗಮನಂತಮತಿಗಂ ಧನದೇವನೆಂಬ ಪ್ರಿಯತನೂಭವನಾದಂ. ಇಂತು,

ನಿಗಳಂಬೊಲ್ ತೊಡದೊರ್ಂದುಮೋಹನಿಗಳಂ ತಜ್ಜನ್ಮದೊಳ್ ನೋಡೆ ತೊ
ಟ್ಟಿಗೆ ಮತ್ತಂ ಪೊಸತಾಗೆ ತಮ್ಮ ಮನದೊಳ್ ತಳ್ಪೊಯ್ದು ತಳ್ತಾತಗು |
ಳ್ಪುಗಳೊಳ್ ಪೊಕ್ಕುವು ವಜ್ರಲೇಪದ ತಗುಳ್ಪಂ ಪೋಲ್ವಿನಂ ವಜ್ರನಾ
ಭಿಗತಿಪ್ರೀತಿಯನುಂಟುಮಾಡಿದರವರ್ ಜನ್ಮಾಂತರಸ್ನೇಹದಿಂ || ೨೨

ವ|| ಅಂತುವಜ್ರನಾಭಿ ಚೆಲ್ವಿಂಗೆ ನಾಭಿಯುಂ ವಿಳಾಸಕ್ಕಾವಾಸಮುಂ ಅಳವಿಂಗೆ ದಳಮುಂ ಅಱಿವಿಂಗೆ ಗುಱಿಯುಂ ಕಳೆಗೆ ಕುಲಭವನಮುಂ ಪ್ರತಾಪಕ್ಕಡರ್ಪುಮಾಗಿ ಬಳೆವನ್ನೆಗಂ; ವಜ್ರಸೇನಮಹಾರಾಜಂ ಆಕುಮಾರನೊಳಾದೊಂದು ಯೋಗ್ಯತೆಗೆ ಸಂತೋಷಂಬಟ್ಟು,

ನೆಱೆದಂ ಭೂತಳರಾಜ್ಯಭೂರಿಭರಮಂ ತಾಳಲ್ಕೆ ಮತ್ಪುತ್ರನೀ
ಪೊಱೆಗಿನ್ನೀತನೆ ಯೋಗ್ಯನೆಂಬ ಬಗೆಯಿಂ ರಾಜ್ಯಾಭಿಷೇಕೋತ್ಸವಂ |

ಪ್ಪೋಱಪ್ಪೋಣ್ಮುತ್ತಿರೆ ರಾಜ್ಯಮಂ ಕುಡೆ ಮಗಂಗಾಸ್ಥಾರ್ಯ್ಯದೊಳ್ ತಳ್ತ ದೇ
ನೊಱೆಯಿಂದರ್ಚಿದ ಬಾಳ್ತ್ವಿಲಾದುದೊಪರಿಚ್ಛೇದಂ ಧರಾಧೀಶನಾ ॥ ೨೩

ವ॥ ತದನಂತರಮೋ ಲೋಕಾಂತಿಕಾಮರವೃಂದಂ ಬಂದು ಬಿಚ್ಚಳಿಸೆ ವಜ್ರಕ್ಕೆ ಒಳಮಿತ್ತಂತೆ ವಜ್ರಸೇನಮಹಾರಾಜಂ ಪರಿನಿಷ್ಕ್ರಮಣಕಲ್ಯಾಣಪರಿಣತಮನನಾಮ್ರವನೋದ್ಯಾನದೊಳ್ ಸಹಸ್ರಸಂಖ್ಯಾವನಿಪಾಲಕರೊಡನೆ,

ಬಡಗವೊಗದಿರ್ದ ಕರ್ಮದ
ತೊಡರಂ ಪಱಿವಂತೆ ಕೇಶಪಾಶಮನಂತಾ ।
ಗಡೆ ಪಱಿದು ತಪಂಗೊಂಡಂ
ಪ್ರೊಡರ್ಮರಿಯುಂ ವಜ್ರನಾಭಿಯುಂ ಬೆಂಕೊಂಡಂ । ೨೪

ವ॥ ಅಂತಾತ್ರಿಲೋಕಗುರು ಧರಾತಳಂ ಪ್ರೂಗೆಟ್ಟಿನಂ ಯತ್ಯಾಶ್ರಮದೊಳ್ ನಿಂದಂ, ಈಧರಾಧಿಪಂ ಗುರುರಾಜ್ಯಾಶ್ರಮದೊಳ್ ನಿಂದಂ ; ಆಮುನೀಂದ್ರಂ ತಪೋನುಷ್ಠಾನದೊಳ್ ನಿಷ್ಠಿತನಾದಂ, ಈನರೇಂದ್ರಂ ರಾಜ್ಯಾನುಷ್ಠಾನದೊಳ್ ನಿಷ್ಠಿತನಾದಂ ; ಆಮುನೀಶಂ ಮುಮುಕ್ಷುವೃತ್ತಿಯೊಳ್ ನೆಗೞ್ದಂ, ಈ ಕ್ಷಿತೀಶಂ ಕ್ಷತ್ರವೃತ್ತಿಯೊಳ್ ನೆಗೞ್ದಂ ; ಆಮುನಿನಾಥಂ ತ್ರಿಗುಪ್ತಿಯೊಳ್ ನೆರೆದಂ, ಈ ಮಹೀನಾಥಂ ಮಂತ್ರಗುಪ್ತಿಯೊಳ್ ನೆರೆದಂ ; ಆತಪಸ್ವಿ ಪರೀಷಹಂಗಳಂ ಗೆಲ್ದಂ, ಈತೇಜಸ್ವಿ ಬಲ್ಲಿದರಂ ಗೆಲ್ದಂ ; ಆಮಹಾಯೋಗಿ ಗುಣಂಗಳಂ ಪಾಲಿಸಿದಂ, ಈ ಮಹಾಭೋಗಿ ನೆಲನಂ ಪರಿಪಾಲಿಸಿದಂ ; ಆಮುನಿಯ ಮನೋಗಾರದೊಳ್ ಧ್ಯಾನಚಕ್ರಂ ಪುಟ್ಟಿತ್ತು, ಈರಾಜ್ಯಾಶ್ರಮಮುನಿಯ ಆಯುಧಾಗಾರದೊಳ್ ಚಕ್ರರತ್ನಂ ಪುಟ್ಟಿತ್ತು ; ಆಮುನಿಚಕ್ರವರ್ತಿಯ ಮನದೊಳ್ ಮೂಱುರತ್ನಂಗಳ್ ಬಳಗಿದುವು, ಈಸಕಳಚಕ್ರವರ್ತಿಯ ಮನೆಯೊಳ್ ಪದಿನಾಲ್ಕುರತ್ನಂಗಳ್ ಬೆಳಗಿದುವು ; ಆಮುನಿವೃಷಭಂಗೆ ಕೇವಲಜ್ಞಾನೋತ್ಪತ್ತಿಯಾದುದು, ಈರಾಜ್ಯವೃಷಭಂಗೆ ಸಕಳಸಾಮ್ರಾಜ್ಯಸಂಪತ್ತಿಯಾದುದು ; ಆಪರಮೇಶ್ವರಂಗೆ ದೇವೇಂದ್ರರ್ಕಳೆಱಗಿದರ್, ಈ ಧರಾಧೀಶ್ವರಂಗೆ ನರೇಂದ್ರರ್ಕಳೆಱಗಿದರ್ ; ಆತ್ರಿಲೋಕತಿಲಕಂಗೆ ದಿವ್ಯಧ್ವನಿ ನೆಗೞ್ದುದು, ಈಕುಲತಿಲಕಂಗೆ ದಿಗ್ವಿಜಯದುಂದುಭಿಧ್ವನಿ ನೆಗೞ್ದುದು ;

ಆಮುನಿರಾಜಂ ಕರ್ಮಂಗಳಂ ಗಾಳಿಸಿದಂ, ಈರಾಜರಾಜಂ ಷಟ್ಖಂಡಮಂಡಳಮಂ ಬಾಯ್ಕೇಳಿಸಿದಂ ; ಆಭವ್ಯವರರತ್ನಾಕರಂ ಚತುಸ್ತ್ರಿಂಶದತಿಶಯಭೋಗದೊಳ್ ಕೂಡಿದಂ, ಈಪುರುಷರತ್ನಾಕರಂ ದಶಾಂಗಭೋಗದೊಳ್ ಕೂಡಿದಂ. ಇಂತು,

ಗೃಹಪತಿರತ್ನವಾಗೆ ಧನದೇವನಿಳಾತಳನಾಥನಾಮಹಾ
ಮಹಿತಳಭೋಗಮಂ ನೆಱೆಯೆ ಭೋಗಿಸೆ ಸಂಸೃತಿಭೋಗಮೊಯ್ದ ನಿ |
ಸ್ಪೃಹತೆಯನಾಮಹೀಪತಿಗೆ ತಂದುದು ಭವ್ಯತೆ ಪುಣ್ಯಜೀವಮಂ
ಸಹಜಸುಖಾಸ್ಪದಂಬರೆಗಮುಯ್ವಿನಮಲ್ಲಿ ತೊಡಂಕಲೀಗುಮೇ ॥ ೭೪

॥ವ ಅಂತು ವಿಷಯವಿರಕ್ತನಾಗಿ,

ನೆಗೞ್ದೀಷಟ್ಖಂಡಮಂ ಸಾಧಿಸಿದೊಡೆ ಫಲಮೇಂ ಭೋಗದಿಂ ಸಾಧ್ಯಮೇಂ ಬಂ
ಧುಗಳಿಂದಂ ಬರ್ಪುದೇಂ ಸುತ್ತಿದ ಪರಿಜನದಿಂದಪ್ಪುದೇನೊಂದುಮಿಲ್ಲ |
ಚ್ಚಿಗವೊಂದುಂಟಲ್ಲಿ ಗಾಂಪಿಂ ತೊಡರ್ದನೆ ಪಡೆವೆಂ ಶಾಶ್ವತಶ್ರೀಯನೆಂಬು
ಜ್ಜಗದೊಳ್ ಚಿತ್ತಂ ಕರಂ ತಣ್ಮಲೆಯೆ ನೆಱೆಯೆ ನಿಶ್ಚೈಸಿದಂ ಸಾರ್ವಭೌಮಂ

ವ॥ ಅಂತು ನಿಶ್ಚಯಿಸಿ ವಸುಂಧರಾಭಾರಮಂ ವಜ್ರದಂತನೆಂಬ ನಿಜಾಗ್ರತನೂಜನೊಳ್ ನಿಱಿಸಿ ನಿಜಗುರುಚರಣಸಮೀಪದೊಳ್,

॥ ಅಕ್ಕರಂ ॥

ನಿಜತನೂಭವರೈಸಾಸಿರ್ವರ್ ಪದಿನಾಱುಸಾಸಿರ್ಬರ್ ಮಕುಟಬದ್ಧರ್
ನಿಜಲತಾಂಗಿಯರಯ್ವತ್ತುಸಾಸಿರ್ವರೆಣ್ಬರುಮಣುಗಿನ ಸೋದರರ್ಕಳ್ |
ನಿಜಸಹಾಯಂ ಗೃಹಪತಿರತ್ನಂ ಧನದೇವನುಂ ಬೆರಸಾಗಳ್ ವಜ್ರನಾಭಿ
ನಿಜದ ರೂಪುಮಂ ನಿರ್ಗ್ರಂಥರೂಪುಮಂ ಕೈಕೊಂಡೇ ನೆಗೞ್ದನಿಂತೀಮಾಳ್ಕೆ
ಯಿಂ ॥ ೭೫

ವ॥ ಅದೆಂತೆಂದೊಡೆ ಹಿಂಸಾನೃತಸ್ತೇಯಾಬ್ರಹ್ಮಪರಿಗ್ರಹಪರಿತ್ಯಾಗಮೆಂಬಯ್ದುಂ ಮಹಾವ್ರತಂಗಳೊಳ್ ನೆರೆದು,

ನಡೆವ ನುಡಿವುಣ್ಬ ಕೊಳ್ವಿಡು
ವೆಡೆಯೊಳ್ ತಾಂ ಕಾಯ[1]ಮಲಮನುಗುಳ್ವೆಡೆಯೊಳೊಡಂ |

---

[1]ಗ.—ಕೊಳ್ವರಿ ದಿಡುವೆಡೆಯೊಳ್ಕಾಯ.

ಬಡನೆನಿಸದೋವಿ ಜೀವವು
ನಡಕಂಬೆರಸಯ್ದುಸಮಿತಿಯೊಳ್ ಮುನಿ ನೆಗೞ್ದಂ ॥ ೧೮

ವ॥ ಮತ್ತಮಿವು ಮೊಲಾದಗಿರ್ಪತ್ತೆಂಟುಮೂಲಗುಣಂಗಳೊಳಮುತ್ತರ ಗುಣಂಗಳೊಳಮುತ್ತರೋತ್ತರಂ ನೆಗೞ್ದು,

ಮನಮುಂ ನುಡಿಯುಂ ಮೆಯ್ಯುಂ
ತನಗೆ ವಶಂಮಾಡಿ ಗುಪ್ತಿಗುಪ್ತಂ ಮುನಿಯಿಂ ।
ಬಿನೆಗಂ ನೆಗೞ್ದಂ ಗುಪ್ತಿಯ
ತನಗಿಲ್ಲದೆ ಕರ್ಮರಿಪುಗೆ ಮುನಿವುದು ಮೊಗ್ಗೇ ॥ ೧೯

ವ॥ ಮತ್ತಂ ಚತುರಶೀತಿಶತಸಹಸ್ರಗುಣಮಣಿಭೂಷಣವಿಭೂಷಿತನುಂ ಅಷ್ಟಾದಶಸಹಸ್ರಶೀಲರತ್ನಾಕರನುಂ ಆಗಿ ಪಂಚದಶಪ್ರಮಾದಂಗಳಂ ಬಂಚಿಸಿ,

ಏಕಧನುರ್ಧರನಾದನಿ
ಳಾಕಾಂತೆಯನೊಲಿಸುವಂದು ಮುನಿಪತಿಯಾಗಿ ।
ದ್ಲೇಕೆಂದಱಿಯೆಂ ದಶಧನು
ರಾಕಳಿತಕರಾಗ್ರನಾದನೆನಗಿದು ಚೋದ್ಯಂ ॥ ೨೦

ವ॥ ಎಂಬಿನಮುತ್ತಮಕ್ಷಮಾಮಾರ್ದವಾರ್ಜವಸತ್ಯಶೌಚಸಂಯಮತಪಸ್ತ್ಯಾಗಾಕಿಂಚನ್ಯಬ್ರಹ್ಮಚರ್ಯಾಪರ್ಯಾಪ್ತದಶಧರ್ಮಂಗಳುಮಂ ಕೈಕೊಂಡು ಸಾಕಾರನಿರಾಕಾರಗತಮಪ್ಪನಶನಮೆಂಬ ಮೊದಲ ತಪದೊಳಂ, ಏಕಕಬಳೋನಾದ್ಯೇಕಸಿಕ್ಥಪ್ರಮಾಣಾಹಾರಂಬರಂ ಬರ್ಪವಮೋದರ್ಯಮೆಂಬೆರಡನೆಯ ತಪದೊಳಂ, ಇತೆಂಬೆಡೆಯೊಳಿಂತೆಂಬವರ್ ನಿಱಿಸಿದೊಡಲ್ಲದೆ ನಿಲ್ಲೆನೆಂಬ ನಿಯಮಮಂ ಮೊದಲಾಗೆ ವೃತ್ತಿಪರಿಸಂಖ್ಯಾನನಾಮಮಾದ ಮೂಱನೆಯ ತಪದೊಳಂ, ಕ್ಷೀರದಧಿಘೃತಲವಣತೈಲಾದಿರಸಂಗಳಂ ಪರಿತ್ಯಾಗಂಗೆಯ್ವ ರಸಪರಿತ್ಯಾಗಮೆಂಬ ನಾಲ್ಕನೆಯ ತಪದೊಳಂ, ಸ್ತ್ರೀಪುನ್ನಪುಂಸಕಮೃಗಪಶುಪರಿವರ್ಜಿತವಿವಿಕ್ತಸ್ಥಾನಂಗಳೊಳ್ ನೆಲಸುವ ವಿವಿಕ್ತವಾಸಮೆಂಬಯ್ದನೆಯ ತಪದೊಳಂ ನೆಱೆದು, ಕಾಯಕ್ಲೇಶಮೆಂಬಾಱನೆಯ ತಪಮನೆತ್ತಿಕೊಂಡು,

ಸುತ್ತಲುಮುರಿವಾಲಿಗಳನೆ
ಪೊತ್ತಿಸಿದವೊಲಳುರೆ ತಪನಕಿರಣಾಳಿ ಮುನೀಂ ॥
ದ್ರೋತ್ತಮಗುರು ಕಲ್ಲನೆ ನಿಂ
ದೆತ್ತಿದ ಬೆಳ್ಗೊಡೆಯ ನೆೞಲೊಳಿರ್ಪಂತಿರ್ದಂ ॥ ೩೧

ಮೊರೆದೆಱಗಿ ಕೊಳ್ವ ಮೞೆ ಘೋ
ರ್ಗರೆದೂದುವ ಗಾಳಿ ಸಿಡಿದು ಪೊಯ್ವ ಸಿಡಿಲ್ ಕಾ ।
ರಿರುಳೊಳಗುರ್ವಂ ಪಡೆದಿರೆ
ಮರವಾನಸನೆನೆ ತಪಸ್ವಿ ಮರವೊದಲಿರ್ದಂ ॥ ೩೨

ತನು ಪಂಜಿವೊಲ್ ಬೆಳರ್ತಿ
ರ್ಪಿನೆಗಂ ಹಿಮಮೆಕ್ಕಿದರಲೆವೋಲ್ ಪುದಿದಿರೆಯುಂ ।
ತನು ತನಗಲ್ತೆಂದೇಕಾಂ
ತನಿವಾಸದೊಳಂತು ಬೆಳ್ದವಾಸದೊಳಿರ್ದಂ ॥ ೩೩

ವ॥ ಮತ್ತಮಭ್ಯಂತರತಪಷ್ಷಟ್ಕದೊಳಂ ಪ್ರಾಯಶ್ಚಿತ್ತವಿನಯವೈಯಾಪೃತ್ಯಸ್ವಾಧ್ಯಾಯಧ್ಯಾನವ್ಯುತ್ಸರ್ಗಂಗಳಂ ಕೈಕೊಂಡು ಪನ್ನೆರಡುತಪದೊಳ್ ನೆಱೆದಿರ್ಪತ್ತೆರಡುಪರೀಷಹಂಗಳಂ ಗೆಲ್ದು ಗಣಧರಗಣಮಂ ಬಿಟ್ಟೇಕವಿಹಾರಿಯಾಗಿ ಬೞಿಯಂ ತ್ರೈಲೋಕ್ಯಕ್ಷೋಭಕಾರಣತೀರ್ಥಂಕರಪುಣ್ಯಹೇತುಗಳಪ್ಪ ಷೋಡಶಭಾವನೆಗಳಂ ಭಾವಿಸಿ, ಭಾವನೆಯೊಳಾದ ಬುದ್ಧಿತಪೋವಿಕ್ರಿಯೌಷಧಿರಸಬಲಾಕ್ಷೀಣಾಭಿಧಾನಸಪ್ತರ್ಧಿಗಳೊಳಂ ನೆಱೆದು, ಬೞಿಯಂ ಮೋಹನೀಯಕರ್ಮೋಪಶಮದೊಳ್ ವಿಶುದ್ಧಾತಿಶಯವಿಶೇಷದಿನುಪಶಮಶ್ರೇಣ್ಯಾರೋಹಣಂಗೆಯ್ದು ನಿರವಶೇಷಮೋಹೋಪಶಮೋದ್ಭೂತಯಥಾಖ್ಯಾತಚಾರಿತ್ರಸಂಪನ್ನನಂತರ್ಮುಹೂರ್ತದಿಂ ಸ್ವಸ್ಥಾನಸ್ಥಿತನಾಗಿ ಕಾಲಾಂತರದೊಳ್ ಶ್ರೀಪ್ರಭಾದ್ರಿಶಿಖರದೊಳ್ ಪ್ರಾಯೋಪಗಮನವಿಧಿಯಿಂ ತ್ವಗಸ್ಥಿಭೂತಸರ್ವಾಂಗಂ ಧೈರ್ಯಮನೆ ಮನದೊಳವಲಂಬಿಸಿ,

ಬಿಸಿಲ್ಕೈಕಿಲ್ ಪಸಿವುಗ್ರದಂಶಮಶಕವ್ಯಾಬಾಧೆ ನೀರಡ್ಕೆ ಪೊ
ಯ್ವ ಸಿಡಿಲ್ ತಿಂಬರೆವಾವು ಪಾಯ್ವ ಪುಲಿಯೆಂಬೀಬಾಧೆಯೊಳ್ ಮೆಯ್ಯನೊ।
ಡ್ಡಿಸಿ ಮೆಯ್ಯೊಳ್ ಮಿಡುಕುಳ್ಳ ತಾಣಮಣಮಿಲ್ಲೆಂಬಂತು ನಿಷ್ಪಂದನಾ
ಗಿ ಸಮಸ್ತೀತಮನಂ ಗುಣಂಗೊಳಿಸಿದಂ ಯೋಗೀಂದ್ರವೃಂದಂಗಳಂ ॥ ೩೪

ವ॥ ಅಂತಿರ್ದನಿತ್ಯಾದಿದ್ವಾದಶಾನುಪ್ರೇಕ್ಷಾನುಸ್ಮರಣಪರಿಣತಾಂತಃಕರಣನಾಗಿ ಮತ್ತಮೆರಡನೆಯ ಸೋಪಾನಮುಪಶಮಶ್ರೇಣಿಯನೇಱಿ ಚತುರ್ವಿಧಶುಕ್ಲಧ್ಯಾನದೊಳ್ ಪೂರ್ವಾಪರವಿಷಯವಿವಿಕ್ತಾರ್ಥವ್ಯಂಜನವೀರ್ಯವಿಧಿವ್ಯಂಜನಯೋಗಸಂಕ್ರಮಣಲಕ್ಷಣಲಕ್ಷಿತಮಪ್ಪ ಪೃಥುಕ್ತ್ವವಿತರ್ಕವಿಚಾರವೆಂಬ ಮೊದಲ ಶುಕ್ಲಧ್ಯಾನದೊಳ್ ಸಮಾಹಿತನುಪಶಾಂತಗುಣಸ್ಥಾನದೊಳ್ ಪ್ರಾಣಪರಿತ್ಯಾಗಂಗೆಯ್ದು ಸರ್ವಾರ್ಥಸಿದ್ಧಿಯೊಳಹಮಿಂದ್ರನಾದಂ; ಅದು ಜಂಬೂದ್ವೀಪೋಪಮಾನವಿಸ್ತಾರಪರಿಣಾಹಪರಿಣಾಮಮುಮಂ ಕೈಕೊಂಡು,

ಪನ್ನೆರಡುಯೋಜನಂ ಲೋ
ಕೋನ್ನತಿಯೆನೆ ತತ್ತ್ರಿಷಷ್ಟಿಪಟಲದ ತುದಿಯೊಳ್ ।
ರನ್ನದ ಕಳಶಕ್ಕೆಣೆಯೆಂ
ಬನ್ನೆಗಮದು ಸುಖಸುಧಾಕರಂ ಸ್ವಸ್ತಿಕರಂ ॥ ೩೫

ಅದು ನೀಲಮಯಮಹೀತಳ
ಮದು ನವಪುಷ್ಪೋಪಹಾರತಾರಕಿತಮದ ।
ಭ್ಯುದಯಸುಖನಿಳಯಮದು ಮೋ
ಕ್ಷದ ನೆರೆಮನೆ ಲಂಬಮಾನಮುಕ್ತಾದಾಮಂ ॥ ೩೬

ನೆರೆದಹಮಿಂದ್ರರ ತನುಪರಿ
ಕರದ ನೆೞಲ್ಗಳ್ ಪಳಚ್ಚನೆಸೆದಿರೆ ನೋಟ।
ಕ್ಕೆರಡನೆಯ ನಾಕಲೋಕದ
ವಿರಚನೆಯೆನೆ ಪಡೆವುದದಱ ರನ್ನದ ಕೇರ್ಗಳ್ ॥ ೩೭

ವ॥ ಅದಱ ಪರಾರ್ಧ್ಯರತ್ನರಚನಾವಿಚಿತ್ರೋಪಪಾತಶಯನತಳದೊಳಂತರ್ಮುಹೂರ್ತದೊಳ್ ಪರ್ಯಾಪ್ತಿಯಂ ಕೈಕೊಂಡು,

ಧಾತುಮಳದೋಷರಹಿತಂ
ವೀತನಖಶ್ಮಶ್ರುಕೇಶಲೋಮಂ ಶೋಭಾ ।
ನ್ವೀತಪರಿಪೂರ್ಣಯೌವನ
ಮಾತತಶುಭಲಕ್ಷಣಂ ಮನೋಹರರೂಪಂ ॥ ೩೮

ಪಳುಕಿನ ಪಾಪೆಯನಮರ್ದಿಂ
ತೊಳೆದಂತೊರ್ವೊಱಿದ ದಿವ್ಯವಪು ಮಣಿಮಯಕಂ ।
ಡಳಮಕುಟಕಟಕಭೂಷಣ
ವಿಳಾಸದಿಂದೇಂ ವಿಳಾಸಮಂ ತಾಳ್ದಿದುದೋ ॥ ೩೯

ಬಾಡದ ಬಾಸಿಗಮುಡೆ ಜೆ
ಲ್ವೇಡದ ದಿವ್ಯಾಂಬರಂ ಮನಂಗೊಳೆ ಸುಖದೊಳ್ ।
ಮೂಡುವ ಮುಪ್ಕಾಡುವ ತಡು
ಮಾಡುವ ಬಗೆಯಿಲ್ಲದಲ್ಲಿ ಬಗೆ ಪೆಱತುಂಟೇ ॥ ೪೦

ಅಣಿಮಾದ್ಯಷ್ಟಗುಣಂಗಳ
ಕಣಿಯಿರ್ಪಂತಿರ್ದುಮಖಿಳಸುರಲೋಕಶಿಖಾ ।
ಮಣಿಗಳ್ ಲೋಕೈಕಶಿಖಾ
ಮಣಿಗಳುಮಲ್ಲಿರ್ದು ವಿನತಮಸ್ತಕರಪ್ಪರ್ ॥ ೪೧

ಶುಭಭಾವಶುಕ್ಲಲೇಶ್ಯಾ
ನುಭಾವದಿಂ ಧವಳಪುಂಡರೀಕನಿಕಾಶ ।
ಪ್ರಭೆ ದೊರೆಕೊಂಡುದು ಪರಿಣಾ
ಮಭೇದಮೇಂ ಚಿತ್ರವಿಧಮೊ ತನುಭೃದ್ಗುಣದಾ ॥ ೪೨

ಪದಿನಾಱು ತಿಂಗಳಿಂದಂ
ತುದಿಯೊಳ್ ಪದಿನೈದು ದಿವಸಮಾದೊಡೆ ಸುಯ್ವಂ ।
ತೊದಳುಂಟೆ ನಿಃಪ್ರವೀಚಾ
ರದಿಂದಮುಹಮಿಂದ್ರನಖಿಳಸುಖಮಂ ಪಡೆವಂ ॥ ೪೩

ಸ್ತ್ರೀಸಂಸರ್ಗಂ ಸುಖಮೆಂ
ಬೀಸಂಸಾರಿಗಳೆ ಜಡರದಪ್ಪೊಡೆ ತನುಗಾ ।
ಯಾಸಕರಂ ಶುಕ್ಲಾರ್ತವ
ವಾಸಿತಮಾಪಾತಮಾತ್ರರಮಣೀಯತರಂ ॥ ೪೪

ಅದಱಿಂದಂ ತನ್ನೊಳ್ ಪು
ಟ್ಟಿದ ಸಂತಸದಿಂದಮಾದ ಸುಖಮುಹು ಸುಖಮು ।

ಲ್ಲದುದಲ್ತು ವಸ್ತುವಿಂದಾ
ದುದೆ ವಸ್ತುವೆ ಕುಂದೆ ಕುಂದುಗುಂ ನಿರ್ವಿರ್ದಪುದೇ ॥ ೪೧

ಆನಾಕನಿಕಾಯದ ಸುಖ
ಮೇನುಂ ದೊರೆಯಲ್ಲದರ್ಕೆ ಮೋಕ್ಷದ ಸುಖದಿಂ ।
ದೇನಾನುಂ ಕುಂದುಗುಮದು
ತಾನೆನೆ ಬಣ್ಣಿಸುವನಾವನಲ್ಲಿಯ ಸುಖಮಂ ॥ ೪೨

ನೆನೆದಹಮಿಂದ್ರಂ ತಣಿವೊಂ
ಮನದೊಳ್ ಮೂವತ್ತುಮೂಱುಸಾಸಿರವರ್ಷ ।
ಕ್ಕನತಿಶಯಸುಧಾಶನದೊಳ್[1]
ವನನಿಧಿ ಮೂವತ್ತುಮೂಱುಮಂ ಸಲೆ ಬಾೞ್ವಂ ॥ ೪೩

ಧನದೇವನುಮೆಣ್ಬರ್ ತ
ನ್ನನುಜರುಮಹಮಿಂದ್ರರಾಗೆ ನೆಱೆದವರೊಳ್ ಮು ।
ನ್ನಿನ ಭವದ ಪುಣ್ಯಕಲ್ಪಾ
ವನಿಜದ ತನಿವಣ್ಣು ರಸದೆ ತಣ್ಣನೆ ತಣಿವಂ ॥ ೪೪

ವ॥ ಅನ್ನೆಗಮಿತ್ತ ಮೇರುಗಿರಿಯೇ ತನಗೆ ನಾಭಿಯಾಗೆ ಸೊಗಯಿಸುವ ಜಂಬೂಮಹೀರುಹಲಾಂಛನದ್ವೀಪಾಂತರ್ಗತಭರತಕ್ಷೇತ್ರಮಧ್ಯಮಧ್ಯಮಖಂಡದೊಳ್ ಮುಖ್ಯಂ ವ್ಯವಹಾರಮೆಂಬೆರಡುಂ ಕಾಲದೊಳಗಾದಿಮಧ್ಯಾವಸಾನವಿರಹಿತಮುಂ ವರ್ತನಾಲಕ್ಷಣಮುಂ ಪರಿಮಾಣದ್ರವ್ಯಪರಿವರ್ತನಕಾರಣಮುಂ ಲೋಕಾಕಾಶಪ್ರದೇಶಪ್ರಮಾಣಪರಿಮಾಣಮುಂ ಅಸ್ಮದಾದ್ಯನುಮೇಯಮುಂ ಸರ್ವಜ್ಞಪ್ರತ್ಯಕ್ಷಗೋಚರಮುಮಪ್ಪುದು ಮುಖ್ಯಕಾಲಂ. ವ್ಯವಹಾರಕಾಲಮೆಂಬುದು ಮುಖ್ಯಕಾಲನಿರ್ವರ್ತಿತಕ್ರಿಯಾರೂಪಂ; ಅದು ಸಮಯಾವಳಿಕೋಚ್ಛ್ವಾಸಸ್ತೋಕನಿಮೇಷನಾಳಿಕಾಮುಹೂರ್ತದಿವಸಪಕ್ಷಮಾಸರ್ತ್ವಯನಸಂವತ್ಸರಾದಿಗಣನಾನುಕ್ರಮದಿಂದಂ ಪೆರ್ಚಿದೆಣಿಕೆಯೊಳ್ ಕೂಡಿದುದು. ಅದು ಶರೀರಬಳಾಯುರ್ದೇಹಪ್ರಮಾಣೋಪಚಯಾಪಚಯಹೇತುತ್ವದಿಂದಮುತ್ಸರ್ಪಿ

---

[1] ಕ.—ಕ್ಕನತಿಶಯಸುಖಾಸನದೊಳ್

ಣಿಯೆಂಬವಸರ್ಪಿಣಿನಾಮಮುಮಂ ಪಡೆದುದದೊಂದು ಪತ್ತುಕೋಟಿಕೋಟಿ ಸಾಗರೋಪಮಸಂಖ್ಯೆಯುಂ ತಾಳ್ದಿ ಸುಷಮಸುಷಮಮುಂ ಸುಷಮಮುಂ ಸುಷಮದುಷ್ಷಮಮುಂ ದುಷ್ಷಮಸುಷಮಮುಂ ದುಷ್ಷಮಮುಂ ಅತಿದುಷ್ಷಮಮುಂ ಎಂದು ಬಂದೊಂದು ಷಡ್ಭೇದಭಿನ್ನಮಾದುವು. ಅಲ್ಲಿ ಮುನ್ನಮವಸರ್ಪಿಣಿಯೊಳುತ್ತಮಭೋಗಭೂಮಿಸ್ಥಿತಿಯೊಳ್ ನಾಲ್ಕುಕೋಟಿಕೋಟಿ ಸಾಗರೋಪಮಪ್ರಮಾಣಂ ಸುಷಮಸುಷಮಮೆಂಬಕಾಲಮುಂ ಮಧ್ಯಮಭೋಗಭೂಮಿಸ್ಥಿಯೊಳ್ ಮೂಱುಕೋಟಿಕೋಟಿಸಾಗರೋಪಮಪ್ರಮಾಣಂ ಸುಷಮಮೆಂಬಕಾಲಮುಂ ಜಘನ್ಯಭೋಗಭೂಮಿಸ್ಥಿತಿಯೊಳ್ ಎರಡುಕೋಟಿಕೋಟಿ ಸಾಗರೋಪಮಪ್ರಮಾಣಂ ಸುಷಮದುಷ್ಷಮಮೆಂಬ ಕಾಲಮುಂ ಕ್ರಮದೊಳ್ ಷಟ್ಚತುರ್ದ್ವಿಸಹಸ್ರಚಾಪೋತ್ಸೇಧಂಗಳುಂ ತ್ರಿದ್ವ್ಯೇಕಪಲ್ಯೋಪಮಾಯುಷ್ಯಂಗಳುಂ ತ್ರಿದ್ವ್ಯೇಕದಿನಾಂತರಿತ ಬದರಾಕ್ಷಧಾತ್ರೀಫಳಪ್ರಮಾಣಾಹಾರಂಗಳುಮಪ್ಪ ಮಿಥುನಂಗಳ್ಗೆ ಸಂಭೋಗ್ಯಮಾಗಿ ಸಲೆ ಜಘನ್ಯಭೋಗಭೂಮಿಯ ಕಡೆಯ ಪಳಿತೋಪಮದೆಂಟನೆಯ ಭಾಗಮುೞಿದುದೆಂಬನ್ನೆಗಂ,

ಉತ್ತಮಮಧ್ಯಮಾಧಮಗುಣಂ ನಿಜದಾನದ ಭೋಗಭೂತಳ<br>
ಕ್ಕೆತ್ತಮೊಡಂಬಡಂ ಪಡೆಯೆ ಬೇಡಿದ ಭೋಗಮನಿತ್ತು ಪೇೞಿಮಿ ।<br>
ತ್ತಿತ್ತಿವರ್ಗಿತ್ತೆನೆಂಬ ಬಗೆ ತೊಟ್ಟನೆ ಪುಟ್ಟರೆ ಮುನ್ನಮಿತ್ತು ಬೆ<br>
ಳ್ಕಿತ್ತನಿಸಿರ್ದ ಪಾರ್ಥಿವರೊಳೇಂ ದೊರೆಯಾದುದೊ ಕಲ್ಪಪಾರ್ಥಿವಂ ॥ ೪೯

ಮರಗಳ್ ಮುನ್ನಿತ್ತನಿಸಂ<br>
ಮರವಟ್ಟುವು ಪೆಟ್ಟುವೆರ್ಚೆ ಕುದಿದಿತ್ತೊಡಮಿಾ ।<br>
ಧರಣಿತಳಕ್ಕವಿವೇಕಿಯ<br>
ಮರವಾನಸನಿತ್ತು ಚಾಗಮೇನಿರ್ದಪುದೇ ॥ ೫೦

ಪಿಂಗದೆ ಬೆಳಗುವ ಗುಣಮದು<br>
ಪಿಂಗಲೊಡಂ ಜ್ಯೋತಿರಂಗಭೂಜಂಗಳ್ ತೇ ।<br>
ಜಂಗಳ್ ಮಸುಳ್ದುವು ದಾನಗು<br>
ಣಂಗಳ್ ಕಿಡೆ ತೇಜದುಡುಕಮೇಂ ಪಿರಿದಾಯ್ತೇ ॥ ೫೧

---

1ಗ.—ಜಂಗಳ್ ನೆರೆ ಕೆಟ್ಟುವು ದಾನಂಗಳ್

ವ॥ ಅನ್ನೆಗಮಾಷಾಢಪೌರ್ಣಮಾಸೀವಾಸರಸಾಯಂತನಸಮಯದೊಳ್ ಪರಭಾಗಂಬಡೆದು ಗಗನೋಭಯಭಾಗದೊಳ್ ದಿಗ್ಭಿತ್ತಿಗಳುಂ ಭೋಗಭೂಮಿಜರ ಚಿತ್ತಭಿತ್ತಿಗಳುಂ ಬಡನೊಡನೆ ಬೆಳಗೆ ಕಾಲರಾಜನ ಜಗದ್ಗೃಹಪ್ರವೇಶಕ್ಕೆ ನಿಱಿಸಿದ ಕನಕಕಳಶಯುಗಳಮುಮಂ ಪೌರ್ಣಮಾಸೀಸೌಂದರಿಯ ಸಿಂದೂರಾರುಣಕ್ರೀಡಾಗೋಳಕಂಗಳುಮಂ ಪೋಲ್ತು,

ಗಗನಗಜಕ್ಕಿಕ್ಕಿದ ಪೊಂ
ನ ಗಂಟೆಯೆರಡೆನಲುಮಂಬರಾಂಭೋನಿಧಿಯೊಳ್ ।
ನೆಗೆದುರಿವ ಔರ್ವಾನಳನು
ಬ್ಬೆಗಳೆನಲುಂ ನೆಗೆದುವಹಿಮಹಿಮಕರಬಿಂಬಂ ॥ ೫೧

ವ॥ ಅಂತವಂ ಕಂಡು ಬೆರ್ಚಿ ಬೆಗಡುಗೊಂಡ ಭೋಗಭೂಮಿಜರಂ ಜಾಜ್ವಲ್ಯಮಾನಮಕುಟಕುಂಡಳನುಂ ನಾನಾಭರಣಭಾಸುರೋದಾರವಿಗ್ರಹನುಂ ನಿಜತೇಜೋನಿರ್ಭರನಿರ್ಭರ್ತ್ಸಿತರವಿಗ್ರಹನುಂ ಜನ್ಮಾಂತರಾಭ್ಯಾಸಜನಿತಾವಧಿಬೋಧೋದಯವಿದಿತಕಾಲನಿಯೋಗನುಂ ಅಷ್ಟಶತಾಧಿಕಚಾಪಸಹಸ್ರೋತ್ಸೇಧನುಂ ಪಲ್ಯೋಪಮದಶಮಭಾಗಾಯುಷ್ಯನುಮಪ್ಪ ಗ್ರಿಮಕುಳಧರಂ ಪ್ರತಿಶ್ರುತಿಯೆಂಬಂ,

ಜ್ಯೋತಿರ್ಭೂಜಾತತೇಜಂ ಪಸರಿಸುವುದಱಿಂದಿಂನೆಗಂ ಕಂಡುದಿಲ್ಲಿಂ
ತೀತೇಜೋರೂಪಮಾಗಿರ್ಪುವಿನಶಶಿಬಿಂಬಂಗಳೀತೋರ್ಪುದೇನಾ ।
ಜ್ಯೋತಿರ್ಲೋಕಂ ಮನಂಗುಂದದಿರಿಮಿವು ಮನಸ್ತಾಪಮಂ ಮಾಡವೆಂದಾ
ಭೀತಾತ್ಮಾರ್ಯರ್ಕಳಂ ಸಂತಯಿಸಿದನಮೃತಾಸಾರಸಾರಪ್ರಣಾದಂ ॥ ೫೨

ವ॥ ಆಮನ್ವಂತರಮಸಂಖ್ಯೇಯವರ್ಷಕೋಟಿ ಕುಂದುತ್ತುಂ ಬರ್ಪಿನಂ ತತ್ಪ್ರಸ್ತಾವದೊಳ್ ತ್ರಿಶತಯುತಸಹಸ್ರದಂಡೋಚ್ಛ್ರಿತಶರೀರನುಂ ಪಲ್ಯೋಪಮದಶಭಾಗಾಯುಷ್ಯನುಮಪ್ಪ[1] ಸನ್ಮತಿಯೆಂಬೆರಡನೆಯ ಮನು ಪುಟ್ಟಿದಂದು,

ತಾರಗೆಗಳಗೆಗಳಂತಿರೆ
ತಾರಾಪಥದೊಳ್ ನಿರಂತರಂ ತುಱುಗಿರೆ ಕಂ।

---

[1]ಗ—ಮಖಮಪೋತಪರಮಾಯುಷ್ಯನುಮಪ್ಪ.

ಡೋರಂತೆ ನೆಡುಗುವಾರ್ಯರ
ನಾರಾಧಿತಬೋಧನಾತನಿಂತಿರೆ ನುಡಿದಂ ॥ ೫೪

ಉದಯಾಸ್ತಸಮಯವಿಾಳಿಕಂ
ದ್ರದಿವಾಕರಮಂಡಲಕ್ಕಮಿಲ್ಲಿಂದಂ ತೋ ।
ರ್ಪುದು ತಾರಕಾಳಿ ನಭಮಂ
ಪುದಿದಿರ್ಕುಮಿದರ್ಕೆ ನಿಮಗೆ ಮನಕತಮೆಂಟೇ ॥ ೫೫

ವ॥ ಎಂದವರ್ಗೆ ಸನ್ಮತಿವಿಕಾಸಮಂ ಮಾಡಿದುದಱಿನಾಮನುಗೆ ಸನ್ಮತಿಯೆಂಬ ಪೆಸರಾದುದು. ಆತನಿಂ ಬಱಿಯಮಸಂಖ್ಯೇಯಸಂವತ್ಸರಪ್ರಮಿತಮನ್ವಂತರಾವಸಾನದೊಳಷ್ಟಶತವಿಶಿಖಾಸನೋತ್ಸೇಧನುಮಸಂಖ್ಯೇಯಾಯುಷ್ಯನುಮಾಗಿ ಮೂಱನೆಯ ಕುಳಧರನಾದಂ. ಆಕಾಲದೊಳ್,

ಎಳಸಿ ಬಳಸಿರ್ಪ ಮೃಗಸಂ
ಕುಳಂಗಳಂದನಿತುಮೊಡನೆ ಕೋಳ್ಮಿಸಗಿದೊಡಾ ।
ಕುಳರಾದಾರ್ಯಜನಕ್ಕವ
ನೆಳವಡಿಸುವ ಬಗೆಯನಾಮಹಾತ್ಮಂ ಪೇೞ್ದಂ ॥ ೫೬

ವ॥ ಅದಱಿಂದಾತನಂ ಕ್ಷೇಮಂಕರನೆಂದು ಪೆಸರನಿಟ್ಟರ್. ಆತನಿಂಬಱಿಯಮನಿತಾನುಂ ಕಾಲದಿಂ ಪಂಚೋತ್ತರಸಪ್ತತಿಯುತಸಪ್ತಶತಕಾರ್ಮುಕೋತ್ಸೇಧಕಾಯನುಂ ತುಟಿತಾಬ್ದಪ್ರಮಿತಜೀವಿತನುಮಾಗಿ ನಾಲ್ಕನೆಯ ಕುಳಧರಂ ಪುಟ್ಟಿ ಪಾಪಸತ್ವಂಗಳ್ ಕಾಡೆ ಲಕುಟಯಷ್ಟ್ಯಾದಿವಿಧಿಯನುಪದೇಶಂಗೆಯ್ದಾತಂ ಕ್ಷೇಮಂಧರನೆಂಬ ಪೆಸರಂ ಪಡೆದಂ. ಅಲ್ಲಿಂ ಬಱಿಯಮನೇಕ ಕೋಟಿಸಂವತ್ಸರಂಗಳ್ ಪೋದಿದಿಂಬಱಿಯಂ ಪಂಚಾಶದಭ್ಯಧಿಕಸಪ್ತಶತಕೋದಂಡಪ್ರಮಾಣಮೂರ್ತಿಯುಂ ಕಮಳಪ್ರಮಿತಾಯುಷ್ಯನುಮಾಗಿ ಕಮಳವದನಂ ಪಂಚಮಕುಳಧರಂ ಪುಟ್ಟಿ,

ಸೀಮಾವಿವಾದದಿಂ ತ
ದ್ಭೂಮಿಜಬೋರೊರ್ವರಂ ಪಳಂಚಲೆವೆಡೆಯೊಳ್ ।
ಸೀಮೆಗಳ ತೊಡರನುಡುಗಿಸಿ
ಸೀಮಂಕರನೆಂಬುದೊಂದು ಪೆಸರಂ ಪಡೆದಂ ॥ ೫೭

ವ॥ ಆತನ ವಿರಾಮದೊಳನೇಕಾಬ್ಧಕೋಟಿಗಳ್ ಕಡೆಯೊಳ್ ಪಂಚವಿಂಶತ್ಯನ್ವಿತಸಪ್ತಶತಬಾಣಾಸನೋಚ್ಛ್ರಾಯನುಂ ನಳಿನಪ್ರಮಾಣಾಯುಷ್ಯನುಮಾಗಿ ನಳಿನಾನನನಾಱನೆಯ ಕುಳಧರಂ ಪುಟ್ಟಿ ಮರ್ಯಾದಾವಿಪ್ರತಿಪತ್ತಿಯಿಂದಮುಳ್ಳಾರ್ಯಜನಕ್ಕಾಕೃಷ್ಟಿಶುದ್ಧಿಯಂ ಮಾಡಿ ಸೀಮಂಧರನೆಂಬನಾದಂ. ಆಮಹಾಪುರುಷನಿಂ ಬೞಿಯಮನೇಕವರ್ಷಕೋಟ್ಯಂತರದೊಳ್ ಸಪ್ತಶತಶಿಳೀಮುಖಾಸನೋನ್ನತಾಪಘನನುಂ ಪದ್ಮಪ್ರಮಿತಾಯುಷ್ಯನುಮಾಗಿ ಪದ್ಮವದನನೇೞನೆಯ ಕುಳಧರಂ ಪುಟ್ಟಿ,

ಬನಕಂ ಪ್ರೊಲಕಂ ನಡೆಯ
ಲ್ಕಿನಿಸಾಱದೆ ಮಱುಗುವಾರ್ಯರಂ ಕಂಡು ಮನೋ ।
ಜನಿತದಯಂ ಕರಿಹರಿವಾ
ಹನಂಗಳಂ ಪಡೆದು ವಿಮಳವಾಹನನಾದಂ ॥ ೫೮

ವ॥ ಆತನಿಂ ಬೞಿಯಮಸಂಖ್ಯಾತವರ್ಷಂಗಳ್ ಸಲೆ ಪಂಚಸಪ್ತತ್ಯುತ್ತರಷಟ್ಛತ[1]ಬಾಣಾಸನೋತ್ಸೇಧನುಂ ಪದ್ಮಾಂಗಪ್ರಮಿತಾಯುಷ್ಯನುಮಪ್ಪೆಂಟನೆಯ ಮನು ಪುಟ್ಟಿ,

ಸುತಮುಖಕಮಳಾಲೋಕನ
ಮತಿವಿಸ್ಮಯಮಾಗೆ ಮಱುಗುವಾರ್ಯಜನಕ್ಕಾ ।
ಯತಿಯುಕ್ತಂ ತದ್ವ್ಯಕ್ತಿಯ
ನತಿವಿದಿತಂಮಾಡಿ ತಿಳಿಪಿದಂ ಚಕ್ಷುಷ್ಮಂ ॥ ೫೯

ವ॥ ಅಂತಾತನಿಂ ಬೞಿಯಂ ಕೆಲವುಕಾಲಂ ಕೞಿಯೆ ಪಂಚಾಶದಧಿಕಷಟ್ಛತಚಾಪೋತ್ಸೇಧವಪುವುಂ ಕುಮುದಪರಿಮಿತಾಯುಷ್ಯನುಮಪ್ಪೊಂಭತ್ತನೆಯ ಮನು ಪುಟ್ಟಿ,

ಪೆಸರಿಲ್ಲದಾರ್ಯರೆಂಬೀ
ಪೆಸರೊಳ್ ಮುಂ ನಡೆಯದೀವ್ಯವಹಾರಂ ।
ಪೆಸರಿಲ್ಲದೊಡೆಂದಾಮನು
ಪೆಸರಿಟ್ಟು ಯಶಸ್ವಿಯೆಂಬ ಪೆಸರಂ ಪಡೆದಂ ॥ ೬೦

---

[1] ಖ.—ಶತ.

ವ॥ ಆತನಿಂ ಬೞಿಯಮನೇಕಸಂವತ್ಸರಸಹಸ್ರಾತಿಕ್ರಮದೊಳ್ ಪಂಚವಿಂಶತ್ಯಧಿಕಷಟ್ಛತಧನುರುತ್ಸೇಧನುಂ ಕುಮುದಾಂಗಸಂಖ್ಯಾತವರ್ಷಾಯುಷ್ಯನುಮಾಗಿ ದಶಮಕುಲಧರಂ ಪುಟ್ಟಿ ಚಂದ್ರನಂ ತೋಱಿ ಕೂಸುಗಳನಾಡಿಸುವುದಂ ತೋಱುವನಪ್ಪುದಱಿಂದಾತನಭಿಚಂದ್ರನೆಂಬ ನಾಮಮನೆಯೆ ಪೆಸರ್ವಡೆದಂ. ಆಮನುವಿನ ಕಡೆಯೊಳನೇಕವರ್ಷಸಹಸ್ರಂ ಸಲೆ ಷಟ್ಛತಕಾಂಡಾಸನೋತ್ಸೇಧಶರೀರನುಮಯುತಪ್ರಮಾಣಾಯುಷ್ಯನುಮಾಗಿ ಪನ್ನೊಂದನೆಯ ಕುಳಧರಂ ಪುಟ್ಟಿ,

ಮಂಜಿನ ಮಱೆಯೊಳ್ ಮಸುಳ್ದಿರೆ
ಕಂಜಪ್ರಿಯಕುಮುದಬಂಧುಗಳ್ ಜನಮಂ ನೀ ।
ಮಂಜಲಿವೆಂದಱಿವಮರ್ದಿನ
ಮಂಜಮೆಗೊಟ್ಟಱಿದು ನಿಱಿಸಿದಂ ಚಂದ್ರಾಭಂ ॥ ೬೧

ವ॥ ಆತನ ಕಡೆಯೊಳಸಂಖ್ಯೇಯವರ್ಷಾನಂತರವಿರಾಮದೊಳ್ ಪಂಚಸಪ್ತತ್ಯುತ್ತರಪಂಚಶತಶರಾಸನೋತ್ಸೇಧಸಂಹನನುಂ ಅಯುತಾಂಗಾಯುಷ್ಯನುಮಾಗಿ ಪನ್ನೆರಡನೆಯ ಕುಲಧರಂ ಪುಟ್ಟಿದಂದು,

ತುಱುಗಿದ ಮುಗಿಲಾಮುಗಿಲಿಂ
ದೆಱಗುವ ಮೞೆ ಕದಡಿ ಬರ್ಪ ತೊಱೆ ಬೆಟ್ಟು ತೆವರ್ ।
ಮೊಱಡುಪಜಲಧಿಗಳೆನೆ ಜನ
ಮಱಿಯಱಿಯೆ ದಲುದ್ಧಬಿದ್ಧಮಾಯ್ತವನಿತಳಂ ॥ ೬೨

ವ॥ ಅಂತು ಕರ್ಮಭೂಮಿಸ್ಥಿತಿಯೊಳುಪನದ್ಯುಪಸಮುದ್ರಮುಪಪರ್ವತಂಗಳತಿಪ್ರಕಟಮಾಗೆ ಸೋಪಾನಪದ್ಧತಿಗಳೊಳ್ ಗಿರಿದುರ್ಗಾರೋಹಣಮುಮಂ ದ್ರೋಣಿಯಾನಪಾತ್ರಾದಿಗಳೊಳ್ ಜಲದುರ್ಗೋತ್ತರಣಮುಮನುಪದೇಶಂಗೆಯ್ದು,

ಇದು ಕರ್ಮಭೂಮಿಯಿಂದಂ
ಪೊದಱ್ದು ತೋಱಿದುದು ಭೋಗಭೂಮಿಸ್ಥಿತಿ ಕುಂ ।
ದಿದುದೆಂದು ಪೇೞ್ದು ಮನು ಜಸ
ಮೊದವೆ ಮರುದ್ದೇವನೆಂಬ ಪೆಸರಂ ಪಡೆದಂ ॥ ೬೩

ವ॥ ಆತನ ಕಡೆಯೊಳ್ ಎಚಿತಮನ್ವಂತರವ್ಯತಿಕರಣದೊಳ್,

ಆತತಯಶೋವಿತಾನನ
ಜಾತಭಯಂ ಪೂರ್ವಪರಿಮಿತಾಯುಷ್ಯಂ ಸಂ ।
ಜಾತವಯಂ ಪಂಚಾಶದು
ಪೇತಧನುಃಪಂಚಶತಸಮುಚ್ಛ್ರಿತದೇಹಂ । ೬೪

ವ॥ ಪದಿಮೂಱನೆಯ ಕುಲಧರಂ ಪುಟ್ಟೆ,

ಪಸರಿಸೆ ಜರಾಯುಪಟಲಂ
ಪಸುಗೂಸುಗಳೊಡಲೊಳವನಗಲ್ಚುವ ಮತಿಯಂ ।
ವಸುಮತಿಗಱಿಪಿ ಮಹಾತ್ಮಂ
ಪ್ರಸೇನಜಿನ್ನಾಮಧೇಯಮಂ ಪ್ರಕಟಿಸಿದಂ ॥ ೬೫

ವ॥ ಆತನಿಂ ಬೞಿಯಮಸಂಖ್ಯೇಯವರ್ಷಪ್ರಮಿತಮನ್ವಂತರಾತಿಕ್ರಮ
ದೊಳ್ ಪದಿನಾಲ್ಕನೆಯ ಮನು ಪುಟ್ಟಿದಂ. ಆತಂ,

ಶಶಿವಿಶದಯಶಂ ನಿಜಕುಲ
ವಿಶೇಷಕಂ ಕರುಣಿ ಪಂಚವರ್ಗಾಧಿಕಪಂ ।
ಚಶತಶರಾಸನತನು ಬುಧ
ಕುಶೇಶಯೋದ್ಬೋಧಕರಲಸತ್ತಿಗ್ಮಕರಂ ॥ ೬೬

ಸುಕದ ಕಣಿಯೆನಿಸಿ ಮಾಪು
ರ್ಬ್ಬಕೋಟಿಪರಮಾಯು ನಾಭಿನಾಮಮಮಾಯ್ತು ।
ರ್ಭಕನಿಕರನಾಭಿನಾಳ
ಪ್ರಕರನಿಕರ್ತನಮನಱಿಯೆ ಪೇೞ್ದುದಱಿಂದಂ ॥ ೬೭

ಸಹಜಮಣಿಭೂಷಣಂಗಳ
ಬಹಳೋದ್ಯದ್ದೀಪ್ತಿಯಿಂದೆ ಚಂದ್ರಾದಿತ್ಯ ।
ಗ್ರಹತಾರಾನಕ್ಷತ್ರಾದಿ
ನಹರ್ನಿಶಂ ಬೆಳಗುವವಮರಗಿರಿಯನೆ ಪೋಲ್ತಂ ॥ ೬೮

ಮಕರಸರಿಜ್ಜಳನಿಧಿಮು
ತ್ಸ್ಯಕೂರ್ಮಚಂದ್ರಾರ್ಕಲಕ್ಷಣಂ ಪದಯುಗದೊಳ್ ।
ಪ್ರಕಟಂ ನೆಲಸೆ ಚರಾಚರ
ಮೆ ಕಾಲ್ಗೆ ಬಂದೆಱಗಿದಂದದಿಂ ಸೊಗಯಿಸುಗುಂ ॥ ೬೯

ಮನುಗಳೊಳೀತನೆ ಪದಿನಾ
ಲ್ಕನೆಯಾತಂ ತಪ್ಪದಪ್ಪನೆನಿಸಿಯುಮಂತಾ ।
ಮನುಗಳೊಳೀತನೆ ಮೊದಲಿಗ
ನೆನಿಸಿದನೇಂ ನಾಭಿ ನಾಭಿಯೋ ಗುಣಗಣದಾ ॥ ೭೦

ವ॥ ಆನಾಭಿರಾಜನ ಕಾಲದೊಳ್ ಪಯೋಧರಕಾಲಸ್ವರೂಪಂ ಚಿತ್ರರೂಪದಿಂ ನಭೋಭಾಗಮಂ ಪರ್ವಿದಾಗಳ್,

ತ್ರಿದಶಶರಾಸನಂ ತಳರ ತೋರಣಮಾಗಿರೆ ಕುಕ್ಕಿನೋಳಿ ಚೆ
ಲ್ವಿದಿರ್ಗೆೞ್ ಬರ್ಪ ಸೊಂನಲಿಗೆಯಾಗೆ ನಿಜಧ್ವನಿ ತೂರ್ಯಮಾಗೆ ರಾ ।
ಗದಿನಿನರಶ್ಮಿಯೆಂಬ ಕಸವಂ ಕೞೆದಂಬರವೆಂಬ ಪಾಱಿನೇ
ಱಿದುದಸಿತಾಂಬುವಾಹಕುಳಮೆಂಬ ಕುಟುಂಬಕದಂಬಕೋತ್ಕರಂ ॥ ೭೧

ನವಮೇಘಧ್ವನಿ ಪುಷ್ಕರಧ್ವನಿ ತರತ್ತಾರಾಳಿ ಪುಷ್ಪೋಪಹಾ
ರವಿಳಾಸಂ ರುಚಿರಾಂಬುದಂ ಯವನಿಕಾವಿನ್ಯಾಸಮಾದಲ್ಲಿ ಚಿ ।
ತ್ರವಿಧಂ ಬಂದವಸರ್ಪಿಣೀನಟನ ಪೇೞ್ದೊಂದಂದದಿಂದೆತ್ತಮಾ
ಡೆ ವಿಯದ್ರಂಗದೊಳಂದದೇಂ ನಲಿದುದೋ ವಿದ್ಯುನ್ನಟೀನರ್ತನಂ ॥ ೭೨

ವ॥ ಅಂತು ಕೊಂಡ ಪದವೞೆಗಳೊಳ್ ಕಳಮಷಷ್ಟಿಕಾವ್ರೀಹಿಯವಯಾವನಾಳಗೋಧೂಮಕಂಗುಸ್ಯಾಮಾಕಕೋದ್ರವನೀವಾರತಿಳತಳಮಸೂರಿಕಾಕುಳುತ್ಥಮುದ್ಗಮಾಷರಾಜಮಾಷಾಢಕೀನಿಷ್ಪಾವಚಣಕಕುಸುಂಭಕಾರ್ಪಾಸಸರ್ಷಪಜೀರಕಧಾನ್ಯಕಾದಿವಿವಿಧಧಾನ್ಯಭೇದಂಗಳುಂ ಕಲ್ಪವೃಕ್ಷಪರಿಕ್ಷಯದೊಳ್ ಪ್ರಜಾಜೀವನೋಪಾಯಹೇತುಗಳಕೃಷ್ಟಪಚ್ಯಂಗಳಾಗಿ,

ಬೆಳೆದೆಱಗಿರೆಯುಮವಂ ಪು
ಲ್ಗಳಿಂದೆ ಬಗೆದಳುರ್ವ ಪಸಿವನಾಮೇಗೊಂಡೇಂ ।

ಗಳ ಗೆಯ್ವೆವೊಂದು ಪಕ್ಷಿಮು
ಕುಳಧರನೆನೆ ನೆಗೞ್ದ ನಾಭಿಯಲ್ಲಿಗೆ ವಂದರ್ ॥ ೭೩

ಬಂದತಿದೀನಮುಖರ್ ನೆಱೆ
ದೆಂದರ್ ಮರಪಟ್ಟು ಕುಡದೆ ಕಲ್ಪಮಹೀಜಂ ।
ನಿಂದುವು ಜಠರಾನಳನಿಂ
ಬೆಂದುವು ತನು ಬಾೞ್ವುಪಾಯಮಾವುದು ದೇವಾ ॥ ೭೪

ಬಡಲನುಣಿಸಿಲ್ಲದಾಗಳ್
ನಡಪುವುದರಿದಾವನನ್ಯಶರಣರೆಮೆಮ್ಮಂ ।
ನಡಪುಪದೇಶದಿನಲ್ಲದೊ
ಡೊಡಗೆಡೆದಪೆವಸುವನಿಲ್ಲಿ ನಿನ್ನಡಿಮೊದಲೊಳ್ ॥ ೭೫

ಎಂಬುದುಮಂಜದಿರೆಂದಮೃ
ತಾಂಬುವನುಗುೞ್ವಭಯವಚನದಿಂದಾಱಿಸಿ ರ ।
ಕ್ತಾಂಬುಜದ ಚೆಲ್ವನಭಯಕ
ರಾಂಬುಜಮಳವಡಿಸೆ ನಾಭಿರಾಜಂ ನುಡಿದಂ ॥ ೭೬

ಬಗೆಯಲ್ವೇಡ ಸುಧಾಮಹೀರುಹದೊಳಾದೌದಾರ್ಯಮಂ ವೀರ್ಯಮಾ
ಯುಗದೊಳ್ ತತ್ತರುಗಿಲ್ಲ ಪಕ್ವಫಲನಮ್ರಾಮ್ರಾದಿಭೂಜಂಗಳೀ ।
ಯುಗದೊಳ್ ಕಲ್ಪಕುಜಂಗಳಂತಿವಱ ಪಣ್ ಭೋಜ್ಯಂಗಳಾರೋಗ್ಯಹೇ
ತುಗಳೀ ಪಣ್ಗಳೆ ಭೋಜ್ಯಮೆಂದು ವಿಳಸದ್ಭಾಗ್ಯೋದಯಂ ತೋಱಿದಂ ॥

ವ॥ ತೋಱಿ ಫಳಪಾಕಾಂತಂಗಳಪ್ಪೌಷಧಿಗಳಂ ಸ್ತಂಬಕರ್ಯಾದಿನಾನಾವಿಧಧಾನ್ಯಂಗಳಂ ಪದನಱಿದುಡುಗುವ ಕಣಂಮಾಡುವೊಕ್ಕುವಡುಕುವ ಬಯಿತ್ತಿಡುವಕ್ಕಿಮಾಡುವ ವಿವಿಧಭಾಜನಂಗಳೊಳಡುವ ಘೃತಲವಣತೈಲಕ್ಷೀರದಧಿವ್ಯಂಜನಂಗಳೊಳ್ ಸಂಸ್ಕಾರಂಮಾಡುವಳವಿಯಱಿದುಣ್ಬುಪಾಯಮಂ ಪುಂಡ್ರೇಕ್ಷುದಂಡಂಗಳಂ ಕಡಿಕಡಿದು ಯಂತ್ರಪೀಡನೆಯಿಂ ರಸಂಗೊಳ್ವ ತೆಱನುಮನಱಿಯೆ ಪೇೞ್ದು,

ಚ್ಯುತಿಯಾಗೆ ಭೋಗಭೂಮಿ
ಸ್ಥಿತಿ ಕಲ್ಪಮಹೀರುಹವ್ಯಪಾಯದೊಳೆಂತುಂ ।

ಕ್ಷಿತಿಪತಿ ಕಲ್ಪಮಹೀಜ
ಸ್ಥಿತಿಯಿಂ ತಾನಿಂತು ಜನಮನೇಂ ನಿಱಿಸಿದನೋ ‖ ೭೮

ಕುಳಧರನುಂ ಕುಳಕರನುಂ
ಕುಳತಿಳಕನುಮೆನಿಪ ನಾಭಿರಾಜಂಗೆ ಲತಾ ।
ಲಳಿತೆ ದಳಿತಾಂಬುಜಾನನೆ
ವಿಳಾಸಲಾವಣ್ಯಕಾಂತಿಯುತೆ ಸತಿ ರತಿವೊಲ್ ‖ ೭೯

ಮರುದೇವಿಯೆಂಬಳಂಬರ
ಚರನರಸುರಯುವತಿರೂಪಸರ್ವಸ್ವಮನಾ ।
ದರದೆ ಬಿದಿ ನೆಱಪಿ ಲಲನಾ
ಸ್ವರೂಪದಿಂ ನಿಱಿಸಿತೆನ್ನದಿನ್ನೇವೊಗಳ್ವೆಂ ‖ ೮೦

ಪೊಳೆವಲರ್ಗಣ್ ಚಾಮರಮೆನೆ
ಲಳಿತಭ್ರೂಲತೆ ಪತಾಕೆಯೆನೆ ಪೆರ್ಮೊಲೆ ಪೊಂ ।
ಗಳಸಮೆನೆ ಮದನಮಂಗಳ
ವಿಳಾಸಚಿಹ್ನಂಗಳವಯವಂಗಳ್ ಸತಿಯಾ ‖ ೮೧

ಮದಕೋಕಿಳಕಳನಿನದೆಯ
ವದನಸುಧಾಸೂತಿ ಬೆಳಗೆ ಪೆಳಱಿದ ತಮಮಿಂ ।
ಪುದಿದು ಪೆಱಗಿರ್ದುದೆನಿಪುದು
ಮದಗಜಗಮನೆಯ ವಿನೀಳಕೇಶಕಳಾಪಂ ‖ ೮೨

ಘನಕುಚಕಳಶೆಯ ಮುಖರಸ
ವನಧಿಯಿನೊಗೆದೊಂದುವಿಂದುಬಿಂಬಕರಂ ಚೆ ।
ಲ್ವೆನೆ ಮೆಱೆವ ಕುಮುದಕುವಳಯ
ವನಂಗಳಾಕೆಯ ಕಟಾಕ್ಷವಿಕ್ಷೇಪಂಗಳ್ ‖ ೮೩

ಮದನತರುಕುಸುಮಮಂಜರಿ
ಮದನಾಂಬುಧಿವೇಳೆ ಮದನಮದಗಜವಿಳಸ ।

ನ್ಮದಲೇಱೆ ಮದನಲಕ್ಷ್ಮೀ
ಮದಲಕ್ಷ್ಮಿಯೆನಲ್ ಮದೇಭಗಮನೆಯ ತಕ್ಕಳ್ ॥ ೮೪

ಮೊಗಮುಂ ತಾವರೆ ಕಣ್ಣನುತ್ಪಳದಳಂ ಧಮ್ಮಿಲ್ಲಮುಂ ಸೋಗೆ ಸೆ
ಳ್ಳುಗುರಂ ಕೇದಗೆ ಪುರ್ಬನಂಗಜನ ಬಿಲ್ ದಂತಾಳಿಯುಂ ಮುತ್ತು ಕೈ ।
ಮುಗಿದಾರಾಧಿಸಿ ಪ್ರೋಲ್ತುವೆನ್ನದೆ ಸರೋಜಾತಾದಿಸಿಸ್ಸಾರವ
ಸ್ತುಗಳೊಳ್ ಪೋಲಿಸುವಂತುಟೇಮ್ಮರುಳನೇ ರೂಪಂ ವಿಚಿತ್ರಾಂಗಿಯಾ

ಪಿರಿದುಂ ವಿಭೂತಿಯಿಂದಂ
ಸುರರಾಜನ ಬೆಸದೊಳಮರನಾಯಕರೆಲ್ಲಂ ।
ನೆರೆದು ವಿವಾಹಮನಾಕೆಗೆ
ದೊರೆಕೊಳಿಸಿದರಿಂತು ನೋಂತ ಕಾಂತೆಯರೊಳರೇ ॥ ೮೬

ಆಭುವನನಾಭಿಯನಿಸಿದ
ನಾಭಿಮಹೀಭುಜಭುಜಾಂತರಾಳಂ ಲಕ್ಷ್ಮೀ ।
ವ್ಯಾಭಾಸಿ ಮತ್ತಮತಿಶಯ
ಶೋಭೆಯನಾಕಾಂತೆಯಿರವಿನೊಳ್ ನೂರ್ಮಡಿಕಂ ॥ ೮೭

ಧವಳಾಪಾಂಗವಿಲೋಕನಾಮೃತಮಯಂ ಭ್ರೂಲಕ್ಷ್ಮರಮ್ಯಂ ಮನೋ
ಭವರಾಜ್ಯೋದಯಹೇತು ಚಾರುಮರುದೇವೀವಕ್ತ್ರಚಂದ್ರಂ ಸಲೀ ।
ಲವಿಳಾಸಸ್ಮಿತಚಂದ್ರಿಕಾಪ್ರಸರದಿಂದೋಪಂಗೆ ನೇತ್ರೋತ್ಪಳೋ
ತ್ಸವಮಂ ಮಾಡಿಯುಮೇನೊ ಮಾಡುವುದು ತಚ್ಚಿತ್ತಾಂಬುಧಿಕ್ಷೋಭಮಂ ॥

ವ॥ ಅಂತನ್ಯೋನ್ಯಪ್ರೇಮಸಂಜಾತಸ್ವಾಂತಸಂಪತ್ಪರಂಪರಾಪರಿಗತಮಾಗಿ ನಿಳಿಂಪದಂಪತಿಯನೆ ಪೋಲ್ವ ದಂಪತಿಗೆ ಪವಿತ್ರೀಭೂತಮಪ್ಪ ಭೂತಳೋದ್ದೇಶದೊಳುತ್ಪತ್ಸ್ಯಮಾನಭಾವಿತೀರ್ಥಕರಪುಣ್ಯದೂತಾಹೂತಂ ಪುರುಹೂತಂ ಬಂದು,

ಕೆದಱಿ ಮನುಷ್ಯದಂಪತಿಗಳಿರ್ದುವನೊಂದೆಡೆಯೊಳ್ ತೆರಳ್ಚಿ ನಾ
ಕದ ಫಣಿಲೋಕದಂದದ ಪೊಱಲ್ಗಳನೀಪೊಱಲೊಂದು ರಮ್ಯಹ ।
ರ್ಮ್ಯದ ಬೆಲೆಗಂಬರಂ ನೆಱೆಯದೆಂಬಿನಮುಜ್ಜ್ವಳಪಂಚರತ್ನಭಾ
ಸ್ವದಸದನಂಗಳಂ ನೆಱೆದುದಂ ಸಮೆದಂ ಪುರಮಂ ಪುರಂದರಂ ॥ ೮೯

ಕನಕಗಿರಿಶಿಖರರತ್ನಾಂ
ಶುನಿಕಾಯಂ ಬೆಳಗೆ ಪೊಳೆದು ಪಜ್ಜ್ವಳಿಸುತ್ತಿ ।
ರ್ಪಿನಪಥಮಣಿಮುಕುರದೊಳಿಂ
ದ್ರನ ಪೋಲಿಲಾಪ್ರೊಲಿಲ ನೆಲಿಲನನುಕರಿಸಿಕುರ್ಗಂ ॥ ೯೦

ಲಪುರಲಲನೆಯ ಕೇಶಕ
ಳಾಪದವೊಲ್ ಮಧುಪನಿಕರನಿಳಯಂ ಸುಮನ ।
ಶ್ರೀಪರಿಪೂರ್ಣಮನಂಗನ
ಕಾಪೆನೆ ಸೊಗೆಯಿಪುದು ಬಳಸಿದುದ್ಯಾನವನಂ ॥ ೯೧

ತುಂಬಿ ಗಿಳಿ ಪುರುಳಿ ಕೋಗಿಲೆ
ಯೆಂಬಿವು ಪೆರಸಮರತರುಗಳಿಂದ್ರನ ಬೆಸದಿಂ ।
ದಂ ಬಂದುಪೆಂದೊಡುಪವನ
ಮಂ ಬಣ್ಣಿಸಲೆನಗೆ ನಾಡೆಯುಂ ಕುಱಿಪಲ್ತೇ ॥ ೯೨

ವಿಳಸದಳಿಗೀತಮುತ್ಕೋ
ಕಿಳನಾದಂ ಸಾಳಕಾನನಂ ಸತ್ತಿಳಕಂ ।
ಲಳಿತಲತಾಂಗಂ ರಮಣೀ
ವಿಳಾಸಮಂ ವನವಿಳಾಸಮೇನಿಲಿಸಿದುದೋ ॥ ೯೩

ಎಳಸುವ ಪುರುಳಿಯ ಗಳಪುವ
ಗಿಳಿಯ ತೆಱಂದಿರಿದು ಪೊರೆವ ಪೆಣ್ದುಂಬಿಯ ಬಿ ।
ಚ್ಚಳಿಪ ಪರಭೃತದ ಕಳಕಳ
ದೊಳೆ ಮಸುಳ್ದುದು ದಿವಿಜಯುಗಳಕಳಕಳನಿನದಂ ॥ ೯೪

ಸಾರಸಹಕಾರಧಾರಾ
ಸಾರಂ ಕೊಳದಳವಿಯಂತೆ ಸುರಿತರೆ ಪಲವುಂ ।
ಧಾರಾಗೃಹಂಗಳತನುವಿ
ಕಾರಮನೊದವಿಪುದು ದೇವದಂಪತಿಗದಱೊಳ್ ॥ ೯೫

ಕುಸುಮಾಪಚಯವ್ಯಸನಾ
ವಸಕ್ತಸುರಯುವತಿಪಾಣಿಪಲ್ಲವರಾಗಂ ।

ಮುಸುಕಿದುದೆನಿಸಿದುದಸುಗೆಯ
ಪೊಸದಳಿರ್ಗಳೊಳೆಸೆವ ಕೆಂಪು ನಂದನವನದೊಳ್ ॥ ೯೬

ಬಾಸಣಿಸಿದುವುತ್ಕಟಕುಸು
ಮಾಸವಪೂರಭದಿ ದೆಸೆಗಳೊಡನಳಿಕುಳವಂ ।
ವಾಸವವನಿತಾವದನಾ
ಬ್ಜಾಸವಸೇಕಪ್ರಭಿನ್ನಮುಕುಳಂ ವಕುಳಂ ॥ ೯೭

ಕಿಱುನಿಱಿಯೊಳೆ ಕಿಱಿದೆಲೆಗಳ
ತುಱುಗಿದ ಚೆಲ್ವೆಳಸಿ ಬಳಸಿ ವನವನಿತೆಯ ಕ ।
ಣ್ಣುಱಿಯೆನೆ ನಿಱಿಗೊಂಡಿರೆ ನಿಱಿ
ನಿಱಿಗನ ನಿಱಿದಳಿರ ನಿಱಿಯನಱಿಯೆಂ ಪೊಗೞಲ್ ॥ ೯೮

ಶತಮುಖನರಸಿಗೆ ಕರ್ಣಾ
ವತಂಸಮಾಗಲ್ಕೆ ನೋಂತ ಪಲ್ಲವಪುಷ್ಪ ।
ಪ್ರತತಿಯನೆ ಮೆಱೆದು ಚೆಲ್ವಿಡೆ
ಗತಿಶಯಮೆನಿಸಿದುದು ಪಾರಿಜಾತಕುಜಾತಂ ॥ ೯೯

॥ ತ್ರಿಪದಿ ॥

ಸುರಯಿಯೊಳ್ಗಿಳಿ ಮುಗುಳ್ವುರಗಿಳಿ ಬಿರಯಿಗೆ
ಮೊರೆವಂತೆ ಮೊರೆವ ಮಱಿದುಂಬಿ ತಳಿರೊಳ್ ।
ಪರಭೃತಂ ಮುಗುಳ್ವ ಪರಭೃತಂ ॥ ೧೦೦

ವ॥ ಸೊಗಯಿಸುಗುಂ. ಮತ್ತಮಲ್ಲಿ,

ಸರಯೂತರಂಗಶೀಕರ
ಪರಿಚಿತಮೇಳಾಲವಂಗಕುಸುಮರಜೋಧೂ ।
ಸರಮುಬಳಾಳಕಸಂಚಳ
ತರಳಂ ಪುೞಿಲೊಳಗೆ ಸುೞಿವುದುಪವನಪವನಂ ॥ ೧೦೧

ವ॥ ಮತ್ತಮಕೃತ್ರಿಮಪ್ರಣಯರಸವಿಸರವಶಗತವಿಬುಧಮಿಥುನಶತರತರಭಸಬಧಿರೀಕೃತಕೃತಕಗಿರಿಗಳೊಳಂ ಕೃತಕಗಿರಿಪರೀತನೂತಚೂತ

ಲತಾಲಿಂಗಿತಶಾತಕುಂಭರಂಭಾವನಾಂತರ್ಗತಮಣಿಭವನಂಗಳೊಳಂ ಮಣಿಮಯಭವನಮರಕತಸೋಪಾನಪಙ್ಕ್ತಿತಂತನ್ಯಮಾನದೀಪ್ತಿಸಂತಾನಾವೃತನಾನಾನೀರಜರಜಃಪಿಂಜರಿತಜಳಜಳಾಶಯಂಗಳೊಳಂ ನೆಱೆದು ಸೊಗಯಿಸುವುದ್ಯಾನವನದ ಕುಸುಮಕಿಸಲಯಪರಾಗಪಿಶಂಗಿತರಂಗತ್ತರಂಗಮಾದಂತೆ,

ಕನಕಸರೋಜಸಂಕುಳರಜಃಪಟಲಾರುಣಿತಂ ಸಮಗ್ರಕಾಂ
ಚನಮಯಸಾರದೀಪ್ತಿಜಟಿಳಂ ಕಳಗೀತವಿಹಂಗಭೃಂಗನಿ ।
ಸ್ವನಸುಭಗಂ ವಿಚಿತ್ರತರಪತ್ರಮಯಂ ನೆಱೆ ಪೋಲ್ಕುಮಾಪುರಾಂ
ಗನೆಯ ಪೊದಟ್ದ ಹೇಮರಶನಾತ್ರಯಮಂ ಪರಿಖಾತ್ರಯಾಂತರಂ ॥ ೧೦೨

ಪರಿಖಾತ್ರಿತಯಕ್ಕೆ ಚತು
ಶ್ಯರಾಸನಾಂತರದೆ ಸುರಶರಾಸನಭಾಭಾ ।
ಸುರಮೊಪ್ಪಿತೋಱುಗುಂ ಪಂ
ಚರತ್ನಪಾಂಶೂಚ್ಚದೀಪ್ತಿದೀಪ್ರಂ ವಪ್ರಂ ॥ ೧೦೩

ವ॥ ಆವಪ್ರಪ್ರಮದೆಗೆ,

ಆಶಾಶಾಂತಮನೆಯ್ದೆ ನೀಳ್ದ ವಿಕಟಾಟ್ಟಾಲಂಗಳೊಳ್ ಕೇತನಾ
ನೀಕಂಗಳ್ ರವಿರಶ್ಮಿಗಳ್ ಪುಗಲಿವೇಡೀರಶ್ಮಿಗಳ್ ಸಾಲ್ಕುಮಿಂ ।
ತೇಕಜ್ಜಂ ಬೆಳಗೆಂಬವೋಲ್ ತುಱುಗಿ ತಳ್ತಿಂಬಪ್ಪಿನಂ ಕಾಂಚನ
ಪ್ರಾಕಾರಂ ನಿಲೆ ತಾಳ್ದುಗುಂ ಕೃತಯುಗಪ್ರಾಕಾರದಾಕಾರಮಂ ॥ ೧೦೪

ಶಾಳಹರಿನೀಲಮಣಿಕಿರ
ಣಾಳಿ ಪೊದಪ್ದೆಸೆಯೆ ರಾಹುಗೆತ್ತಿಗಿದಿರ್ದ ।
ಟ್ಟಾಳಕೆಗಳಲ್ಲಿ ನಾಡೆಯು
ಮಾಳೋಚಂಬೆರಸು ತಡೆದು ನಡೆವಂ ದಿನಪಂ ॥ ೧೦೫

ಎರಡೆರಡಟ್ಟಳೆಗೆ ತರಂ
ತರದಿಂದೊಂದೊಂದು ಗೋಪುರಂ ಪ್ರವಿರಾಜ ।
ನ್ಮರಕತಮಣಿತೋರಣಪರಿ
ಕರಿತಂ ಪುರವಧುಗೆ ವದನಮಿರ್ಪಂತಿರ್ಕುಂ ॥ ೧೦೬

ವ॥ ಅದಱೊಳಗೆ ಸುತ್ರಾಮನೆ ಸೂತ್ರಧಾರನಾಗಿಯುಂ ಕಲ್ಪಜರೆ ಶಿಲ್ಪಿಗಳಾಗಿಯುಂ ಸಮೆದ ಚೆಲ್ವಿಂಗೆ ಸರ್ವತೋಭದ್ರಮೆನಿಸಿದ ಸರ್ವತೋಭದ್ರಂಗಳೊಳಂ ಛಂದೋವಿದ್ಯೆಯಂತೆ ನಾನಾಚ್ಛಂದಮಪ್ಪ ವಳಭಿಚ್ಛಂದಗಳೊಳಂ ನಾಭಿರಾಜಾಂಗಸಂಗತಮಪ್ಪ ನಂದ್ಯಾವರ್ತದಂತೆ ಸೊಗಯಿಸುವ ನಂದ್ಯಾವರ್ತದೊಳಂ ಜನಿಷ್ಯಮಾಣವೃಷಭಜಿನಾವತರಣಮಂಗಳಸಿಹಿತ ಕಳಶದರ್ಪಣದಂತೆ ಪ್ರಶಸ್ತಸ್ವಸ್ತಿಕಾಯಮಾನಸ್ವಸ್ತಿಕಾದಿನಾನಾಮಣಿಮಯಪ್ರಾಸಾದಂಗಳೊಳಂ ವಿವಿಧವಿಧಿಸನಾಥಚತುಶ್ಶೃಂಗಾಧಿಕವೇದಿಕೆಗಳೊಳಂ ವಂದಿವೃಂದಕ್ಕೆ ಚಿಂತಾಮಣಿಭೂಮಿಯುಂ ಗಾಯಕನಿಕಾಯಕ್ಕೆ ಗಂಧರ್ವಭೂಮಿಯುಂ ಕೃತಸುಕೃತಕ್ಕೆ ತಜ್ಜನ್ಮಭೂಮಿಯುಮಿರ್ಪಂತಿರ್ದ ನಗರಲಲನೆಯ ಲಪನಕ್ಕೆ ಕೇಳೀಲೀಲಾಲಲಾಮಲಕ್ಷ್ಮಿಯಂ ತಾಳ್ದಿ-

ಧೃತದೇವೇಂದ್ರವಿಮಾನರುಂದ್ರಮಹಿಮಂ ಶ್ರೀಸಪ್ತಕಕ್ಷಾಸಮ
ನ್ವಿತಮಾಲೋಲದುಕೂಲಕೇತನಕುಳಂ ಮಾಣಿಕ್ಯಹೇಮ್ಯಾವಳೀ।
ವೃತಮುದ್ದ್ಯೋತಿತಸಪ್ತಭೂಮಿಕಮನೇಕೋದಗ್ರಕೂಟಂ ವಿರಾ
ಜಿತಘಂಟಂ ಕಳಧೌತತುಂಗಕಳಶಂ ಚೆಲ್ವಾಯ್ತು ರಾಜಾಲಯಂ॥ ೧೦೭

ವ॥ ಅಂತು ಸಮೆದ ಪುರವರಕ್ಕರಾತಿನಿಕರಕ್ಕಯೋಧ್ಯೆಯಪ್ಪುದಱಿಂದಯೋಧ್ಯೆಯುಮನೇಕನಿಕೇತನಸಮನ್ವಿತಮಪ್ಪುದಱಿಂ ಸಾಕೇತಮುಂ ವಿನೀತಜನಾಕೀರ್ಣಮಪ್ಪುದರಿಂ ವಿನೀತೆಯುಂ ಭವಿಷ್ಯತ್ಕೌಶಲವಿಷಯಸಹಚರ್ಯದಿಂ ಸುಕೌಶಲೆಯುಮೆಂಬ ಪೆಸರ್ಗಳನಿಟ್ಟು ನಾಭಿರಾಜಂಗೆ ರಾಜ್ಯಾಭಿಷೇಕಂಗೆಯ್ದು ಮರುದೇವಿಮಹಾದೇವಿ ವೆರಸು ಸಾಮ್ರಾಜ್ಯಪಟ್ಟಮಂ ಕಟ್ಟಿ ಸಕಳಜನಮುಮನಾಜ್ಞಾಕರಣವಿಧಾನದೊಳ್ ನಿಯೋಜಿಸಿ ದಿವಿಜಕುಜಜನಿತವಸನಪ್ರಸವವಿಲೇಪನಾಭರಣಂಗಳಿಂ ಪೂಜಿಸಿ ಭಗವದಮರಲೋಕಾವತರಣವಿನಿಹಿತಾಂತಃಕರಣನಾಗಿರ್ಪನ್ನೆಗಂ,

ಸುರರಾಜಂ ತಾನೆ ರಾಜ್ಯಾಭಿಷವಣವಿಧಿಯಂ ಮಾಡಿದಂ ಸ್ವರ್ಗದಿಂದಂ
ಪುರುದೇವಂ ಬಂದಪಂ ನಂದನನೆನಗೆನಿಸಲ್ಕಾನೆ ಸಂಸಾರಸಾಖ್ಯಾ।
ಕರನಾಗಿರ್ದಪ್ಪೆನೆಂಬುತ್ಸವದೊಳೆ ಸುಖದಿಂದಿರ್ದನೊಪ್ಪಿರ್ದಯೋಧ್ಯಾ
ಪುರದೊಳ್ ಶ್ರೀನಾಭಿರಾಜಂ ಸುಕವಿಜನಮನೋಮಾನಸೋತ್ತಂಸಹಂಸಂ॥

ವ॥ ಆಪ್ರಸ್ತಾವದೊಳ್,

ಲಯಮಂ ಕರ್ಮಾತಮಸ್ತೋಮಕ್ಕೆ ಜಯಮಂ ಧರ್ಮಕ್ಕೆ ಹೀನಂ ಪರಾ
ಜಯಮಂ ದೋಷಗಣಕ್ಕೆ ಲಕ್ಕೆತೆಱದಿಂ ಮುಂ ಮಾಡಿ ಸರ್ವಾರ್ಥಸಿ।
ದ್ಧಿಯನೀಯಲ್ಕೆ ವಿನೇಯಸಂತತಿಗಭಿಪ್ರಾಯಾರ್ಥಸರ್ವಾರ್ಥಸಿ
ದ್ಧಿಯಿನುದ್ಘಾತತಮಂ ಬರಲ್ಕೆ ಬಗೆದಂ ಸಂಸಾರಸಾರೋದಯಂ ॥ ೧೦೯

ಗ॥ ಇದು ದೇವೇಂದ್ರಮುನೀಂದ್ರವಂದ್ಯಪರಮಜಿನೇಂದ್ರಮುಖ
ಚಂದ್ರವಾಕ್ಚಂದ್ರಿಕಾಪ್ರಸರಪ್ರಸಾದೋದೀರ್ಣಸೂಕ್ತಿ
ಕಲ್ಲೋಲಮಾಲಾಕೀರ್ಣಕವಿತಾಗುಣಾರ್ಣವ
ಪ್ರಣೀತಮಪ್ಪಾದಿಪುರಾಣದೊಳ್
ನಾಭಿರಾಜರಾಜ್ಯಲಾಭವರ್ಣನಂ
ಷಷ್ಠಾಶ್ವಾಸಂ
ಸಂಪೂರ್ಣಂ.

---

ಸಪ್ತಮಾಶ್ವಾಸಂ.

ಶ್ರೀನಿಳಯಮಿದುವೆ ನಾಭಿ
ಸ್ಥಾನಮೆನಲ್ ನೆಱೆವಯೋಧ್ಯೆಗವತರಿಸಲ್ ತ್ರಿ ।
ಜ್ಞಾನಧರಂ ಒಗೆದಂ ಭ
ವ್ಯಾನಂದಕರಂ ಸರಸ್ವತೀಮಣಿಹಾರಂ ॥ ೧

ವ॥ ಅನ್ನೆಗಮಿತ್ತಲ್,

ಯುಗಮಂ ನಿಪ್ಪೊಸತಪ್ಪಿನಂ ಕೃತಯುಗಂಮಾಡಲ್ ಸುರೇಂದ್ರಾಳಿಗಾ
ವಗಮುತ್ಸಾಹಮನುಂಟುಮಾಡಲೆಡೆಗೊಟ್ಟೀರ್ಥಮಂ ನೀಂ ಜಲ ।
ಕ್ಕಗೆ ಮಾಡಲ್ಬಗೆದಪ್ಪುದೆಂದು ನಯದಿಂ ಸಾಕೇತಮುತ್ಕೇತುಬಾ
ಹುಗಳಿಂದಂ ಕರೆವಂತದೇನೆಸೆದುದೋ ಸರ್ವಾರ್ಥಸಿದ್ಧೀಶನಂ ॥ ೨

ವ॥ ಅನ್ನೆಗಮಮರಪತಿ ಪರಮನ ಚರಮಗರ್ಭಾವತರಣಮನವಧಿ
ಯಿಂದಮಱಿದಱುದಿಂಗಳಂಟೆನೆ ಮುನ್ನಮೆ,

ಸುರಿವುದು ತಡೆಯದಯೋಧ್ಯಾ
ಪುರದೊಳ್ ನೀನಿಂದೆ ತೊಡಗಿ ವಸುಧಾರೆಯನಾ ।
ದರದಿನೆನೆ ಸಹಜಭಕ್ತಿಯ
ಭರದಿಂ ಸುರಪತಿಯ ಬೆಸದಿನೊಸೆದಂ ಧನದಂ ೩

ವ॥ ಮತ್ತಂ ಕುಲಶಿಖರಿಶೇಖರಾಯಮಾಣಪದ್ಮಾದಿಸರೋವರನಿವಾಸಿ
ನಿಯರಪ್ಪ ಶ್ರೀಹ್ರೀಧೃತಿಕೀರ್ತಿಬುದ್ಧಿಲಕ್ಷ್ಮಿಗಳೆಂಬಱುವರುಮನಾತ್ಮೀಯ
ಗುಣಗಣಮಣಿವಿಭೂಷಣಂಗಳಿಂ ಜಿನಜನನಿಯನಳಂಕರಿಸಲುಮನಾದ್ಯನಿ
ಧನಜಿನನಿಳಯರುಚಿರರುಚಕಾಚಳದ ಪೂರ್ವದಿಗ್ಭಾಗದ ವೈಡೂರ್ಯ
ಕಾಂಚನಕನಕಾರಿಷ್ಟದಿಕ್ಸ್ವಸ್ತಿಕನಂದನಾಂಜನಮೂಳಕಂಗಳೆಂಬೆಂಟುಂ
ಕೂಟಂಗಳೊಳ್ ರಮಿಯಿಸುವ ವಿಜಯೆ ವೈಜಯಂತೆ ಜಯಂತೆ ಅಪ
ರಾಜಿತೆ ನಂದೆ ನಂದೋತ್ತರೆ ಆನಂದೆ ನಂದಿವರ್ಧನೆಯೆಂಬೆಣ್ಬರುಂ ದಿಗ್ವ
ನಿತೆಯರಂ ಪರಮಜಿನೋತ್ಸವದೊಳ್ ಶೃಂಗಾರಂಬೆರಸು ಭೃಂಗಾರಧಾ
ರಿಗಳಾಗಲುಂ ತತ್ಕುಳದರಿಷ್ಟಪ್ರಾಗ್ದಿಗ್ದೇಶದಮೋಘ ಸುಪ್ರಬುದ್ಧ ರುಂದ್ರ
ವಿಮಳ ರುಚಕ ರುಚಕೋತ್ತರ ಚಂದ್ರ ಸುಪ್ರತಿಷ್ಠಮೆಂಬ ಕೂಟಾಷ್ಟ

ಕಂಗಳೊಳ್ ರಮಿಯಿಸುವ ಸುಪ್ರತಿಷ್ಠಿತೆ ಸುಪ್ರಣಿಧಿ ಸುಪ್ರಬುದ್ಧೆ ಯಶೋಧರೆ ಲಕ್ಷ್ಮೀಮತಿ ಕೀರ್ತಿಮತಿ ವಸುಂಧರೆ ಚಿತ್ರೆಯೆಂಬೆಣ್ಬರುಂ ದಿಗಂಗನೆಯರಂ ನಾಭಿರಾಜಾಂಗನೆಗೆ ಮಣಿದರ್ಪಣಮಂ ಪಿಡಿಯಲುಂ ತನ್ಮಹೀಧರವರುಣಾಶಾವಿಶೇಷಕಮಾಗಿರ್ದ ಲೋಹಿತಾಕ್ಷ ಜಗತ್ಕುಸುಮ ಪದ್ಮ ನಳಿನ ಕುಮುದ ಸೌಮನಸ ಯಶೋಭದ್ರ ಸರ್ವತೋಭದ್ರಂಗಳೆಂಬ ದ್ವಿಗುಣಚತುಃಕೂಟಂಗಳೊಳಂ ಸಂಚರಿಸುವಿಳಾದೇವಿ ಸುರಾದೇವಿ ಪೃಥ್ವಿ ಪದ್ಮಾವತಿ ಕಾಂಚನೆ ನವಮಿಕೆ ಸಿತೆ ಭದ್ರೆಯೆಂಬೆಣ್ಬರುಮಾಶಾವಧೂವರರನಾದಿಪುರುಷಾಂಬಿಕೆಗೆ ಗಾಯಕೀನಾಯಕಿಯರಾಗಿ ವಿಚಿತ್ರಾತಪತ್ರಂಗಳಂ ಪಿಡಿಯಲುಂ ತದ್ಗಿರೀಂದ್ರೋತ್ತರಕಕುದ್ದೇಶದ ಸ್ಫಟಿಕಾಂಜನ ರಜತ ಕುಂಜಳ ರುಚಿರ ರುಚಕ . . . ಸುದರ್ಶನಂಗಳೆಂಬೆಂಟುಂ ಕೂಟಂಗಳೊಳರ್ಪಲಂಬೂಷೆ ಚಿತ್ರರೇಖೆ ಪುಂಡರೀಕಿಣಿ ವಾರುಣಿ ಆದರ್ಶೆ ಶ್ರೀ ಹ್ರೀ ಧೃತಿಯೆಂಬೆಣ್ಬರುಂ ದಿಕ್ಕನ್ಯೆಯರಂ ಮರುದೇವಿಮಹಾದೇವಿಗೆ ಚಾಮರಮನಿಕ್ಕಲುಂ ಮತ್ತಮಾ ಪರ್ವತದ ಪೂರ್ವದಿಗ್ಭಾಗದೊಳ್ ನೆಲಸಿದ ವಿಮಳ ನಿತ್ಯಾವಳೋಕ ಸ್ವಯಂಪ್ರಭ ನಿತ್ಯೋದ್ಯೋತಂಗಳೆಂಬ ನಾಲ್ಕುಕೂಟಂಗಳರಸಿಯರಪ್ಪ ಚಿತ್ರೆ ಕನಕಚಿತ್ರೆ ತ್ರಿಶಿರೆ ಸೂತ್ರಾಮಣಿಯೆಂಬನಾಲ್ವರುಂ ವಿದ್ಯುತ್ಕುಮಾರಿಯರನುದ್ಯದ್ವಿಳಾಸಮಣಿದರ್ಪಣಮನಾವಿಳಾಸರತ್ನಾಕರೆಯಿರ್ದಲ್ಲಿ ಕಣ್ಗೆ ಸೊಗಯಿಸಿ ತಳದಳಿಸಿ ಬೆಳಗಲುಂ ತದವನೀಧರವಿದಿಙ್ನಿಳಯಂಗಳಪ್ಪ ವೈಡೂರ್ಯ ರುಚಕ ಮಣಿಪ್ರಭ ರುಚಕೋತ್ತರಂಗಳೆಂಬ ವಿಕಟಕೂಟಾಧೀಶೆಯರಪ್ಪ ರುಚಕೆ ರುಚಕಾಸ್ಯೆ ರುಚಕಾಂತೆ ರುಚಕಪ್ರಭೆಯೆಂಬೀನಾಲ್ವರುಂ ದಿಕ್ಕುಮಾರಿಕಾಮಹತ್ತರಿಕೆಯರುಮಂ ಮತ್ತಮಾನಗದ ನೆಗೆದ ರತ್ನಕೂಟ ರತ್ನಪ್ರಭ ಸರ್ವರತ್ನ ರತ್ನೋಚ್ಚಯಂಗಳೆಂಬ ಕೃತಕದ್ವಿಕೃತಕವಿಕಟಕೂಟಂಗಳೊಳ್ ಕೊಂಡಾಟದಿಂದಿರ್ಪ ವಿಜಯೆ ವೈಜಯಂತೆ ಜಯಂತೆ ಅಪರಾಜಿತೆಯೆಂಬ ವಿದ್ಯುತ್ಕುಮಾರೀಪುರಂಧ್ರಿಯರಂ ತೀರ್ಥಕರಕುಮಾರಜಾತಕರ್ಮಕರಣಗರ್ಭಶೋಧನಾದಿಗಳ್ಗೆ ವನಿತಾಗೂಢವ್ಯಾಪಾರದೊಳ್ ನೆಗೞಲುಂ ಮತ್ತಮನ್ಯನಗನಿವಾಸಿಗಳಪ್ಪ ಮಾಳಿಕೆ ಮಾಳನಿ ಕನಕದೇವಿ ಕನಕಚಿತ್ರೆ ಪುಷ್ಪಚೂಳಿಕೆ ಮಾಳತಿ ಸುರದೇವಿ ತ್ರಿಶಿರೆ ಮೊದಲಾಗಿ ಪೆಱರುಮಮರಕಾಂತೆಯರನಿಂತೆನಿತಾನುಂ ತೆಱದ ಬೆಸಂಗಳಂ ಧರ್ಮಾನುರಾಗದಿಂ ಸಾಧರ್ಮೇಂದ್ರಂ ಬೆಸಸುವುದು ಮಾಕೆಗಳ್ ಬಂದು,

ಪದೆದ ಮನಂ ಬೆರಸೆಱಗಿದ
ಪದದೊಳದೇಂ ಚೆಲ್ವುವಡೆದುವೋ ಜಿನಜನನೀ ।
ಪದಪಲ್ಲವತಳದೊಳ್ ಸುರ
ಸುದತೀಚಯದಳಕವಲ್ಲರೀಕುಸುಮಂಗಳ್ ೪

ವ॥ ಅಂತು ಸುರಸುದತೀಸಂದೋಹಮಮರಕಾಮಿನೀಮಹತ್ತರಿಕಾನಿಯು
ಮಿತಾತ್ಮೀಯನಿಯೋಗದಿಂ ಜಿನಜನನಿಯ ಮನಮನಱದೋಲಗಿಸುವಲ್ಲಿ,

ತುಡುಗೆಯ ಮಣಿದೀಧಿತಿಗಳ
ಪೊಡರ್ಪು ಮೇಗೊಗೆದು ಕೊಡೆವೊಲೆಸೆದಪ್ಪುದೆಂಬೀ ।
ನುಡಿಗಳ್ಗೆ ಪಂಚರತ್ನದ
ಕೊಡೆಯಂ ಪಿಡಿದಮರಿಜನದ ಮನದಡಿವಿಡಿಗಳ್ ॥ ೫

ಮೃದುಕರತಳವದನದ ಚೆ
ಲ್ವೊದವಿರೆ ಮಣಿವಳಯಕಳರವಂ ಸೊಗಯಿಸೆ ಚೆ ।
ಲ್ವಿದಿರ್ಗೊಳೆ ಬೀಸುವ ಚಮರೀ
ಜದಿನೊರ್ವಳ್ ಪಂಸೆ ಪಾಯ್ವ ಲತೆಯನೆ ಪೋಲ್ತಳ್ ॥ ೬

ಈಕೆಯ ಮುಖೇಂದುಬಿಂಬದಿ
ನೀಕನಕಸರೋಜಮೆಂತುಮಲರ್ದತ್ತೆಂದೀ ।
ಲೋಕಂ ಪೊಗೞ್ವುದು ಕನಕಾ
ಬ್ಜಾಕಾರದ ಡವಕೆವಿಡಿದ ಸುರಸೌಂದರಿಯಂ ॥ ೭

ಅರುಣಸರಸೀರುಹಂ ಮೃದು
ಕರತಳವಿನ್ಯಾಸಮುಮರೆ ಜಿನಜನನಿಯರೊ ।
ಳ್ಗರುಳಂ ಸಮಱುವ ಕನ್ಯಕೆ
ಕರಮೆಸೆದಳ್ ತಳಿರೊಳಳಿಗಳಂ ಮುಚ್ಚುವವೋಲ್ ॥ ೮

ತಾಮರೆಗಂ ಚಂದ್ರಂಗಂ
ತಾಮಸಮಂ ಕಳೆದು ಕಾಣ್ಕೆಮಾೞ್ಪಂತೆವೊಲಾ ।

ತಾಮರಸನಿಭಾಸ್ಯೆಗೆ ಸುರ
ಕಾಮಿನಿ ಕಟ್ಟಿದಿರೊಳೆಸೆಯೆ ಕನ್ನಡಿವಿಡಿದಳ್ ॥ ೯

ಬಿನ್ನಮೆ ಕುರುಳ ನೆಟಿಲ್ಗಳ್
ತನ್ನೊಳೆ ತಳ್ಪೊಯ್ದು ನೆಗೞ್ದ ಕಱಿಯನೆ ಪೋಲ್ತುಂ ।
ನುನ್ನಂ ಸೊಗಯಿಸುತಿರೆ ಸಿರಿ
ಗನ್ನಡಿ ಕನ್ನಡಿವುದಾದುದಿಂದುಶ್ರೀಯಂ ॥ ೧೦

ಅಡಿಯೂಡಲ್ಕಲತಗೆಯಂ
ತುಡಲ್ಕೆ ತುಡುಗೆಯನುಡಲ್ಕೆ ದಿವ್ಯಾಂಬರಮಂ ।
ಮುಡಿಯಲ್ ಪೂಮಾಲೆಯನೋ
ಗಡಿಸದೆ ಕುಡುವಮರಿ ಕಲ್ಪಲತೆಯನೆ ಪೋಲ್ತಳ್ ॥ ೧೧

ತಳದೊಳ್ ತಂಬುಲದೆಲೆಗಳ್
ಪೊಳೆಪಮರ್ದಿರೆ ದೇವಕನ್ಯೆ ಮತ್ತೊರ್ವಳ್ ಕೋ ।
ಮಳಲತೆಯ ನಿಮಿರ್ದ ಕುಡಿಯೊಳ್
ಗಿಳಿ ಪಾಯ್ದತ್ತೆನಿಸಿ ಸತಿಗೆ ತಂಬುಲಮಿತ್ತಳ್ ॥ ೧೨

ಭೀಷಣರಮಣೀಯತೆ ಸುರ
ಯೋಷಿನ್ನಿಕರಕ್ಕೆ ಕಿತ್ತ ಬಾಳಂ ಭೂಷಾ ।
ವೇಷದಿನಮರ್ದತ್ತೆನೆ ಕಳ
ಭಾಷಿಣಿಗಮರಿಯರೆ ಬಳಸಿ ಮೆಯ್ಗಾಪಾದರ್ ॥ ೧೩

ಅತಿಲಲಿತತರ್ಜನೀತ
ರ್ಜಿತಪರಿಜನೆಯರ್ ವಿಚಿತ್ರವೇತ್ರಲತಾಶೋ ।
ಭಿತತಳಕಮಳೆಯರಂತಃ
ಪ್ರತಿಹಾರಿಯರಾದರಮರಕಾಂತೆಯರರೆಬರ್ ॥ ೧೪

ಕಳಕಳಿಪಮರಿಯರಂ ಕ
ಣ್ಣೊಳೆ ಬಗ್ಗಿಸುವಲ್ಲಿ ಕಾಮುಕಾರ್ಮುಕಕರಸಂ ।
ಚಳನಮನೆ ಪೋಲ್ತು ಕರಮೆರ್ದೆ
ಗೊಳಿಸಿದುದಾಕೆಗಳ ವಿಭ್ರಮಭ್ರೂಭಂಗಂ ॥ ೧೫

ಗಮಕಂ ಪ್ರಯೋಗಮಾಭೋ
ಗಮಳಂಕಾರಂ ಪೊಗರ್ ನಯಂ ಮಿಱುಗು ಪೊದ।
ೞ್ದಮರೆ ಕೆಳೆಗೆ ಪಾಡುವಮರಿ ದ
ಳಮರ್ದಂ ಮುಕ್ಕುಳಿಸಿ ಯುಗುೞ್ವ ತೆಱನಂ ಪೋಲ್ತಳ್ ॥ ೧೬

ಜೇನ ಮಱಿ ಕೊಂಡುದಮರ್ದಿನ
ಸೋನೆಯೆ ಸುರಿದತ್ತು ರಸದ ತೊಱಿ ಪರಿದತ್ತೆಂ।
ಬೀನುಡಿಯನೆ ನುಡಿಯಿಸಿದ
ತ್ತಾನಾಕಸ್ತ್ರೀಯ ಗೇಯಮಾಸ್ಥಾಯಿಕೆಯೊಳ್ ೧೭

ಕರಣಾಂಗಹಾರಮೃದುಪದ
ಪರಿಕ್ರಮಂಗಳ ಬೆಡಂಗುಗಳ ಜತಿಯೊಳಳಂ।
ಕರಿಸಿದುದೆಂಬಿನಮಾಡುವ
ಸುರನರ್ತಕಿ ಜಿನನ ಜನನಿಯಂ ಮೆಚ್ಚಿಸಿದಳ್ ೧೮

ವದನರಸಂ ಮದನರಸಂ
ಪೊದೞ್ದೆನಿಸುವಿನಮಮರಿ ನರ್ತಿಸೆ ಚೆಲ್ವಂ।
ಪುದಿದುದುಱಚಲ್ಲಿಯೊಳೆಸೆದುದು
ತದುರೋಜಸರೋಜಮುಕುಳಯುಗಸಂಚಳನಂ ॥ ೧೯

ಇದಱ ದನಿ ಮದವದಳಿಕಳ
ಮೃದುನಿನದದೊಳಂ ಮನೋಜಕಾರ್ಮುಕಗುಣನಾ॥
ದದೊಳಂ ಸೆಣಸುವುದೆನೆ ಸುರ
ಸುದತಿ ಪೆಱಳ್ ಮೆಱೆದು ಬೀಣೆಯಂ ಬಾಜಿಸಿದಳ್ ॥ ೨೦

ತಳದ ಕಡುಗೆಂಪು ಪುದಿದ
ವ್ವಳಸಿರೆ ಸುರಯುವತಿ ಮಧುರತಂತ್ರೀನಾದಂ।
ಕೊಳೆ ಬೀಣೆಯ ದಂಡಿಗೆಯುಂ
ತಳಿರ್ತುದೆಂಬೊಂದು ಶಂಕೆಯಂ ಪುಟ್ಟಿಸಿದಳ್ ॥ ೨೧

ವ॥ ಮತ್ತಮಾಕೆಗಳ ವದನೇಂದುಬಿಂಬಂಗಳ ಬೆಳಗುಗಳೊಳ್ ಗಗನಮಂಡಲಂಗಳೆಲ್ಲಮಿಂದುಮಂಡಲಮಯಮುಮಂ, ನಿಕಾಮಕೋಮಳಪದಪಲ್ಲವವಿನ್ಯಾಸಂಗಳೊಳ್ ಮಣಿಕುಟ್ಟಿಮಮೆಲ್ಲಂ ಪಲ್ಲವಮಯಮುಮಂ, ಅನರ್ಘ್ಯಾಭರಣಕಿರಣಜಾಲಂಗಳೊಳ್ ನರೇಂದ್ರಭವನಮೆಲ್ಲಮಿಂದ್ರಚಾಪಮಯಮುಮಂ, ವಿಲೋಲಲೋಚನಮಯೂಖಸಂತಾನದೊಳ್ ದೆಸೆಗಳೆಲ್ಲಂ ನೀಲೋತ್ಪಳಮಯಮುಮಂ, ಅಂಗಪ್ರಭಾಪ್ರವಾಹದೊಳ್ ದಿವಸಮೆಲ್ಲಂ ಲಾವಣ್ಯಮಯಮುಮಾಗಿ ನಾಭಿರಾಜನ ಭವನಮೆಲ್ಲಮಿಂತು ಮದನಾಮೃತಮಯಮುಮಂ ಶೃಂಗಾರಮಯಮುಮಂ ಸೌಕುಮಾರ್ಯಮಯಮುಮಾಗಿ ತೋಱೆ, ಸುರಮಹತ್ತರಿಕೆಯರಮರಗಣಿಕೆಯರಂ ಪೆಸರ್ವೆಸರೊಳ್ ಕರೆದು, ನಿಪುಣಿಕೆಯಂ ಜಿನಜನನಿಯ ಸೆಜ್ಜೆಯನುಜ್ಜ್ವಳಂಮಾಡಲುಂ, ಚಂದ್ರಿಕೆಯಂ ಚಂದ್ರಕಾಂತದ ಕರಗಮಂ ತೀವಲುಮಮೃತಮತಿಯನಮೃತಾಹಾರದ ಬೋನಮನೆತ್ತಲುಂ, ಲವಲಿಕೆಯಂ ಪರಿಯಣಮಂ ಬಿತ್ತರಿಸಲುಂ, ಪದ್ಮಿಕೆಯನಗಲಂತಂದು ಮುಂದಿರಿಸಲುಂ, ಮನೋಹರಿಯಂ ಪಡಿಸಣಮಂ ನೋಡಲುಂ, ಮಾಳತಿಕೆಯಂ ಬಡ್ಡಿಸಲುಂ, ಉತ್ಪಳಿಕೆಯಂ ಕೈಘಟ್ಟಿನೀಡಲುಂ, ಮಂದಾರಿಕೆಯಂ ಮಂದಾರಮಾಲಿಕೆಯನೆತ್ತಲುಂ, ವಿಳಾಸವತಿಯಂ ಪಸದನಂಗೊಳಿಸಲುಂ, ಲವಂಗಿಕೆಯಂ ಲವಂಗಪಲ್ಲವರಸದೊಳ್ ವಿಳಾಸಾವಾಸಭವನಮನುತ್ತರಿಸಲುಂ, ಪ್ರಭಾವತಿಯನಿಂದ್ರನೀಲಮಣಿಭವನದೊಳ್ ಮಣಿಪ್ರದೀಪಮಂ ಬೆಳಗಲುಂ, ಚಿತ್ರಲೇಖೆಯಂ ಮಣಿಸ್ತಂಭಸಾಲಭಂಜಿಕಾಸ್ತಂಭಂಗಳೊಳ್ ಕುಂಕುಮರಸಪತ್ರಲೇಖೆಯಂ ವಿರಚಿಸಲುಂ, ಮಯೂರಿಕೆಯಂ ಧಾರಾಗೃಹಕ್ಕೆ ಗೃಹಮಯೂರಂಗಳಂ ನಡೆಯಿಸಲುಂ, ಚೂತಲತಿಕೆಯಂ ಕನಕಪಂಜರಾಂತರ್ಗತಕೋಕಿಳಕ್ಕೆ ಚೂತಲತಿಕಾಂಕುರಂಗಳಂ ನೀಡಲುಂ, ಮೃಣಾಳಿಕೆಯಂ ಭವನಕಳಹಂಸೆಗೆ ಬಾಳಮೃಣಾಳನಾಳಂಗಳಂ ನೀಡಲುಮಿಂತು ಪೆಱವುಮಿಸುವೆಸಂಗಳನವರವರ್ಗ್ಗೆ ತಕ್ಕುವಂ ತಕ್ಕಂದದಿಂ ಪೇೞ್ದಾಗಳ್,

ವಸುಧೆಯನೇನಿವಳ್ದಿರರುಣಾಬ್ಜದಳಂಗಳೊಳೞ್ತಿಯಿಂದಮ
ರ್ಚಿಸಿದರೊ ಪೇೞಿಮೆಂಬಿನೆಗಮುಣ್ಮುವ ಪಾದತಳಂಗಳೊಂದು ಕೆಂ ।
ಪೆಸೆವಿನಮತ್ತಲಿತ್ತಲೆಡೆಯಾಡುವ ದಂದುಗದಾಗಳೇಂ ಪೊದ
ಳ್ದೆಸೆದುದೊ ಚಾರುದೇವಗಣಿಕಾಮಣಿನೂಪುರಮಂಜುಶಿಂಜಿತಂ ॥ ೨೦

ಮನವೊಲ್ದಿಂದ್ರನಿವಾಸಸಂಭವಶುಚಿದ್ರವ್ಯಂಗಳಿಂ ಗರ್ಭಶೋ
ಧನಮಂ ದೇವಿಯರಿರ್ದು ಮಾಡೆ ಪೆಱದಿನ್ನೇನೆಂಬುದಾಕಾಂತೆಗಂ ।
ದು ನಯಂ ಬೇಱೆ ಬೆಡಂಗು ಬೇಱೆ ಪೊಳೆವಂಗಚ್ಛಾಯೆಯುಂ ಬೇಱೆ ತೊ
ಟ್ಟನೆ ಮೆಯ್ದೋಱೆ ವಿಶುದ್ಧಮಪ್ಪ ಪಳಿಕಿಂ ಪೆಣ್ಮಾಡಿದಂತೊಪ್ಪಿದಳ್ ॥ ೬೩

ವ॥ ಮತ್ತಮಮರಾಧೀಶಶಾಸನದೊಳ್ ನಾಭಿರಾಜರಾಜಮಂದಿರಾಂಗಣದೊಳ್,

ಧನದಂ ಕಾಂಚನಪಂಚರತ್ನಮಯಮಂ ರೈವೃಷ್ಟಿಯಂ ಮಾಡುವ
ಲ್ಲಿ ನಭೋಭಾಗದಿನಿಂದ್ರಚಾಪಮನಿತುಂ ಭೂಭಾಗದೊಳ್ ಬಂದು ತೊ ।
ಟ್ಟನೆ ಬೇರೂಱಿದುವೋ ಕವಲ್ತುವೊ ಚಳದ್ವಿದ್ಯುಲ್ಲತಾದೀಪ್ತಿಯೆಂ
ಬಿನಮೇಂ ನಾಡೆ ಬೆಡಂಗನಾಳ್ದುದೊ ವಿಯದ್ದಿಗ್ಭಾವಿಭೂಮಂಡಲಂ ॥ ೬೪

ಕೂಡಿತ್ತುದ್ದಾಮರತ್ನಾಂಶುಗಳೊಳ್ ಧರಣೀಭಾಗಮಾಗಳ್ ಬೆಡಂಗಂ
ಮಾಡಿತ್ತಂದೊಂದು ಮಂದಾರದ ಸರಿ ಮಿರುಮದ್ಭೃಂಗಸಂಗೀತಿ ಚೆಲ್ವಂ ।
ನೀಡಿತ್ತಾರುಂದ್ರದೇವಾನಕದೊಡನೆ ಜಯೋದ್ಘೋಷಣಂ ಮಂದಮಂದಂ
ತ್ರೀಡಿತ್ತಾಲೋಲಗಂಗಾಲಲಿತಲಹರಿಕಾಸಾರಸಾರಂ ಸಮೀರಂ ॥ ೬೫

ವ॥ ಅಂತು ಧನದಂ ಸಾರ್ಧಕೋಟಿತ್ರಯಪ್ರಮಿತಪಂಚರತ್ನವೃಷ್ಟಿಯಂ ಪ್ರತಿದಿನಂ ಸುರಿಯೆ,

ಧರೆ ರತ್ನಗರ್ಭಮಾದುದು
ಸುರರೆಲ್ಲಂ ಹರ್ಷಗರ್ಭರಾದರ್ ಪಿರಿದ ।
ಚ್ಚರಿಯೆನೆ ಹಿರಣ್ಯಗರ್ಭನ
ನಿರುಪಮಗರ್ಭಾವತರಣಮಂಗಳವಿಧಿಯೊಳ್ ॥ ೬೬

ವ॥ ಮತ್ತೊಂದು ದಿವಸಮಾಮರುದೇವಿಮಹಾದೇವಿ ಚತುರ್ಥಸ್ನಾನದೊಳ್ ಕಲ್ಪದ್ರುಮದುಕೂಲವಸನೆಯುಮೂರ್ಜಿತದಶನಮಯೂಖಜಳಪ್ರಕ್ಷಾಳಿತದಶನವಸನೆಯುಂ ಸರ್ವಾಂಗೀಣಮೌಕ್ತಿಕಾಭರಣಕಿರಣಾಕೀರ್ಣಸುವರ್ಣದುರ್ಲಕ್ಷಹರಿಚಂದನಾಂಗರಾಗೆಯುಂ ಝುಂಕಾರಾನುಮಿತಕುಂತಳಕುಳಕಾಂತಿಮಧುಕರನಿಕರನಿಭೃತನಿಳಯಮನೋಹರಸನ್ಮಲ್ಲಿಕಾದಾಮೋಪರಾಗೆಯುಮಾಗಿ,

ಪೊಳೆವಮೃತಾಂಶುಬಿಂಬದಧಿದೇವತೆ ದುಗ್ಧಪಯೋಧಿಯಿಂದಮಿ
ಗಳೆ ಪೊಱಮಟ್ಟು ಬಂದ ಕಮಳಾಸನೆ ನಾಭಿನರೇಂದ್ರನೆಯ್ದೆ ಸಂ।
ಗಳಿಸಿದ ಕೀರ್ತಿ ಮೂರ್ತಿಮತಿ ತದ್ವದನಾಬ್ಜವಿಳಾಸವಾಸದೊಳ್
ತೊಳರದೆ ನಿಂದ ವಾಗ್ವನಿತೆಯೆಂಬಭಿಶಂಕೆಯನುಂಟುಮಾಡಿದಳ್ ॥ ೬೩

ವ॥ ಅಂತು ಸೂಳ್ಗೆವಂದನೇಕಮಸೃಣಭಿತ್ತಿವಿಲಿಖಿತೋಪವನಲತಾಭವನ
ಮನೋಭವಕೇಳೀಲಂಪಟನಿಳಿಂಪದಂಪತಿ ವಿದ್ಯಾಧರಮಿಥುನಮನ್ಮಥೋ
ದ್ದೀಪನದೊಳಾತ್ಮೀಯದೇಹಪ್ರಭಾಪ್ರವಾಹಲಲಿತಮಣಿದೀಪ್ತಿಪ್ರಸರದೊಳ
ತುಚ್ಛಮಳಯಜಚ್ಛಟಾಸಿಕ್ತಮರಕತಮಣಿಕುಟ್ಟಿಮಪ್ರಕೀರ್ಣಮಧುಕರ
ಕುಳಶಬಳಮಲ್ಲಿಕಾಮುಕುಳದೊಳತಿಬಹಳಕಾಳಾಗರುಧೂಪಧೂಮಜಾ
ಳೋದ್ಗಾರಿಹರಿನೀಲಗವಾಕ್ಷಜಾಲದೊಳವಿರಳಮುಕ್ತಾದಾಮನಿಕಾಮಕಮ
ನೀಯವಿತಾನದೊಳಮೃತಕಿರಣಮಣಿಪೀಠಿಕಾಧಿಷ್ಠಿತಪರ್ಯಂಕದೊಳ್,

॥ ಲ ಲಿ ತ ರ ಗ ಳೆ ॥

ಶ್ರೀಗೆ ಕುಳಸದನಮೆನೆ ತೊಳಪ ಮಣಿಭವನದೊಳ್ ।
ರಾಗರಸಮೊದವೆ ಸರಸಿರುಹಸಮವದನದೊಳ್ ॥

ಪೊಳೆವ ಪಚ್ಚದೊಳ್ ಸೊಗೆಯಿಸುವ ಮೃದುತಲ್ಪದೊಳ್ ।
ಲಲಿತಗಂಗಾನದೀಲಹರಿಕಾತಲ್ಪದೊಳ್ ॥

ದೇವವನಿತೆಯರೆ ಪರಿವಿಡಿಯೊಳಡಿಗುಟ್ಟೆಯುಂ ।
ದೇವಗಣಿಕೆಯರೆ ಕೊಳೆ ಪಾಡೆ ದನಿ ಮುಟ್ಟೆಯುಂ ॥

ದೇವಿ ಮರುದೇವಿ ವಿಶದೀಕೃತಾಶಾಂತದೊಳ್ ।
ಭಾವಿಜಿನಜನನಿ ಸತಿ ಪವಡಿಸಿ ನಿಶಾಂತದೊಳ್ ॥

ಚಂಡಗಜಗಮನೆ ಪರಿಖಂಡಿತಾಘಾಳಿಯಂ ।
ಕಂಡಳೀರೆಂಟುಮೊಳ್ಗನಸಿನೆಸೆವೋಳಿಯಂ ॥

ಕರಟತಟಗಳತಮದರುಚಿರಮುಖತೇಜನಂ ।
ಶರದಮಳಜಳದನಿಭಧವಳಗಜರಾಜನಂ ॥

ಹಿಮಶಿಖರಿಶಿಖರಸಮವಿಗ್ರಹಸನಾಥನಂ ।
ಕುಮುದದಳಧವಳರುಚಿರುಚಿರವೃಷನಾಥನಂ ॥

ಬಾಲಹಿಮಕಿರಣದಂಷ್ಟ್ರಾನನಜ್ಯೋತಿಯಂ ।
ಲೋಲಲಾಂಗೂಲಮದಸಿಂಧುರಾರಾತಿಯಂ ॥

ಕರಿಕರೋದ್ಧೃತಪಯಃಪೂರ್ಣಘಟವಳಯೆಯಂ ।
ದರದಳಿತಕರಕಳಿತಸರಸಿರುಹನಿಳಯೆಯಂ ॥

ಪ್ರಕಟಮೃದುಮಧುರರಸನಿಪತದಳಿಮಾಳೆಯಂ ।
ವಿಕಚನವಮಾಳಿಕಾಕುಸುಮನವಮಾಳೆಯಂ ॥

ಕುಮುದವನವನಧಿವನವಿಸರಖರಕಿರಣನಂ ।
ವಿಮಳತರಗಗನತಳತಿಳಕಹಿಮಕಿರಣನಂ ॥

ವಿದಿತಕರನಿಕರದಳಿತಾಬ್ಜಿನೀಷಂಡನಂ ।
ಉದಯಗಿರಿಶಿಖರಗತತರುಣಮಾರ್ತಂಡನಂ ॥

ಲಲಿತವಿದ್ಯುಲ್ಲತಾರುಚಿರರುಚಿಮಾಳೆಯಂ ।
ಮಿಳಿರ್ವ ಜಳದೊಳಗೆಪೊಳೆವೆರಡುಮೆಳೆವಾಳೆಯಂ ॥

ಕಳಿತಸರಸಿಜರಜೋರಂಜಿತಾಚ್ಛಾಂಭಮಂ ।
ಜಳಜದಳನಯನಯುಗಮೊಣರ್ದ ಮಣಿಕುಂಭಮಂ ॥

ಚಳಿತಜಳವಿಹಗರವರಮ್ಯದಿಗ್ವಳಯಮಂ ।
ಜಳಚಕುಳನಿಭೃತಜಳಪದ್ಮಿನೀನಿಳಯಮಂ ॥

ಶರದಮಳಗಗನತಳವಿಭವಸಂಕಾಶಿಯಂ ।
ಕರಿಮಕರಕರದಳಿತವೀಚಿವಾರಾಶಿಯಂ ॥

ಸೌಂದರಾನೇಕಮಣಿರುಚಿಜಳಸ್ಯಂದಿಯಂ ।
ಮಂದರೋತ್ತುಂಗಕಂಠೀರವಸ್ಯಂದಿಯಂ ॥

ವ್ಯಾಳಸುರಸೌಂದರೀಜನಿತಬಹುಮಾನಮಂ ।
ಸ್ಥೂಳಮಣಿಖಚಿತಸುರಪರಿವೃಢವಿಮಾನಮಂ ॥

ಫಣಿಫಣಾಸ್ಫುರಿತಮಣಿದೀಪಿಕಾವ್ಯೂಹಮಂ ।
ಕ್ವಣಿತಮಣಿಕಿಂಕಿಣೀನಿನದಫಣಿಗೇಹಮಂ ॥

ವಿರಚಿತೋದ್ದಾಮಸುರಪತಿಧನುಬ್ರಾತಮಂ ।
ಸುರುಚಿರಾಂಶೂಲ್ಲಸದ್ರತ್ನಸಂಘಾತಮಂ ॥

ಧೃತಧಗದ್ಧಗಿತರವನಿರ್ವಳಶಿಖಾಳಿಯುಂ ।
ಸತತಗತಿಪಥಮನಡರ್ವುಜ್ಜ್ವಳಜ್ವಾಲೆಯುಂ ॥

ರಜತಗಿರಿರುಂದ್ರನಂ ಜಿತಶರಚ್ಚಂದ್ರನಂ ।
ನಿಜವದನವನಜಮುಂ ಪುಗುವ ವೃಷಭೇಂದ್ರನಂ ॥

ನೋಡಿ ಗಜಗಮನೆ ಕನಸೆಂದು ಬಗೆವನ್ನೆಗಂ ।
ತೀಡೆ ಕಿವಿಗುಚಿತಮಂಗಳನಿನದಮನ್ನೆಗಂ ॥

ನಿಜಮುಖಾಂಬುಜಮುಮಂಬುಜಮುಮೊಡನಲರ್ವಿನಂ ।
ನಿಜದ ಚೆಲ್ವಮರೆ ನಿಡುಪುರ್ವುಗಳ್ ನಿಮಿರ್ವಿನಂ ॥

ತಱತಱಾಗಿರ್ದ ಕುಂಕುಮದ ನಿಜವದನಮುಂ ।
ತೆಱೆದ ಕಣ್ಗಳೊಳೆ ಧವಳಿಸಿದ ನಿಜವದನಮುಂ ॥

ಚಲಿತಧಮ್ಮಿಲ್ಲದೊಳ್ ತೊಡರ್ದ ಪೂಮಾಲೆಯುಂ ।
ಲಲಿತಮುಖಸಾರಭಕ್ಕೆಱಗುವಳಿಮಾಳೆಯುಂ ॥

ಬಗೆಗೊಳಿಸಿ ತಳರ್ದುಗಜಗಮನೆ ಸುರನಾರಿಯರ್ ।
ಮುಗಿದ ಕೈವೆರಸು ಬರೆ ಜನಮನೋಹಾರಿಯರ್ ॥

ಬಂದು ಜಗದಧಿಪನಂ ಸೋಂಕಿ ಕುಳ್ಳಿರ್ಪುದುಂ ।
ಬಂದ ಬರವವನಿಪತಿಗೊಸಗೆಯುಂ ತರ್ಪುದುಂ ॥

ಕುಂದದಳಧವಳದಶನಾಂಶುಗಳ್ ಪೊಳೆವಿನಂ ।
ಸಂದ ಕನಸುಗಳನವನೊಸೆದು ಸತಿ ಬಗೆವಿನಂ ॥

ಕ್ರಮದಿನಱಿಪುವುದುಮವನಱಿದು ಧರಣೀಶ್ವರಂ ।
ನಿಮಗೆ ಮಗನುಚಿತಧವಳಾತಪತ್ರೇಶ್ವರಂ ॥

ದಿವದಿನವತರಿಪನಪರಿಮಿತಪುಣ್ಯೋದಯಂ ।
ದಿವಿಜಪತಿಕೃತಮಹಾಶ್ಚರ್ಯಮಹಿಮೋದಯಂ ॥

ದುರಿತಬಳತಿಮಿರದಳಚಳನಕರಖರಕರಂ ।
ಲಲಿತಬುಧಕುವಲಯಾನಂದಕರಹಿಮಕರಂ ॥

ತಡೆಯದೆನೆ ವನಜಮುಖಿ ಪಿರಿದುಮನುರಾಗದಿಂ ।
ದಡಿಗಡಿಗೆಸೊಗಯಿಸಿದಳಾಗವೊಗರಾಗದಿಂ ॥

ನೆಗೞ್ದ ಕವಿತಾಗುಣಾರ್ಣವನ ವರ್ಣಿಸುವದಂ ।
ಪೊಗೞ್ದ ಬಗೆದೋದುವರ್ ಮನದೊಳಾಟಿಸುವ್ರದಂ ॥
ಪಡೆವರೀಷೋಡಶಸ್ವಪ್ನದ ಫಲಂಗಳಂ ।
ಪಡೆಯಲಣಮಾಗದ ಸುಖಂಗಳಂಮಂಗಳಂ

ಕಂಡುಪ್ಪವಡಿಸಿ ಮಜ್ಜನ
ಮಂಡನವಿಧಿಯಂ ಲತಾಂಗಿ ನಿರ್ವರ್ತಿಸಿ ಭೂ ।
ಮಂಡಳಪತಿಗಱಿಪಿದೊಡೆರ್ದೆ
ಗೊಂಡದಱ ಫಲಂಗಳನಿತುಮಂ ಮನು ತಿಳಿದಂ ॥ ೨೮

ನಿಮಗೆ ತನೂಜಂ ದಿವದಿಂ
ದವೋಘಮವತರಿಸಿದಪ್ಪನಖಿಳವಿನೇಯ ।
ಪ್ರಮದಕರಂ ದಿವಿಜೇಂದ್ರ
ಪ್ರಮೋದಕರನೆನೆ ಗುಣಾಕರಂ ತೀರ್ಥಕರಂ ೨೯

ಎಂಬುದುಮಧೀಶವಚನಕ
ದಂಬಕಮೆಂಬೊಂದು ತೆಂಕಣೆಲರೊಳ್ ನನೆವೋ ।
ಯ್ತುಂಬಿನಮಾಕೆಯ ತನುಲತೆ
ತುಂಬಿದುದತಿಬಹಳಪುಳಕವಿಪುಳಶ್ರೀಯಿಂ ॥ ೩೦

ವ॥ ಅನ್ನೆಗಂ ಪೂರ್ವೋಕ್ತಸರ್ವಾರ್ಥಸಿದ್ಧೀಶ್ವರನಾಭುವನಾಂಬಿಕೆಯ ಮುಖಾಂಬುಜಾತಮಂ ಪೊಕ್ಕುಮಾಗರ್ಭಸರೋವರಾಂಬುವಿನೊಳ್ ಚಂದ್ರಬಿಂಬದಂತೆ ಸಂಕ್ರಮಿಸಿದಾಗಳಾಗರ್ಭಸ್ಥಿತಾರ್ಭಕನ ವದನಚಂದ್ರನಿರ್ಗತಾಚ್ಛಜಳಚಂದ್ರಿಕೆಯೊಳೊದವಿದಂತಾಮಹಾದೇವಿಯ ಮುಖೇಂದುಮಣಿದರ್ಪಣಲಾವಣ್ಯರಸವಿಸರಮನೊದವಿಸೆ ವಿಕಚಧವಳಕಮಳದಳದೀರ್ಘವಿಳೋಚನಂಗಳಾಲಾವಣ್ಯರಸಪ್ರವಾಹಕ್ಕಾಯತಪ್ರಯಾಣಂಗಳಂ ಪೋಲ್ತುಗರ್ಭಂ ಬಳೆಯೆ ಬಳೆಯೆ,

॥ ಉ ಜ್ಜ್ವ ಳ ॥

ಬಸಿಱ ತೆಳ್ಪಳಿದತ್ತು ಮೊಗಂ ಬೆಳ್ಪೇಱಿದುದೇ ಕುಚಚೂಚುಕಂ
ಮಸುಳ್ದವೇ ತ್ರಿವಳೀರುಚಿಯುಂ ಮೇಣ್ಕುಂದಿತೆ ಮುನ್ನಿನ ಚೆಲ್ವನ ।

ಪ್ಪಸಿಯಬಾಸೆಗೆ ಕರ್ಪಸದತ್ತೇ ಚೋದ್ಯಮಿದೆಂದು ಮಱಲ್ದು ಬ
ಣ್ಣಿಸಿದರಿಂದ್ರನ ಕಾಂತೆಯರಂತರ್ವತ್ನಿಯನಾನೃಪಪತ್ನಿಯಂ ॥ ೩೧

ಜ್ಞಾನಮಯಂ ತೇಜೋನಿಧಿ
ತಾನಿರ್ದಂ ತಾಯ ಗರ್ಭದೊಳ್ ಪೀಡೆಯನಂ ।
ತೇನಂ ಮಾಡಿದನಿಲ್ಲ ಕೃ
ಶಾನುವ ನೆಱಲಳುರದಂತೆವೊಲ್ ಕನ್ನಡಿಯಂ ॥ ೩೨

ವ॥ ಗರ್ಭಾವತರಣಂ ಆಷಾಢಬಹುಳಬಿದಿಗೆಯುತ್ತರಾಷಾಢಾನಕ್ಷತ್ರದ ಬೆಳಗಪ್ಪ ಜಾವದೊಳ್ ಗರ್ಭಕ್ಕವತರಿಸಲೊಡಂ ದೇವೇಂದ್ರಂ ಚತುರ್ನಿಕಾಯಾಮರರ್ವೆರಸಿ ಪ್ರಥಮಕಲ್ಯಾಣಮಂ ನಿರ್ವರ್ತಿಸಿದಂ.

ಪಳಿಕಿನ ಕೊಡದೊಳ್ ಸೊಡರ್ಗುಡಿ
ಬೆಳಗುವವೊಲ್ ಶುದ್ಧಗರ್ಭಗೃಹದೊಳ್ ತೇಜೋ ।
ನಿಳಯಂ ಬೆಳಗಿದನಱಿವಿನ
ಬೆಳಗಿನ ಮೊಳೆ ಮೊಳೆತು ಬಳೆವುದೊಂದಚ್ಚರಿಯೇ ॥ ೩೩

ಸುರತಾರಂಭವಿಭೂತಿಯೊಂದು ತಣಿವಂ ಚಿತ್ತಕ್ಕೆ ಮಾಡಲ್ ಮುಖಾಂ
ಬುರುಹಾಮೋದಮೆ ಸಾಲ್ಗುಮೆಂದು ಮನದೊಳ್ ತಾಳ್ದಿರ್ದದೊಂದಕ್ಕಱಿಂ।
ಮರುದೇವೀವದನಾಂಬುಜಾತರಸಮಂ ಪೀರ್ದಂ ನೃಪಂ ತುಂಬಿ ಕೇ
ಸರಮಂ ಮುಟ್ಟದೆ ಬಂದು ಪದ್ಮಿನಿಯ ಪದ್ಮಾಮೋದಮಂ ಪೀರ್ವವೊಲ್ ॥

ವ॥ ಅಂತು ನಿಜಮನೋನಯನಕಾಂತ ಕಾಂತಾವದನರಸಸರಸಿಜಸೌರಭಮನಾಸ್ವಾದಿಸಿ,

ಕಿಡಿಸಲ್ ಪಂಕಜದರ್ಕನೇಂ ನೆಱೆಯದೋ ನೇತ್ರೋತ್ಪಳಾನಂದಮಂ
ಪಡೆಯಲ್ ಸಾಲದೊ ಮನ್ಮಥಂಗೆ ಜಯಮಂ ಮೋಹಿಯದೋ ಸಾಲದೇಂ ।
ಗಡವಿಾಕಾಂತೆಯ ವಕ್ತ್ರಚಂದ್ರನೆಲೆ ತಾನೇನೆಂದು ಚಂದ್ರಂ ನಭ
ಕ್ಕಡರ್ವಂ ಗೆಲ್ಲದೆ ತನ್ನೊಳುಳ್ಳಮೃತಮಂ ಬಿಂಬಾಧರಸ್ಥಾಮೃತಂ ॥ ೩೪

ವ॥ ಅಂತು ನಾಭಿರಾಜನನುನಯಪ್ರಚುರವಚನರಚನೆಗಳನಂತಃಕರುಣಾನುರಾಗಮಂ ಮಾಡೆಯುಮಮರಮನೋರಮೆಯರಂ ಮನೆಮಱಿದು

ನಿಜಮನೋರಥಂಗಳಂ ಸಲಿಸಿಪುದುಮನುಕ್ರಮದೊಳ್ ಪರಿಪೂರ್ಣಪ್ರಸವ ಸಮಯದೊಳ್,

ಬರೆ ಚೈತ್ರಂ ಕೃಷ್ಣಪಕ್ಷಂ ನೆಗಳ್ದ ನವಮಿ ವಾಸರಂ ಪೂರ್ವರಾತ್ರೋ ತ್ತರಮಾಗಿರ್ದುತ್ತರಾಷಾಢಮೊಳತಿಶುಭಮಂ ಬ್ರಹ್ಮಯೋಗಂ ಮನಂಗೊಂ ಡಿರೆ ಭಾಸ್ವನ್ನಾಭಿರಾಜಾಂಗನೆ ವಿನಯದಿಂ ಪೆತ್ತಳಾ ಭವ್ಯಪದ್ಮಾ ಕರಬೋಧಾದಾಯಿಯಂ ತಿಗ್ಮಕರನುದಯದೊಳ್ ಪುತ್ರನಂ ಪೆತ್ತಳಾಗಳ್ ॥

ವ॥ ಆತ್ರಿಲೋಕತಿಳಕನ ಜನ್ಮೋತ್ಸವದೊಳೀಕಸಮಯಸಮವತೀ ರ್ಣಸರ್ವರ್ತುಕನಂದನವಿಕಸಪಶೋಕವಿಕಚಮಲ್ಲಿಕಾವಿದ್ಧ ಕುಟ್ಮಳಾಡಂ ಬರಕದಂಬಸಾನಂದಾರವಿಂದವಿಕಸಿತಸಿಂಧುವಾರಪ್ರಬುದ್ಧಲೋಧ್ರಂಗಳಂ[1] ರಾಗಮಂ ಬೀಱುವಂತೆ ಮುಗುಳ್ನಗೆನಗುವಂತೆ ಪುಳಕಮನೊಳಕೊಂ ಡಂತೆ ನಗೆಗಣ್ಗಳ ಪೊಳೆಪಂ ಕೆದಱಿದಂತೆ ಚಿನ್ನಪ್ಪುಗಳಂ ಮೊಱೆವಂತೆ ಚಂದ್ರಕಬಳಮಂ ತೊಡೆವಂತೆ ಮುಹೀಕಾಂತೆ ಸೊಗಯಿಸೆ, ನಿಜಪರಿರಕ್ಷ ಣಾಕ್ಷಮಕ್ಷಮಾವಲ್ಲಭಲಾಭಪ್ರಮುದಿತಮೇದಿನೀಹೃದಯದಂತೆ ಜಳಮಪಗ ತಕಲುಷಮಾಗೆ, ಕರ್ಮಭೂತಳೋಪಸರ್ಗವಿಧ್ವಂಸನನಿಮಿತ್ತಮಾಗಿ ನೀ ರಾಜನಂಗೆಯ್ವಂತೆ ತದ್ಧರಾನಳಂ ದಕ್ಷಿಣಾವರ್ತಮಾಗಿ ಪಜ್ವಳಿಸೆ, ಗಗನ ಗಂಗಾಶೀಕರನಿಕರಂಗಳಿಂದಮಾನಂದನಯನಜಲಂಗಳಂ ಸೂಸುವಂತೆ ದಿವ್ಯಾ ನಿಳಂ ತೀಡೆ, ಶರದ್ವಿಧುವಿಶದತದೀಯಯಶಃಪ್ರಸರಕ್ಕವಕಾಶಂಗುಡುವಂತೆ ಜಲಧರಪಟಲನಿರೋಧರಹಿತಮಾಕಾಶಮತಿಪ್ರಕಾಶಿತಾಶಾಂತಮಾಗೆ,

ಪುರುಪರಮೇಶ್ವರನಿಳೆಗವ
ತರಿಸಿದನಿಂದರಸುವಡೆದೆವೆಂಬಂತೆ ವಲಂ ।
ಪರಮಾನಂದಪರಂಪರೆ
ದೊರೆಕೊಂಡತ್ತಿಂತು ಪಂಚಭೂತಂಗಳೊಳಂ ೩೬

ವ॥ ಆಗಳುತ್ತುಂಗಪ್ರಾಸಾದಕೂಟಕೋಟಿಗಳ ಮೇಲೆ ಪುರಶ್ರೀವಿಳಾ ಸಿನಿಯ ರಾಗದ ದಾಂಗುಡಿ ಮಿಳಿರ್ವಂತೆ ಮಿಳಿರ್ವ ನವಾಮ್ರಕಮ್ರಕಿಸ

1ಕ—ಪ್ರಬುದ್ಧ ಲೋಕ ಹೃದಯದಂತೆ ಮಾರ್ದವಂಗಳಂ.

ಲಯುರಕ್ತಾಂಶುಕಧ್ವಜಂಗಳುಂ, ಆಕೆಯ ಶೃಂಗಾರವೆ ಪಲ್ಲವಿಸಿದಂತೆ ಮಹಾದ್ವಾರತೋರಣಸ್ತಂಭಂಗಳೊಳಗೆಸೆವಭಿನವಪ್ರೋಲ್ಲಸತ್ಪಲ್ಲವಸಂದಾನಿತಷಟ್ಪದರವಂದನಮಾಲೆಗಳುಂ, ಆಕೆಯ ವಿಳಾಸಹಾಸವೆ ಪೊಱಪೊಣ್ಮಿದಂತೆ ಬೀದಿಬೀದಿಗಳೊಳ್ಡೆಗಿಱಿದು ಕೆದಱಿದ ಕುಸುಮರಜಂಗಳುಂ, ಆಕೆಯ ನಿರ್ಭರಾನಂದಸಾಂದ್ರಲಾವಣ್ಯದ್ರವವೆ ದೆಸೆದೆಸೆಗೆ ಪಸರಿಸಿದಂತೆ ಕುಂಕುಮಚ್ಛದಪಂಕಚ್ಛಟಾಚ್ಛಾದನದೊಳ್ ಸೊಗಯಿಸುವ ಗೃಹಾಂಗಣಂಗಳುಂ, ಆಕೆಯ ಪರಿವಾರವಾರಾಂಗನಾಗಣದಂತೆ ಯೌವನಮದಮುದಿತಮಾರ್ದಳಿಕವಾಂಶಿಕಪ್ರಹನ್ಯಮಾನವಾದ್ಯಮೃದಂಗವಂಶನಿನದಲಯಚ್ಛಂದಸುಂದರನಟತ್ಸಂದರೀಸಂದೋಹಮುಂ ಅಪೂರ್ವರಮಣೀಯಮಾಗೆ,

ವಿತತೋದ್ಧೃತಪಟವಾಸವಾಸಿತದಿಶಾಕಾಂತಾಗಣಂ ನಿರ್ಭರೋ
ತ್ಥಿತಪಿಷ್ಟಾತಕಪಿಂಜರೀಕೃತವಿಯಚ್ಚಕ್ರಂ ಧ್ವನತ್ತೂರ್ಯಸಂ ।
ತತಿನಾದಪ್ರತಿಪೂರಿತಾಖಿಳಕುಳಕ್ಷೋಣೀಧ್ರಕುಂಜಂ ಜಗ
ಕ್ಕತಿಚೋದ್ಯಾವಹಮಾಗೆ ಪೆಂಪುವಡೆದತ್ತಂತಾತ್ಮಜನ್ಮೋತ್ಸವಂ ॥ ೩೭

ವ॥ ಆಪ್ರಮೋದಪ್ರಸ್ತಾವದೊಳ್,

ತ್ರಿದಶಾನೀಕಾನಕಂಗಳ್ ಮೊಳಗಿದುವು ಕರಾಸ್ಫಾಳನಂ ದೇವರಿಂದಾ
ಗದೆ ಮುಂ ಕಲ್ಪದ್ರುಮಂಗಳ್ ಪೊಸತಲರ್ದಲರಂ ತಾಮೆ ಸೂಲ್ವನ್ನೆಗಂ ಸೂ
ಸಿದುವೇಕಾಯಿತ್ತೊ ಕಿರೀಟಕ್ಕವನತಿಯೆನೆ ದೇವೋತ್ತಮಾಂಗಂಗಳುಂ ಬಾ
ಗಿದುವಾತ್ರೈಲೋಕ್ಯನಾಥೋದಯಮನಱಿಪುವಂತಾತ್ರಿಳೋಕಕ್ಕಮಾಗಳ್॥

ಭವನವನಜ್ಯೋತಿಃಕ
ಲ್ಪವಾಸದೊಳ್ ಕ್ರಮದೆ ಶಂಖಭೇರೀಕಂಠೀ ।
ರವಘಂಟಾಧ್ವನಿಗಳ್ ನೆಗ
ೞ್ದುವು ಭೋಂಕೆನೆ ಸಕಳವಿಷ್ಟಪಾಶ್ಚರ್ಯಂಗಳ್ ॥ ೩೯

ತ್ರಿದಶಾಸನಂಗಳಲ್ಲಾ
ಡಿದುವು ಜಗದ್ಗುರುಗೆ ಬೇಗಮುಚ್ಚಾಸನದಿಂ ।
ದಿದಿರೇೞಿಮೆಂದು ಪೇೞ್ವವೊ
ಲದೇಂ ಕರಂ ತೀರ್ಥಕರರ ಪುಣ್ಯಂ ಪಿರಿದೋ ॥ ೪೦

ವಾಸವನಾಸನಕಂಪದಿ
ನಾಸಮಯದೊಳವಧಿಯಿಂ ಪ್ರಯೋಗಿಸಿ ಬೋಧಾ ।
ವಾಸಪ್ರಿಯನುದಯಮನಱ
ದಾಸನದಿಂದಿೞ್ದು ಮೂಱುಸೂೞ್ ಪೊಡೆವಟ್ಟಂ ೪೧

ವ॥ ಅಂತು ಪೊಡೆವಟ್ಟು ಜನ್ಮಾಭಿಷೇಕೋದ್ಯುಕ್ತಚಿತ್ತನಾಗಳ್ ಚತುರ್ನಿಕಾಯಾಮರೇಂದ್ರಸಮುದಯಮಂ ಘೋಷವಿಶೇಷಾಭಿಭಾಸದಿಂ ಸಾಮಾನಿಕತ್ರಯಸ್ತ್ರಿಂಶತ್ಪಾರಿಷದಾತ್ಮರಕ್ಷಲೋಕಪಾಲಾಭಿಯೋಗ್ಯಕಿಲ್ಬಿಷಕರೊಡನೆ ಗಜತುರಗರಥಪದಾತಿವೃಷಭಗಂಧರ್ವನರ್ತಕೀಪರಿಹಾಸಿಕಂ ಬೆರಸು ಬಂದು ಮುಂದೆ ನಿಲ್ವುದುಂ,

ನೆಗೞ್ದ ದೇವೇಂದ್ರರೆಲ್ಲಂ ಬಳಸಿ ಬರೆ ಮದಶ್ರೀಯುತೈರಾವತಸ್ಕಂ
ಧಗತಂ ನಾನಾತಪತ್ರಸ್ಥಗಿತದಶದಿಶಾಮಂಡಲಂ ದೇವತೂರ್ಯಾ ।
ನುಗದೇವೀಗೀತಜೈನಸ್ತವಸಮುಪಹಿತಾತ್ಮೀಯಚಿತ್ತಂ ವಿಳಾಸಂ
ಮಿಗೆ ಸೌಧರ್ಮೇಂದ್ರನಂದಾಶಚಿ ವೆರಸು ಮಹೋತ್ಸಾಹದಿಂ ಬಂದನಾಗಳ್

ವ॥ ಅಂತು ಗಗನತಳದಿನವನೀತಳಕ್ಕವತರಿಸಿ ವಿವಿಧಮಣಿನಿಕೇತನಾಗ್ರಾವಲಗ್ನಕೇತುಮಾಳಾಪಿಳಸಿತಸಾಕೇತಮಂ ಬಳಸಿ ದೇವನಿಕಾಯಮಿರೆ ಸೌಧರ್ಮೇಂದ್ರಪ್ರಮುಖಚತುರ್ನಿಕಾಯಾಮರೇಂದ್ರವೃಂದಂ ನಾಭಿರಾಜರಾಜಗೇಹಾಂಗಣದೊಳ್ ಸಂದಣಿಸಿ ಬಂದಿರೆ ಶುಚಿಶಚೀಮಹಾದೇವಿ ತಿರೋಹಿತಶರೀರೆಯಾಗಿ,

ಮರುದೇವೀವಿಳಸತ್ಪ್ರಸೂತಿಗೃಹಮಂ ರತ್ನಪ್ರಭಾಭಾರಭಾ
ಸುರಮಂ ಪೊಕ್ಕು ತದಂಗನಾಂಕತಳದೊಳ್ ಬಾಲಾರ್ಕನಂ ಪೋಲ್ತು ಭಾ ।
ಸುರತೇಜೋಧಿಕನಪ್ಪ ಬಾಳನನೊಱಲ್ದೀಕ್ಷಿತುರ್ಮ ನೋಡುತ್ತುಮಿ
ರ್ಬ್ಬರುಮಂ ಮೂಮೆ ಸುರೇಂದ್ರಕಾಂತೆ ಬಲಗೊಂಡುದ್ಯನ್ಮನಃಪ್ರೀತಿಯಿಂ॥

ಎಱಗಿ ಜಗತ್ತ್ರಯಗುರುಗೆೞ್
ಯೆಱಕದೆ ಪೊಗೞ್ದಖಿಳಭುವನಜನನಿಯನಾಗಳ್ ।
ಮಱೆಯಿಸಿ ಮಾಯಾನಿದ್ರೆಯಿ
ನಱೆ ಮಾಯಾಶಿಶುವನಿರಿಸಿ ಮುಂದಂಬಿಕೆಯಾ ॥ ೪೪

ಪಡೆಯಲ್ಕಾಗದ ನಿಧಿಯುಂ
ಬಡವಂ ಪಡೆದಂತೆ ಕಮಳದಳಕರತಳದಿಂ ।
ಪಿಡಿದೆತ್ತಿಕೊಂಡ ಸಂತಸ
ದೊಡವೆಯನಾಂ ಪೊಗಳಲಱಿಯೆನಿಂದ್ರಾಂಗನೆಯಾ ॥ ೪೫

ಅಲರ್ದಲರ್ಗಣ್ಗಳ ನೋಟದೆ
ಸುಲಲಿತತನು ಶಿಶುವ ಮೆಯ್ಯ ತೀಟದೆ ತನಗ ।
ಗ್ಗಲಿಸಿದಲಂಪಂ ಕುಡೆ ಪೊಸ
ತಲರ್ದಂಕುರಿಸಿರ್ದ ಕಲ್ಪಲತೆಯನೆ ಪೋಲ್ತಳ್ ॥ ೪೬

ಮಂಗಳಮನೆ ಪಾಡುತ್ತುಂ
ಮಂಗಳಧಾರಿಣಿಯರಾಗಿ ಮುಂದಂ ನಡೆವಾ ।
ಶಾಂಗನೆಯರಿಂದೆ ದಿವಿಜೇಂ
ದ್ರಾಂಗನೆ ಕರಮೆಸೆದು ಹಂಸಗತಿಯೊಳ್ ಬಂದಳ್ ॥ ೪೭

ವ॥ ಅಂತು ಬಂದು ಜಗತ್ತ್ರಯಪತಿಯಂ ತ್ರಿದಶಪತಿಯ ನೀಡಿದ ಕೇಯೂರರಶ್ಮಿರಂಜಿತಭುಜಯುಗಳಕ್ಕೆ ನೀಡಿದಾಗಳ್ ದಿವಿಜಕುಜಜನಿತಸುಗಂಧದ್ರವ್ಯದ್ರವಸ್ಥಾಸಕಾಂಕಮಂ ನಿಜಾಂಕಮನೇಱಿಸಿಕೊಂಡು,

ತ್ರಿಜಗನ್ನಾಥನ ಮಜ್ಜನಕ್ಕೆ ಮಣಿಪೀಠಾಕಾರದಂತಾಗಿ ವಿ
ಶ್ವಜಗತ್ಪೂಜಿತಮಾಗಿ ಪೆಂಪುವಡೆದಾಹೇಮಾಚಳೇಂದ್ರಕ್ಕೆ ಕ ।
ಲ್ಪಜರಂ ಪೋಗಲೆ ಸನ್ನೆಗೆಯ್ಯೆ ಭಗವಜ್ಜನ್ಮಾಭಿಷೇಕೋತ್ಸವ
ಧ್ವಜಮಂ ಪೋಲ್ತುದು ರತ್ನರಂಜಿತಭುಜಾದಂಡಂ ಸುರಾಧೀಶನಾ ॥ ೪೮

ವ॥ ಆಗಳ್ ಸೌಧರ್ಮೇಂದ್ರನೇಱಿದೈರಾವತಗಜೇಂದ್ರಕ್ಕೆ ನಿಜಗಜೇಂದ್ರಂಗಳಂ ಪಕ್ಕುಮಾಡಿ,

ಹಿಮಕರಬಿಂಬನಿಭಚ್ಛ
ತ್ರಮನೀಶಾನೇಂದ್ರನೆತ್ತಿದಂ ತತ್ಕರವಿ ।
ಭ್ರಮದಿಂ ಪದಪೊದವೆ ಸನ
ತ್ಕುಮಾರಮಾಹೇಂದ್ರರಿಕ್ಕಿದರ್ ಚಾಮರಮಂ ॥ ೪೯

ಲಟಿಹಯುತಂಗಳ್ ದುಗ್ಧ
ಚ್ಛಟೋಜ್ಜ್ವಲಂಗಳ್ ತದಮರಚಮರರುಹಂಗಳ್ ।
ಸ್ಫುಟಹಸಿತಮುಕ್ತಿಲಕ್ಷ್ಮೀ
ಕಟಾಕ್ಷವಿಕ್ಷೇಪರುಚಿಯನೇಂ ತಾಳ್ದುವುವೋ ೫೦

ವ॥ ಅಗಳ್,

ಎಱಗುವ ಮಕುಟಂಗಳ್ ಚೋದ್ಯಮೊಂದತ್ತಮಿತ್ತಂ
ನಿಱುವ ಕರಯುಗಂಗಳ್ ಪ್ರೋಯ್ದು ಪೇಮಾನಕಂಗಳ್ ।
ಮುಱುಕದಮರಕಾಂತಾನರ್ತನಂಗಳ್ ಬೆದಂಗಂ
ಮೊಱೆಯೆ ದಿವಿಜವೃಂದಂ ತಂದುವಂದೊಂದುಚೆಲ್ವಂ ॥ ೫೧

ವ॥ ಆಪ್ರಸ್ತಾವದೊಳ್,

ನೆಗಪ್ದೈರಾವತದಂತಿಗಾದುವು ಮೊಗಂ ಮೂವತ್ತೆರಪ್ಪೊಂದೊಪ್ಪಿದಾ
ಮೊಗವೊಂದೊಂದಱೊಳೆಂಟು ಕೋಡವಱೊಳಂತೊಂದೊಂದಱೊಳ್ ಪೂಗೊಳಂ।
ನೆಗಪ್ದೊಂದೊಂದೆಸದಿರ್ಕುಮಾಕೊಳಗಳಂತೊಂದೊಂದಱೊಳ್ ಚಿತ್ರಪ
ತ್ರಗಣಂ ಪದ್ಮಿಸಿ ನಾಡೆ ಚೆಲ್ವನೊಳಕೊಂಡೊಂದೊಂದೆ ಕಣ್ಗೊಪ್ಪುಗುಂ ॥

ಪೊಸಪೂವಬ್ಜಿನಿಯೊಂದಱೊಳ್ ಸೊಗಯಿಕುಂ ಮೂವತ್ತೆರಬ್ಜೊವಿನೊಳ್
ಪೊಸಗಂಪಂ ಪುದಿದೊಪ್ಪಿ ತೋಱುವೆಸಳ್ಗಳ್ಮೂವತ್ತೆರಪ್ಪೆಲ್ವನ ।
ಪ್ಪೆಸಳೊರೊಂದಱ ಮೇಲೆ ಲೀಲೆ ಮಿಗೆ ಮೂವತ್ತಿರ್ವರೋರಂತೆ ನ
ರ್ತಿಸೆ ದೇವಾಂಗನೆಯರ್ ಬೆಡಂಗನೊಳಕೊಂಡತ್ತಿಂದ್ರರುಂದ್ರದ್ವಿಪಂ॥ ೫೩

ವದನಕ್ಕೆಮ್ಮ ತಳಕ್ಕೆ ನೀಳ್ದ ನೆಗೆಗಣ್ಣಿಂ ತಾಂ ಗಡಂ ತನ್ನ ನೀ
ಳ್ದ ದಳಂಗಳ್ ಗಡ ಪೋಲ್ವೆಯೆಂಬ ಸೆಣಸಿಂ ಮಿಕ್ಕೇವದಿಂದಿಕ್ಕಿ ಮೆ ।
ಟ್ಟಿದರೀಕಾಂತೆಯರೀಸರೋರುಹದಳವ್ರಾತಂಗಳಂ ತಪ್ಪದಂ
ಬುವನೆಂಬನ್ನೆಗಮೇಂ ಬೆಡಂಗೆಸೆದುದೋ ದೇವಾಂಗನಾನರ್ತನಂ ೫೪

॥ ಮಾ ? ನಿ ॥

ನವಕಮಳದಳಂಗಳ್ ಭೀಕರಂ ಬಲ್ಪುಮಾಗಿ
ರ್ಪುವೆ ತಳಕೆ ತಳಂಗಳ್ ನೋಯವೇ ಮೆಟ್ಟಿದಂದಂ ।

ದವಱಿಸಳನವಳ್ದಿರ್ ಮೆಟ್ಟಿದರ್ ಮೆಟ್ಟಿರೆಂಬಂ
ತವಯವದೊಳ್ ಲೀಲಾನೃತ್ಯದಿಂ ಕಣ್ಗೆವಂದರ್ ॥ ೫೫

ನಡೆನೋಡಲ್ ರೂಪು ಕೇಳಲ್ ನುಡಿ ಪುರದ ಜನಕ್ಕಾಯ್ತು ಮುನ್ನಂತೆ ಮೇಗ
ಣ್ಗಿಡರ್ದಾಗಳ್ ಮೆಯ್ಯು ಕಾಣಲ್ ಕಳಕಳಮಿನಿಸಂ ಕೇಳಲಾಯ್ತಂತುಮತ್ತಂ
ನಡೆಗೊಂಡಾಗಳ್ ತನುವ್ಯಕ್ತಿಯನಱಿಯಲಣಂ ಬಾರದಾಯ್ತತ್ತಣಂ ಕಾ
ಣ್ಬೆಡೆಗಂ ಗೆಂಟಾದುದೆಂಬಂತಿರೆ ಗಗನತಳೋದಗ್ರಮಿಯಾಯ್ತಿಂದ್ರಸೈನ್ಯಂ ॥

ವ॥ ಆಗಳ್ ಮೇರುಗಿರೀಂದ್ರಂಬರಮಿಂದ್ರನೀಲಶಿಲಾತಳಮಣಿಮಯಸೋ
ಪಾನಪಙ್ತ್ರಿಯರೂಪದಿನಂಬರಮೆ ಜಿನರಾಜಭಕ್ತಿಯಿಂ ಪರಿಣಾಮಿಸಿದಂ
ತೆ ಸೊಗಯಿಸಿರ್ದ ಸೋಪಾನಪಙ್ತಿಮಾರ್ಗಂಗಳೊಳ್ ನಿಜಸ್ತಂಬೇರಮ
ಘಂಟಾಟೋಪಂ ಬೆರಸಿಂಬಾಗಿ ಪೋಗೆ ಪೋಗೆ,

ಕಡುಗೆಂಪೇಱಿತ್ತು ನಾನಾಭರಣಕಿರಣದಿಂದಾಗಳಾಕಾಶದೊಂದೊಂ
ದೆಡೆ ಬಿಳ್ಪೇಱಿತ್ತು ಚಂಚಚ್ಚಮರರುಹಸಹಸ್ರಂಗಳಿಂ ವ್ಯೋಮದೊಂದೊಂ
ದೆಡೆ ಕರ್ಪೇಱಿತ್ತು ದೇವದ್ವಿರದದ ಘಟೆಯಿಂದಂನಭೋಭಾಗದೊಂದೊಂ
ದೆಡೆಯೆಂಬಂತಾಗೆ ಚೆಲ್ವಾವೆಡೆಯುಮೆಸೆವಿನಂ ರಯ್ಯಮಾಯ್ತಿಂದ್ರಸೈನ್ಯಂ ॥

॥ ಪೃಥ್ವಿ ॥

ಅದೊಂದೆಡೆ ಸುರಾನಕಪ್ರಕಟಘೋಷದಿಂ ಚೆಲ್ವಿವೆ
ತ್ತದೊಂದೆಡೆ ಸುರಾಂಗನಾಮಧುರಗೀತಿಯಿಂದೊಳ್ಪಿವೆ ।
ತ್ತದೊಂದೆಡೆ ಸುರೇಂದ್ರಸೌಂದರಿಯರಾಟದಿಂ ಗಾಡಿವೆ
ತ್ತದೇಂ ಗಗನಮಂಡಲಂ ನೆಱೆಯೆ ಶೋಭೆಯಂ ಪೆತ್ತುದೋ ॥ ೫೮

ನಾಕಿನಿಕಾಯಂ ಜ್ಯೋತಿ
ರ್ಲೋಕಮನವಯವದಿನುೞಿಯೆ ಪೋಗೆ ಬೞಿಕ್ಕಾ ।
ಳೋಕಿಪುದಾಯ್ತದನುತ್ಪಳ
ಕೋಕನದಾಕರಮೆ ಗೆತ್ತು ವಿಸ್ಮಯದಿಂದಂ ॥ ೫೯

ವ॥ ಅಂತು ಪೋಗಿ ಮಂದರಾಚಳಮನೈದಿದಾಗಳ್,

ಇವಿರಂ ಬರ್ಪಂತುಟಾಯ್ತುಚ್ಚಳಿಸುವಮರತೂರ್ಯಪ್ರತಿಧ್ವಾನದಿಂ ರಾ
ಗದಿನೆಚ್ಚತ್ತಾಡುವಂತಾಯ್ತು ನಿಲಿಸಪಟಳಚ್ಛಾಪರಾಯಾಳಿಯಿಂ ಬಂ |
ದಿದಿಗೋಳ್ಗಂತಾಯ್ತು ಕಲ್ಪಕ್ಷಿತಿರುಹಪಟುಪ್ರಸ್ಪಾವೃಷ್ಟ್ಯಾದಿಂದೆಂಬಿನಂ ಚೆ
ಲ್ವಿದಿಗೊಂಡಂತಿಪ್ರಶೈಲಕ್ಕತಿಶಯಮಹಿಮಂ ಬಂದೊಡಂದಾವಿದೇವಂ ॥ ೬೦

ಕಂಬುಲತಾಸುಲಲಿತಲವ
ಣಾಂಬುಧಿಪರಿಧಾನಮಾಗೆ ಚೆಲ್ವಂ ಪಡೆದೀ |
ಜಂಬೂದ್ವೀಪಪ್ರಭುಗಿದು
ಪೊಂಬೆಸದೊಳ್ ಸಮೆದ ಮಕುಟಮಿರ್ಪಂತಿರ್ಕುಂ ॥ ೬೧

ಎಳಸಿ ಸುರಸಮಿತಿ ಕಲ್ಪಂ
ಗಳ ದೆಸೆಯನೆ ಬಿಸುಟು ರಮಿಯಿಸುತ್ತುಮದಲ್ಲಿಂ |
ತಳರದುದಱನೀಸುರನಗ
ಮೊಳಕೊಂಡುದು ತಾನೆ ನಾಕಲೋಕಶ್ರೀಯಂ ॥ ೬೨

ಸಾಸಿರಯೋಜನಮುಮರ್ದು ಸು
ರಾಸುರಸಂಸೇವ್ಯಮಾಗಿ ತೊಂಭತ್ತೊಂಬೈ |
ಸಾಸಿರಯೋಜನಮಂ ನೆಗೆ
ದೀಸುರಗಿರಿ ಪೆಂಪನೇಂ ಪುದುಂಗೊಳಿಸಿದುದೋ ॥ ೬೩

ಜಿನಸವನಮಂಗಳಕ್ಕಾ
ನೆ ನೋಂತೆನೆಂಬಂತೆ ಶಿಖರಿ ನಿಜಶಿಖರದ ಪೆಂ |
ಪನೆ ಮೆಱೆದು ಪೊಸತೆ ಮಾಡಿದು
ದೆನಗಂ ವಿಸ್ಮಯಮನದಱನೀನಗಮಿಾಗಳ್ ॥ ೬೪

ಜಿನನಿಳಯಂಗಳ್ ನಾಲ್ಕುಂ
ಬನದೊಳಮವು ನಾಲ್ಕು ನಾಲ್ಕು ನೆಲಸಿರೆ ಗಿರಿ ಪಾ |
ವನಮುಂ ಪ್ರಸಿದ್ಧಮುಂ ಸುರ
ವಿನುತಮುಮಾಯ್ತಿದಱ ದೊರೆಗೆ ಗಿರಿಗಳುಮೊಳವೇ ॥ ೬೫

ವ॥ ಎಂದು ಮಂದರಮಹೀಧರದ ಮಹಿಮೆಯನಮರೇಂದ್ರನಮರಸಮಿ
ತಿಗೆಲ್ಲಂ ಪೇೞ್ದು ಪೊಗೞುತ್ತುಮದಂ ತ್ರಿಃಪ್ರದಕ್ಷಿಣಂಗೆಯ್ಯೆ,

ತೆರಳ್ದು ಸುರಭೂರುಹಪ್ರಸವಧೂಳಿಯುಂ ಪೊಕ್ಕಳಂ
ಸುರುಳ್ದು ಸರಸೀಸರೋರುಹದಳಂಗಳಂ ಬಂದು ಪಂ ।
ದರೋಪವನಸಂಭವಂ ನಯದಿನಾಡಿಸಿತ್ತಾಗಳ
ಪ್ಸರಃಪ್ರಕರದೊಳ್ಗುರುಳ್ಗಳನದೊಂದು ಮಂದಾನಿಳಂ ೬೬

ಸುರಗಿರಿಯುಂ ಸುರನಿಕರಂ
ತರತರದಡರ್ವಾಗಳಮರಗಣಿಕೆಯರ ಮನಂ ।
ವಿರುಪದಳಿನಿಕರದೊಡನೊಡ
ನಿರದೆಱಗಿದುವಮರತರುಲತಾಂತಾವಳಿಯೊಳ್ ೬೭

ಸುರಗಿಗಿವು ಲಂಬಣಕ್ಕಿವು
ಬರಗಲೆಗಿವು ಮುಗುಳ್ಗಳಿವು ಮೇಖಳೆಗಿವು ನೂ ।
ಪುರರಚನೆಗಿಂತಿವೆಂದಾ
ದರದಿಂದಂ ಕೊಯ್ದರಾಯ್ದು ದಿವಿಜಾಂಗನೆಯರ್ ॥ ೬೮

ಪೊಸಗೆಂಪುಗೊಂಡುಮಂಪಱೊಳ್
ಪಸದನಮಂ ನೆಱೆಯೆ ತಮಗೆ ಮಾಡಿಯುಮೆಂತುಂ ।
ಪೊಸಪೂವಿನ ಪೊಸದುಡುಗೆಯು
ಪಸಪೋಡಿದುದಿಲ್ಲ ದಿವಿಜವನಿತೆಯರ್ಗಾಗಳ್ ॥ ೬೯

ಅಮರೇಶ್ವರನಿಂ ಶಚಿಯಿಂ
ನಮಗಿದನಾಘ್ರಾತಪೂತಮೆನಿಸಿ ಪರೀತ ।
ಭ್ರಮರಾವತಂಸಮಾದುದು
ನಮೇರುಮಂದಾರಪಾರಿಜಾತಸ್ತಬಕಂ ॥ ೭೦

ಘನಸಾರಸರಳಚಂದನ
ವನಮೃದುಪಲ್ಲವಮನಗ್ರಹಸ್ತದೆ ಕೊಂಡೊ ।
ಯ್ಯನೆ ಬೀಸೆ ಚೆಲ್ವುವಡೆದುದು
ಜಿನಂಗೆ ಚಾಮರಮನಿಕ್ಕುವಂತಮರಗಜಂ ॥ ೭೧

ಸರೋವರನದೀನಿರ್ಝರಾಂಬುಪಾಯಿಗಳುಮಾಗಿ ಪರಿತ್ಯಕ್ತಾನ್ಯದೇವತಾಬುದ್ಧಿಗಳನೇಕವನಕುಸುಮಂಗಳಿಂ ವೃಷಭೇಶ್ವರನ ಪದಪಯೋಜಂಗಳನರ್ಚಿಸುತ್ತುಮಿರೆ, ಭರತಸುತಂ ಮರೀಚಿ ಪರಿಗೃಹೀತಪರಿವ್ರಾಜಕನವಸಿದ್ಧಾಂತಭಾಷಿತಂಗಳಿಂ ಮಿಥ್ಯಾತ್ವವೃದ್ಧಿಯಂ ಮಾಡಿ ನಿಜೋಪನ್ಯಸ್ತಮಪ್ಪ ಕಾಪಿಳಸಿದ್ಧಾಂತಮುಮಂ ಯೋಗಶಾಸ್ತ್ರಮುಮಂ ತೋಱಿ ಲೋಕಮಂ ಸರ್ವಜ್ಞಾನಪರಾಙ್ಮುಖಂ ಮಾಡಿರೆ, ಇತ್ತಲಾದಿತೀರ್ಥಕರ್ತಾರನಮರಗಿರಿಯಂತಚಳಿತನುಂ, ಪಾರಾವಾರದಂತಕಲುಷಿತನುಂ, ಅನಿಲನಂತೆ ನಿಸ್ಸಂಗನುಂ, ಅಂಬರದಂತೆ ನಿರ್ಲೇಪನುಮಾಗಿ ನಿಲೆ,

ಅತಿಭಾಸುರಮಪ್ಪ ತನು
ದ್ಯುತಿದೀಪ್ತಿ ತಪೋಗ್ನಿಯೊಳ್ ಪೊದಪ್ಪೆಸೆದುದು ವಿ।
ಶ್ರುತಕನಕಮೆನಿತು ಕಾಯ್ದೊಡ
ಮತಕ್ಯಾದೀಪ್ತಿಪ್ರಕಾಶನಕ್ಕೆಡೆಯಲ್ತೇ॥ ೯೪

ಪವನಗತಂಗಳ್ ಮುನಿಪುಂ
ಗವನ ಜಟಾಜಾಳಲತಿಕೆಗಳ್ ನಿಮಿರ್ದುವನು।
ಪ್ರವಿಶದ್ಧ್ಯಾನಾನಲದ
ಗ್ಧವಿಸ್ಫುರಜ್ಜೀವಕನಕಕಾಳಿಕೆಗಳವೋಲ್॥ ೯೫

ಪೊಸತಲರ್ದಲರ್ಗಳನೊಸೆದ
ರ್ಚಿಸುವಂತಿರೆ ಮುನಿಯ ಪಾದಪದ್ಮದಿನೇಂ ಕ।
ಣ್ಗೆಸೆದುವೊ ವನಲತೆಗಳ್ ಕುಸು
ಮಸಂಕುಳಂ ಸುರಿಯೆ ಸೆಳೆವ ಸೆಳೆಗೊಂಬುಗಳಿಂ॥ ೯೬

ವ॥ ಮತ್ತಮಾಮುನೀಂದ್ರನ ತಪಃಪ್ರಭಾವದೊಳ್ ಅನ್ಯೋನ್ಯವೈರಂಗಳಂ ಮಱೆದು,

ಕರಿಗಳ್ ಕೇಸರಿಗಳ್ಗೆ ಪುಷ್ಕರಧೃತಸ್ವಚ್ಛಾಂಬುವಂ ನೀಡೆ ಭೀ
ಕ್ಷರಶಾರ್ದೂಲಕುಳಂ ಕುರಂಗಕುಲದೊಳ್ ತಳ್ಪೊಯ್ದು ಬಂದಾಡೆ ಕೇ।

ತನು ಕಿಱಿದಾದೊಡಮುದ್ಯ
ತ್ತನುಪ್ರಭಾಪ್ರಸರಮೆಸೆದು ಪಸರಿಸಿ ಸಿಂಹಾ ।
ಸನಮಂ ಪುದಿದಿರೆ ದೇವಂ
ಕನಕಕನಚ್ಛಿಖರಿಶಿಖರಶೇಖರನಾದಂ ॥ ೭೬

ವ॥ ಆಗಳಾಸೌಧರ್ಮೇಂದ್ರನುಮೈಶಾನೇಂದ್ರನುಂ ಸಿಂಹಾಸನದೆರಡೆಕ್ಕೆಲದೊಳಂ ದಕ್ಷಿಣೋತ್ತರಭಾಗದೊಳಿದಿರಾಗಿರ್ದ ಮಣಿಮಯಭದ್ರಾಸನಂಗಳೊಳ್ ಕುಳ್ಳಿರ್ದು ದಿಕ್ಪಾಳರುಮನವರವರ ದಿಗ್ಭಾಗದೊಳ್ ನಿಜಪರಿವಾರವಾಹನಾಂಗನಾಯುಧಸಮೇತಮಿರಿಸಿ ಶೇಷಾಶೇಷದೇವನಿಕಾಯಮುಮನುಚಿತಸ್ಥಾನದೊಳ್ ನಿಱಿಸಿ ಜನ್ಮಾಭಿಷವಣಪರಿಣತಾಂತಃಕರಣನಾದಾಗಳ್,

ಸುರಕರನಿರ್ಭರಹತಿಯಿಂ
ಸುರಸುಂದುಭಿನಿನದಮುಮುರವನಿತಾವದನಾಂ ।
ಬುರುಹದಿನೊರ್ಮೆಯೆ ಮಂಗಳ
ಪರಂಪರಾಗೀತನಿನದಮೊಡವಿತ್ತೆತ್ತಂ ॥ ೭೭

ದುರಿತಘನತಿಮಿರಮೆತ್ತಂ
ತೆರಳ್ದು ಜಿನಸವನಮಂಗಳಕ್ಕಗಿದಾಗಳ್ ।
ಪರೆವಂತಾದುದು ಕಾಳಾ
ಗರುಧೂಪಶ್ಯಾಮಧೂಮಮಾತ್ತವ್ಯೋಮಂ ॥ ೭೮

ಕಳಮಧವಳಾಕ್ಷತಂಗಳ
ಪೊಳೆವಲರ್ಗಳ ಚಂದನದ್ರವೋನ್ಮಿಶ್ರಜಲಂ ।
ಗಳ ಪೊಳೆಪಿನೊಳೆಸೆದು ವಿಯು
ತ್ತಳಂ ಬರಂ ನೆಗೆದುದಿಂದ್ರನರ್ಘ್ಯೋದ್ಧರಣಂ ॥ ೭೯

ವ॥ ಅಲ್ಲಿಂ ಬೞಿಯುಮಶೋಕಪಲ್ಲವೋಲ್ಲಸಿತಚಂದನಚರ್ಚಿತಮಾಳತೀಮಾಳಾವೇಷ್ಟಿತಮಣಿದರ್ಪಣಪ್ರಸಾರಿತವಿಮಳಾರ್ಣವಪಯಃಪೂರ್ಣಕಳಧೌತಕಳಶಂಗಳಂ ಕಳಶೋದ್ಧಾರಮಂತ್ರಪೂರ್ವಕಂ ಪ್ರಣುತಿಪ್ರಸ್ತವನಪುರಸ್ಸರಂ ಮಾಡಿ ಪ್ರಥಮಕಲ್ಪೇಶ್ವರನುಮೈಶಾನೇಂದ್ರನುಮೆತ್ತಿಕೊಂಡು,

ಸಿವಿಗೆ ತಪೆದುಱುಗಲೊಡನಿ
ಕ್ಕುವ ಕುಂಚಕಂ ಲೀಲೆವಡೆಯೆ ಚೆಲ್ವೆಸೆದುದು ಷ ।
ಣ್ಣವತಿಸಹಸ್ರಾಂತಃಪುರ
ಮವಯವದೊಳ್ ಭರತಚಕ್ರವರ್ತಿಯ ಕೆಲದೊಳ್ ॥ ೩೯

ಬಾಸಣಿಸಿದ ಚಿನ್ನದ ಪೊಸ
ವಾಸಣಿಗೆಯ ಪೊನ್ನಸಿವಿಗೆ ಮಣಿಮಯಕಳಶೋ ।
ದ್ಭಾಸಿ ದೆಸೆದೆಸೆಯೊಳೆಸೆಯೆ ವಿ
ಳಾಸಂ ಬೆರಸುಣುಗೆ ಭೋಗಿಯರ್ ಕರಮೆಸೆದರ್ ॥ ೪೦

ಅವಯವದೆ ಕುಣಿದು ಮೆಟ್ಟುವ
ಸವತಿಯ ಬಿಜ್ಜಣಿಗೆ ವಿಡಿದ ಸತ್ತಿಗೆಯ ವಿಳಾ ।
ಸವಮಮರ್ದ ಲೀಲೆಯಿಂ ಪಂ
ಡವಾಸದೊಳ್ ಪೆಂಡಿರೊಯ್ಯನೊಯ್ಯನೆ ನಡೆದರ್ ॥ ೪೧

ಕರಿಣೀವೃಂದದ ಮೇಲೆ ತಳ್ತ ತಪೆಗಳ್ ವಾರಾಂಗನಾಗೀತಮಂ
ದ್ರರವಂಗಳ್ ಚಳಕೇಶಪಾಶಕುಸುಮಾಮೋದಾಸವಾಸಕ್ತಭೃಂ ।
ಗರವಂಗಳ್ ಪ್ರಿಯಕುಬ್ಜವಾಮನಗಣಾಲಾಪಂಗಳತ್ಯಂತಸಾಂ
ದರಶುದ್ಧಾಂತವಧೂಕದಂಬಕಮನೇಂ ಮೆಯ್ವೆರ್ಚಿಸಲ್ಕಾರ್ತುದೋ ॥ ೪೨

ಪೊಳೆವಲರಮರ್ದಿನ ಕಪ್ಪುರ
ವಳುಕಿನ ಕತ್ತುರಿಯ ಕೊಳತ ದುರ್ವಾಭರಣಂ ।
ಗಳ ಪೊಳೆವ ಮಾಣಿಕಂಗಳ
ಬೆಳಗಿದೆ ಸೂಚಿಸಿತು ಭರತನಂತಃಪುರಮಂ ॥ ೪೩

ಶೃಂಗಾರಾಂಭೋಧಿವೇಳಾವಿಳಸನದೆಸಕಂ ಮೇಣ್ ಸ್ಮರಪ್ರಾಜ್ಯಸಾಮ್ರಾ
ಜ್ಯಾಂಗಂ ಮೇಣ್ ಚೈತ್ರಲಕ್ಷ್ಮೀಪರಿಕರವಿಭವಂ ಮೇಣಿದೆಂಬಂತೆ ಲೀಲಾ ।
ಪಾಂಗಜ್ಯೋತ್ಸ್ನಾಮೃತಾಂಭಃಪ್ಲವಧವಳಿತದಿಗ್ಭಿತ್ತಿ ಬಂದತ್ತು ಪುಷ್ಪಾ
ಸ್ತ್ರಾಂಗೀಕಚ್ಛತ್ರಮಾಯ್ತಾ ಜಗಮೆನೆ ಭರತಾಂತಃಪುರಸ್ತ್ರೀಸಮೂಹಂ ॥

ಲಯದಿಂ ಮೆಲ್ಪಿಂ ಬೆಡಂಗಂ ಪಡೆವ ತುರಗದಿಂ ಚಿತ್ರಿತಚ್ಛತ್ರಕಾಲೀ
ಲೆಯಿನುದ್ದಂ ಬರ್ಪ ಚೇಟೀನಿವಹದ ಬರವಿಂ ಭೂಷಣಾಡಂಬರೋದ್ಯೋ

ಸುರಸಂದೋಹದ ತೀವಿತಂದ ಘಟಸಂಘಾತಂಗಳಾನಲ್ಕರ
ಚ್ಕರದಿಂ ಬಾರದೆ ಪಾಣಿ ನಿರ್ಮಿಸಿದ ದೋರ್ದಂಡಂಗಳೊಳ್ ಭೂಷಣೋ ।
ತ್ಕರಮಿಂಬಾಗಿರೆ ಭೂಷಣಾಂಗತರುವಂ ಕುಂಭಂಗಳಾತೋಳ್ಗಳೊಳ್
ಕರಮಿಂಬಾಗಿರೆ ಭಾಜನಾಂಗತರುವಂ ಪೋಲ್ತಂ ಸುರಾಧೀಶ್ವರಂ ॥ ೯೫

ವ॥ ಅಂತು ನಿಜಭುಜಸಹಸ್ರೋದ್ಧೃತಕನಕಕುಂಭಮುಖವಿಗಳಿತಕ್ಷೀ
ರವಾರಿಧಾರೆಯಿಂ ಜಯಜಯನಿನದಪೂರ್ವಕಂ ಜಿನಸವನಪ್ರಥಮಪ್ರಾರಂ
ಭದೊಳ್ ಸೌಧರ್ಮೇಂದ್ರನೀಶಾನೇಂದ್ರನುಂ ಮಿಸಿಸಿದಾಗಳ್,

ಆದುಗ್ಧಧಾರೆ ಕರಮಿಂ
ಬಾದುದು ಜಿನಮಸ್ತಕಾಗ್ರದೊಳ್ ಗಂಗಾಕೂ ।
ಟೋದಗ್ರಶಿಖರದೊಳ್ ಚೆ
ಲ್ವಾದವೊ ಮಿಗೆ ಸುರಿವ ಗಗನಗಂಗಾನದಿವೋಲ್ ॥ ೯೬

ಆಗಳ್ ಕಲ್ಪೇಶ್ವರನನು
ರಾಗದಿನೊಡನೊಡನೆ ಸುರಿಯೆ ಪಾಲ್ಗಡಲೊಂದುಂ ।
ಟಾಗದೆ ಮೇರುವ ತುದಿಯೊಳ್
ಮಾಗಳೆನಲ್ ನೆಱೆದುದಾಪಯಃಪ್ಲವದೆಸಕಂ ॥ ೯೭

ಸುರಜಳದಂಗಳ್ ದುಗ್ಧಾಂ
ಬುರಾಶಿಯೊಳ್ ಪೀಱಿ ಬಂದ ನೀರ್ಗಳನೆತ್ತಂ ।
ಸುರಿದುವು ಜಿನಾರ್ಭಕಾಚಳ
ಶಿರದೊಳ್ ಜಳದಂಗಳಂತು ನಗದೊಳ್ ಸುರಿಗುಂ ॥ ೯೮

ಜಳನಿಧಿ ತೊಱೆಗಳನೆನಿತುಮ
ನೊಳಕೊಳ್ವವೋಲಿನಿಸು ತರಳದಾಶ್ಚರ್ಯಮೆಂಹಾ ।
ಜಳನಿಧಿ ಪಯಃಪ್ಲವಂಗಳ
ನೊಳಕೊಂಡಂ ಸುರರ ಮಿಸಿಸುವವಸರದಾಗಳ್ ॥ ೯೯

ಬಾಳಂ ಬಾಳಮೃಣಾಳದಂತಸುನೆಱಂ ದುಗ್ಧಪ್ಲವಂ ಸ್ನಿಗ್ಧಳಕ
ಲ್ಲೋಳಾಸ್ಫಾಳಿತಹೇಮಶೈಲಮಿದನಿನ್ನೇವಣ್ಣಿದಂ ಶಕ್ರನೆಂ ।

ಬಾಳೋಚಂ ಬೆರಸಿರ್ಪ ದೇವಗಣಮುಂ ನಂಬಿಪ್ಪುದಾಯಾತ್ತಗಳಾ
ಲೀಳೋಚ್ಛ್ವಾಸಮೆ ತೞ್ಗಿ ದೇವರೊಡನಾನಾನಾವಿಮಾನಂಗಳಂ ॥ ೯೦

ಪಸರಿಸಿದ ಪಯಃಪೂರದ
ಪೊಸವೆಳ್ಪು ನಿಜಾಂಗರುಚಿಯ ಪೊಱಪೊಱಗೆ ಪೊದ ।
ಪ್ಪೆಸೆದಿರೆ ಬೆಳ್ಮುಗಿಲಿಂದಂ
ಮುಸುಕಿದ ಬಾಳಾರ್ಕಬಿಂಬಮಿರ್ಪಂತಿರ್ದಂ ॥ ೯೧

ಉರದೊಳ್ ಹಾರಂಗಳನೊ
ಳ್ಗುರುಳ್ಗಳೊಳ್ ಚಿನ್ನಪೂಗಳಂ ಪೋಲ್ತು ಮನೋ ।
ಹರಮಾದುದಮರಕಾಂತೆಯ
ರುರದೊಳ್ ಕುರುಳೊಳ್ ತಗುಳ್ದ ದುಗ್ಧಲವಂಗಳ್ ॥ ೯೨

ಆಕಾಶಕ್ಕುಚ್ಚಳಿಸುವ
ನೇಕಪಯಶ್ಶೀಕರಂಗಳಿಂದಂ ಜ್ಯೋತಿ ।
ರ್ಲೋಕಮಿದೊಂದುಂಟೆಂಬ ವಿ
ವೇಕಮನೊಡರಿಸಿದುದಮರಸಮಿತಿಯ ಮನದೊಳ್ ॥ ೯೩

ಕೆಲದೊಳ್ ತೆರಳ್ದು ಸೂಸುವ
ಜಲಲವಮಂಜರಿಗಳುಂಟುಮಾಡಿದುವು ದಿಶಾ ।
ಲಲನೆಯರ ವಕ್ತ್ರಮಂಡನ
ವಿಲಾಸದೊಳ್ ನೆಗೞ್ದ ಕರ್ಣಪೂರಶ್ರೀಯಂ ॥ ೯೪

ಜಿನನಾಥಸ್ನಪನಾಂಬು ತಜ್ಜಿನತನುಶ್ರೀಸಂಗದಿಂ ತಾನೆ ಪಾ
ವನಮಾಯ್ತೇ ತನಗಿಕ್ಕಯಾದ ಕಡಲಂ ಕುಂಭಂಗಳಂ ಪೊಕ್ಕ ದೇ ।
ವನಿಕಾಯಂಗಳನಿಂದ್ರರಂ ಸುರವಧೂವೃಂದಂಗಳಂ ಮೇರುನಂ
ದನಭೂಪ್ರಾಂತಮುಮಂ ಪವಿತ್ರಮೆನಿಸಿತ್ತಾನೀರ್ಗದಾಶ್ಚರ್ಯಮೋ ॥ ೯೫

ತ್ರಿದಶೇಂದ್ರಪ್ರಮುಖಾಮರರ್ ಕಳಕಳಪ್ರಧ್ವಾನದಿಂ ಶಾತಕುಂ
ಭದ ಕುಂಭಂಗಳ ನೀರನೊರ್ಮೊದಲೆ ಭೋರ್ಭೋರೆಂದು ಪೊಯ್ವಾಗಳ್ ।
ತ್ತು ದಿಗಂತಂ ದಿವಿಜೇಂದ್ರದುಂದುಭಿನಿನಾದೋನ್ಮಿಶ್ರಮೇನುಣ್ಮಿ ಪೊ
ಣ್ಮಿದುದೋ ಮಂದರಕಂದರೋತ್ಥಿತಪಯಃಕಲ್ಲೋಲಕೋಲಾಹಳಂ ॥

ವ॥ ಅಂತು ತಜ್ಜಿನೇಂದ್ರಸವನಸಮಯದೊಳಮರೇಂದ್ರಕರತಳೋದ್ಧೃತಕಾರ್ತಸ್ವರವಿಳಾಸಕಳಶಮುಖವಿಗಳಿತಸ್ಥೂಲದುಗ್ಧವಾರಿಧಾರಾಸಹಸ್ರಂಗಳೊಂದೊಂದರೊಳ್ ಕೂಡಿ ಮಂದರಾಚಳಮರಕತಶಿಳಾತಳಮಂ ನೋಂಕಿದಲ್ಲಿ ಪಸುರ್ವೆಸೆದು ಪದ್ಮರಾಗಗ್ರಾವಂಗಳೊಳ್ ಕೆಂಪೆಸೆದು ಚಂದ್ರಕಾಂತಶಿಳಾತಳದೊಳೇಕವರ್ಣಮಾಗಿಯುಂ ವನಷಂಡಂಗಳೊಳ್ ತಳಿಂಬಿಯುಂ ಸರೋಜಷಂಡಂಗಳೊಳ್ ತುಂಬಿಯುಂ, ಪರಿದು, ತತ್ಪ್ರವಾಹಂ ಜ್ಯೋತಿರ್ಲೋಕಮನೆಯ್ದೆ ವಂದಾಗಳ್,

ಬೆಳಗುವ ತಾರಕಾನಿಕರಮಾಕಡಲೊಳ್ ನಸುತೇಂಕುದೀಂಕೆ ಬೊ
ಬ್ಬುಳಿಕೆಗಳಂತೆ ತೋಱಿದುವು ತೀವ್ರಕರಂ ಕರಮೆಯ್ದೆ ಕಾಯ್ದು ಪ।
ಜ್ಜಳಿಸುವ ಲೋಹಪಿಂಡಮನೆ ಭೋಂಕೆನೆ ನೀರೊಳಗರ್ದಿದಂತೆವೊಲ್
ಪೊಳೆವುಡಿದಿರ್ದನೆಂದೊಡಱಿಯೆಂ ಪೊಗೞಲ್ ಜಿನಮಜ್ಜನಾಂಬುವಂ॥

ಜಿನಸವನಾಂಬುವಿನೊಳ್ ಭೋಂ
ಕೆನೆ ಚಂದ್ರಂ ತೇಂಕಿ ಹಂಸವೃದ್ಧನನಿನಿಸಂ।
ನೆನೆಯಿಸಿ ಕೊಳದೊಳಗಣ ಸಿತ
ವನರುಹಲಕ್ಷ್ಮಿಯುಮನಿನಿಸು ತನಗೊಳಕೊಂಡಂ॥ ೯೮

ಕಳಧೌತೋಜ್ಜ್ವಳಕುಂಭನಿರ್ಗತಪಯಃಪೂರಂ ಪೊದಱ್ದೆಯ್ದೆ ಮೇ
ಖಳೆಗಳ್ ನಾಲ್ಕುಮನೀನಗಂ ಸುರನಗಂ ಮುನ್ನೀಗಳೆಂತೋ ಹಿಮಾ।
ಚಳಮಾಯ್ತೆಂಬಿನಮುರ್ವಿ ಪರ್ವಿ ಪರಿದತ್ತಾಶಾಂತರಕ್ಕಂ ವಿಯ
ದ್ವಳಯಕ್ಕಂ ಕನಕಾದ್ರಿಕಂದರತಟಾಚ್ಛಾಚ್ಛೋಚ್ಛಳಚ್ಛೀಕರಂ॥ ೯೯
ನರಲೋಕಂಬರಮುಣ್ಮಿ ಪೊಣ್ಮಿದ ಪಯಃಪೂರಂಗಳಿಂದಂ ಮಹೀ
ಧರಕಾಂತಾರನದೀನದಪ್ರಕರಮುಂ ವಿಶ್ವಾವನೀಭಾಗಮುಂ।
ನರನಾರೀಜನಮುಂ ಪವಿತ್ರತರಮಾಯ್ತೆಂದಂದೆ ಕೇಳ್ವಂಗೆ ಬಿ
ತ್ತರಿಪಂಗಾದಮಳುಂಬಮಲ್ತೆ ಭಗವಜ್ಜನ್ಮಾಭಿಷೇಕೋತ್ಸವಂ॥ ೧೦೦

ವ॥ ತದನಂತರಮೆ ಸುರೇಂದ್ರಸಮಿತಿ ಸುರತರುಪ್ರಸೂನಕರ್ಪೂರಪಾಂಸುಗೋಶೀರ್ಷಚಂದನದ್ರವಪರಿಮಳಸುಗಂಧಿಜಲಸಂಭೃತಹಾಟಕಘಟಿತಘಟಕೋಟಿಗಳನೆತ್ತಿಕೊಂಡು ಸುರಿದಾಗಳ್,

ವರಗಂಧದ್ರವ್ಯಸಂದೋಹಮೆ ಜಿನತನುಗಂಧಕ್ಕೆ ಸೋಲ್ತುದ ಲಜ್ಜಾ
ಭರದಿಂ ನೀರಾಗಿ ತಾನುರ್ಕಿದುದೆನಿಸಿ ನಗೇಂದ್ರೋಪಕಂಠಂಗಳೊಳ್ ನಿ ।
ರ್ಝರಮಂ ಮಾಡುತ್ತುಮುದ್ಯಲ್ಲವನಿವಹದೆ ದೇವೇಂದ್ರಲೋಕಕ್ಕಮತ್ಯಾ
ದರಮಂ ಮಾಡುತ್ತುಮೇನಾಱಿಸಿದುದೊ ದಿವಿಜವ್ರಾತಮಂ ಗಂಧತೋಯಂ

ಮಜ್ಜನಪೀಠಂ ಸುರಗಿರಿ
ಮಜ್ಜನಜಳಮಮೃತಜಳಧಿಜಳಮಮರೇಂದ್ರಂ ।
ಮಜ್ಜನವಳ್ಕನುಮೆನೆ ಜಿನ
ಮಜ್ಜನಮಹಿಮೆಯ ಬೆಡಂಗನೇವಣ್ಣಿಪುದೋ ॥ ೧೦೨

ಎನಿತಾನುಂ ಪಱೆಗಳ್ ಘನ
ನಿನದಮನನುಕರಿಸೆ ಮನದೊಳೊದವಿದಲಂಪಿಂ ।
ಜಿನಸವನಗಂಧತೋಯದಿ
ನನಿಮಿಷಲೋಚನರ್ಗಮಾದುದವಭೃಥಸವನಂ ॥ ೧೦೩

ಜಳಗಂಧಾಕ್ಷತೆ ಪುಷ್ಪಾ
ವಳಿ ಚರು ದೀಪಪ್ರದೀಪಧೂಪಫಲಂಗಳ್ ।
ಕುಳಿಶಾಯುಧನರ್ಚಿಸೆ ತೊಳ
ತೊಳತೊಳಗಿದುವೆಳಸಿ ಬಳಸಿ ಜಿನನಡಿದಳಿರೊಳ್ ॥ ೧೦೪

ವ॥ ಅಂತರ್ಚಿಸಿ,

ಜಯ ಗುಣಮಣಿರತ್ನಾಕರ
ಜಯ ಭುವನತ್ರಯಲಲಾಮ ಜಯ ಮನಸಿಜದು ।
ರ್ಜಯ ಜಯ ವಿನೇಯಬಾಂಧವ
ಜಯ ಮಂದರಶಿಖರಿಶಿಖರರತ್ನೋತ್ತಂಸಾ ॥ ೧೦೫

ವ॥ ಎಂದಿಂತು ಪರಿಸಮಾಪ್ತಿಸವನಾರ್ಚನಸ್ತವನಸಮಯಾನಂತರಮಿಂದ್ರಾಣಿ ಭಗವದಂಗಸಂಗತಜಳಕಣಂಗಳಂ ದೇವಾಂಗವಸ್ತ್ರಂಗಳೊಳೊತ್ತಿ ಕಳೆದು ಸಹಜಸುರಭಿಗಂಧಬಂಧುರೌದಾರಿಕವಪುವಂ ನಿಜಪ್ರಮೋದಪ್ರಬೋಧಿತನಿಜದಿವ್ಯಪರಿಮಳಾಮೋದಿತದಿಗಂಗನಾಮುಖಂಗಳಪ್ಪ ಸುಗಂಧದ್ರವ್ಯಂಗಳಂ ಪೂಸಿ ಇಕ್ಷ್ವಾಕುಕುಳತಿಳಕಂಗೆ ತಿಳಕಮನಿಟ್ಟು ಮು

ಕ್ತಿಸಾಮ್ರಾಜ್ಯಕಂಠಿಕಾರ್ಹಂಗೆ ಮಣಿಮಯಕಂಠಿಕೆಯುಂ ಕಟ್ಟಿ ವಿಜಯಶ್ರೀನಿವಾಸಬಾಹುಬಾಹುಯುಗಳಕ್ಕೆ ಕೇಯೂರಹಾರಾಂಗದಕಟಕಾಳಂಕಾರಂಮಾಡಿ ಸಿಂಹವಿಷ್ಟರಾರೋಹಣೋಚಿತಕಟಿತಟಂಗೆ ಕಟಿತಟದೊಳ್ ಮಾಣಿಕ್ಯಮಣಿಕಿಂಕಿಣೀದಾಮಮುಮಂ ತಗುಳ್ಚಿ ಸುರಾಸುರೇಂದ್ರವೃಂದವಂದಿತಪಾದಂಗೆ ಮೃದುಪದಂಗಳೊಳ್ ಕಳರವರಣಿತನೂಪುರಂಗಳಂ ತುಡಿಸಿ ದಿವಿಜೇಂದ್ರೋತ್ಸಂಗಸಂಗತಂಮಾಡಿದಾಗಳ್,

ಪರಮನ ನಿರತಿಶಯಾಂಗ
ಸ್ವರೂಪಮಂ ನೆಱೆಯೆ ನೋಡಲಾವೆಡೆಗಂ ತ ।
ನ್ನೆರಡುಂ ಕಣ್ಗಳ್ ನೆಱೆಯದೆ
ಸುರೇಂದ್ರನುಂ ಗಡ ಸಹಸ್ರಲೋಚನನಾದಂ ॥ ೧೦೬

ವ॥ ಅಂತು ನಿರ್ವರ್ತಿತಜನ್ಮಾಭಿಷೇಕನನೇಕದುಂದುಭಿಬಧಿರಿತಸಕಳದಿಙ್ಮಂಡಳನಾಖಂಡಳನಮರಸಮಿತಿವೆರಸಯೋಧ್ಯಾಪುರಕ್ಕಭಿಮುಖನಾದಾಗಳ್,

ಪರಮಜಿನಸವನಜಳನಿ
ರ್ಝರಮುಂ ಸುರಬಲಪಯೋಧಿಕಳಕಳಮುಂ ಮಾ ।
ಣ್ದಿರೆ ನೋಡೆ ಬೆನ್ನನಿರ್ದುದು
ಸುರಶೈಳಮದೊಂದು ಮದುವೆಗಳಿಪಿದ ಮನೆವೊಲ್ ॥ ೧೦೭

ವ॥ ಆಗಳ್ ಕಲ್ಪಾಮರೇಂದ್ರಪ್ರಬಲಬಳಸಮಿತಿ ಗಗನತಳದಿಂದಮಂದಂಬಡೆದು ವಿನೀತಾಪುರಕ್ಕವತರಿಸಿ,

ಗಗನಾಭೋಗದೊಳೊಪ್ಪಿ ಬರ್ಪ ಪಲವುಂ ಯಾನಂಗಳಂ ತೋರ್ಪ ವೇ
ದಿಕೆಗಳ್ಗೆತ್ತು ವಿಳೋಳಕೇತುತತಿಯುಂ ಮೀಂಗೆತ್ತು ಮಾದ್ಯದ್ಗಜಾ ।
ಳಿಗಳಂ ನಾವೆಯೆಗೆತ್ತು ದೇಹರುಚಿಯುಂ ರತ್ನಾಂಶುಗೆತ್ತಿಂದ್ರಸೇ
ನೆಗಳಂ ವಾರ್ಧಿಯೆ ಗೆತ್ತು ನೋಡಿದುದು ಬಂದೆತ್ತಂ ಪುರಸ್ತ್ರೀಜನಂ ॥ ೧೦೮

ವ॥ ಅಂತವತರಿಸಿ ಚಂಚಚ್ಚೀನಾಂಶುಕಮಣಿದರ್ಪಣಾನೇಕಪ್ರಸೂನಪಲ್ಲವೋಲ್ಲಸಿತವಿವಿಧಮಂಡನಮಾಲಾಲಂಕೃತರಾಜಮಾರ್ಗದಿಂದಂ ಪರಿಮಿತಾಮರೇಂದ್ರಸಮಾಜಂ ಬೆರಸು ರಾಜಭವನಮಂ ಪೊಕ್ಕು,

ಕಳಧೌತೋಜ್ಜ್ವಳಕೂಟಕೋಟಿಘಟಿತಶ್ರೀಗೇಹದಿಂ ಮುಂದೆ ಮಂ
ಗಳಕಾರ್ಯೋಚಿತಮಾಗೆ ಮುನ್ನಮೆ ಸುರಾನೀಕಂ ಜನಂಗಳ್ ಮನಂ ।
ಗೊಳೆ ಮಾಡಿಟ್ಟ ವಿಚಿತ್ರಮಂಟಪದ ಸಿಂಹಾಸಂಧಿಯೊಳ್ ಬಾಲನಂ
ಕುಳಿಶಾಸ್ತ್ರಂ ಪಿರಿದುಂ ವಿಭೂತಿವೆರಸಿಟ್ಟೇಂ ಸಂತಸಂಬಟ್ಟನೋ ॥ ೧೦೯

ವ॥ ಆಗಳ್ ಸುತಮುಖನಿರೀಕ್ಷಣಸಮಯಸಮುಪಜನಿತಪುಳಕಕಳಿಕಾಕಳಿತಕಲ್ಪವೃಕ್ಷನಪ್ಪ ನಾಭಿಮಹೀಜಂ ಇಂದ್ರಾಣೀವದನಚಂದ್ರಚಂದ್ರಿಕಾವಿಘಟಿತನಿಕೃತನಿದ್ರಾಮುದ್ರಿತನಯನನೀಳೋತ್ಪಳೆಯಪ್ಪ ಜಗದ್ಗುರುಜನನಿಯುಂ ಬಂದು ನಿಜತನೂಜವದನವನಜಮನಟ್ಕಿರ್ತು ನೋಡಿ,

ಆದೊರೆಯ ವಿಭವದೊಳ್ ಪರ
ಮಾದರದಿಂ ದಿವಿಜಸಮಿತಿಯಿಂ ತಮ್ಮ ಮಗಂ ।
ಗಾದ ಮಹಿಮೆಗೆ ಮನಂಗೊಳ
ಲಾದುತ್ಸವಮರಿದು ಪೊಗೞಲಾದಂಪತಿಯಾ ॥ ೧೧೦

ವ॥ ಆಗಳ್,

ದೊರೆ ನಿಮಗಿಲ್ಲ ಭೂಭುವನದೊಳ್ ಪೆಱರಿರ್ಪರೆ ನೋಂತಿರೀಜಗ
ದ್ಗುರುಗೆ ಪಿತೃದ್ವಯಂಗಳೆನಿಸಲ್ ಮೆಱೆವರ್ ಪೆಱರಾರೊ ನೀಮೆ ಪೂ ।
ಜ್ಯರಿರೆಮಗೆಂದು ದಿವ್ಯವಸನಪ್ರಸವಾಭರಣಂಗಳಿಂದಮಾ
ದರಮುಮರ್ಪಂತು ತದ್ಯುಗಳಮಂ ಪರಿಪೂಜಿಸಿದಂ ಸುರೇಶ್ವರಂ ॥ ೧೧೧

ವ॥ ಅಂತು ಪೂಜಿಸಿ ಜನ್ಮಾಭಿಷೇಕವ್ಯತಿಕರಮನವರ್ಗೆ ಮಹೋತ್ಸಾಹಕರಮಾಗೆ ಸವಿಸ್ತರಮುಱಿಪಿ ಜಾತಕರ್ಮೋತ್ಸವದೊಳ್ ಪರಿಜನಮುಂ ಪುರಜನಮುಮೊಸಗೆಮರುಳ್ಗೊಂಡು ನಿರ್ಭರಕ್ರೀಡಾರಸಪರವಶರಾದಾಗಳ್,

ನೆಲೆಮಾಡಂಗಳೊಳೋಳಿವಟ್ಟ ಗುಡಿಗಳ್ ಗಂಧಾಂಬುವಿಂದಾದ ಪೂ
ವಲಿಯಿಂ ಚೆಲ್ವೆಸೆದಿರ್ದ ಬೀದಿಗಳನೇಕಾತೋದ್ಯನಾದಂಗಳೊಳ್ ।
ನಲಿಯುತ್ತುಂ ಕುಣಿಯುತ್ತುಮಿರ್ಪ ಗಣಿಕಾಸಂದೋಹದಿಂ ಚೆಲ್ವನ
ಗ್ಗಲಿಸುತ್ತಿತ್ತುವು ತತ್ಪುರಕ್ಕೆ ಸುರರಾಜಾವಾಸಸಾಮ್ರಾಜ್ಯಮಂ ॥ ೧೧೨

ಪುರಜನಮೆತ್ತಿಯಿಂ ಮುಡಿವ ಕೂಡೆ ತುಱುಂಬುವ ಕಿಂಕಿರಾತಶೇ
ಖರರಜದಿಂದೆ ಚಾರುಪಟವಾಸದ ಧೂಳಿಯ ಪರ್ಬಿನಿಂದಮಾ ।
ಭರಣದ ಮಾಣಿಕಂಗಳ ಪೊದಱ್ದರುಣಾಂಶುಗಳಿಂದಮಂದು ಪಿಂ
ಜರಿತಪಿಶಂಗಿತಾರುಣಿತದಿಙ್ಮುಖಮಾದುದು ತನ್ಮಹೋತ್ಸವಂ ॥ ೧೧೩

ನೂತನಮಣಿಭೂಷಣಬಾ
ಳಾತಪಸಿತಮಣಿಮರೀಚಿಚಂದ್ರಾತಪಪಿ ।
ಷ್ಟಾತಕಪರಾಗಪಿಂಜರಿ
ತಾತಪಮಯಮಾದುದಾಧರಾಧಿಪಭವನಂ ॥ ೧೧೪

ವ॥ ಅಂತು ಪುರಮುಮಂತಃಪುರಮುಮಾದಿಪುರುಷಜನ್ಮೋತ್ಸವಸುಧಾಂಬುರಾಶಿಯೊಳ್ ಕೂಡಿ ಮೂಡಿ ಮುೞ್ಕಾಡುವುದಂ ನೋಡಿ ತಾನುಮಾನಂದನಾಟಕಮನಾಡಲ್ಬಗೆದು ಕೃತಾನುಕರಣಮೆ ನಾಟಕಮಪ್ಪುದಱಿಂ ಭಗವಜ್ಜನ್ಮಾಭಿಷೇಕಸಂಬಂಧಿಯಾಗೆ ತನ್ನ ಪೊಸತೆ ಸಮೆದ ಸಮವತಾರರೂಪಮುಮಂ ದಶಾವತಾರರೂಪಗರ್ಭಸಂದರ್ಭಂಗಳಪ್ಪ ಶೇಷಾಶೇಷರೂಪಕಂಗಳುಮಂ ಸುರಾಸುರಸಭೆಗಂ ನಾಭಿರಾಜಾದಿಮನುಜಸಭೆಗಂ ಮೆಱೆಯಲೆಂದು ಶುದ್ಧವಿಚಿತ್ರಮೆಂಬ ಪೂರ್ವರಂಗಪ್ರಸಂಗದೊಳ್ ಜರ್ಜರಪೂಜಾಮಂಗಳಪದೋಚ್ಚಾರಣ[1]ಪುಷ್ಪಾಂಜಲಿವಿಕ್ಷೇಪಣಾದಿನಾಂದಿವಿಧಿಯಂ ನಿರ್ವರ್ತಿಸಿ ದೃಶ್ಯಶ್ರವ್ಯದೃಢಮಾತ್ರಾದಿ[2]ಪ್ರಯೋಗಂಗಳೊಳಂ ನಾನಾವಿಧವಾದ್ಯಂಗಳೊಳಂ ಆಂಗಿಕಾಭಿನಯಂಗಳೊಳಮೆಸೆಯೆ ಮಘವನಘವಿಘಾತಾರ್ಥಮುದ್ಧತಾಭಿನಯಪ್ರಾಯಮುಮಾರಭಟೀವೃತ್ತಿಯುಕ್ತಮುಮಪ್ಪ ತಾಂಡವಮನಾಡಲುದ್ಯೋಗಂಗೆಯ್ದು ಮಂಗಳಾಳಂಕಾರಾಲಂಕೃತನಾಗಿ ನಾಟ್ಯವಿದಾಚಾರ್ಯನಂ ಪೋಲ್ತು ರಂಗಂಬೊಕ್ಕು,

ಲೋಕಾಕಾರಮನಭಿನಯಿ
ಪಾಕಾರಂ ನೆಗಪೆ ನಿಂದು ವೈಶಾಖಸ್ಥಾ ।
ನಾಕಾರದೊಳ್ ಮರುದ್ಧೃತ
ನಾಕುಳಿಶಾಯುಧನದೊಂದು ಚೆಲ್ವಂ ಪಡೆದಂ ॥ ೧೧೫

---

1ಕ—ಪಟ್ಟಹೋಚ್ಚಾರಣ. 2ಖ—ದೃಷ್ಯದ್ರವ್ಯದೃಢಸೂತ್ರಾದಿ,

ಸೂಸಿದ ಪುಷ್ಪಾಂಜಳಿಯುನೆ
ಬಾಸಣಿಸಿದ ಮದವದಳಿಕುಳಂಗಳ ಚೆಲ್ವಂ ।
ಮಾಸಿಸಿದುವು ವಾಸವನ ವಿ
ಳಾಸಂಬೆರಸಡರೆ ತೊಡರೆ ಬಳಸುವ ಕಣ್ಗಳ್ ॥ ೧೧೬

ರಸಭಾವಾಲಸನಯನ
ಪ್ರಸರಂಗಳ ಪೊಳೆವ ಪೊಳೆಪುಗಳ್ ಬಳ್ವಳ ನೀ ।
ಳ್ದೆಸೆದುವು ರಂಗದೊಳೆತ್ತಂ
ಪೊಸಯಿಸುತುಂ ಯವನಿಕಾವಿಳಾಸಮನಾಗಳ್ ॥ ೧೧೭

ಪದವಿನ್ಯಾಸದ ತುಱುಗಲ್
ಪೊದಪೆ ಲಯಂಬೆರಸು ರಂಗಮಂ ಬಳಸಿದನಾ ।
ತ್ರಿದಶಾಧಿನಾಥನಳೆವವೊ
ಲುದನ್ವದಾವೇಷ್ಟಿತಾಖಿಳಾವನಿತಳಮಂ ॥ ೧೧೮

ವ॥ ಆಗಳ್ ನಾಕಲೋಕವಾದ್ಯಂಗಳೊಳನೇಕಭೇದಂಗಳಪ್ಪಪವಾದಕ ಪರಿವಾದಕವಾದ್ಯಂಗಳೊಳ್ ಕಿನ್ನರೀಜನಮಧುರಗೀತಾನುಗತಂಗಳನುಕ್ರಮದೊಳ್ ನೆಗಱೆ,

ಕರಣಂ ರೇಚಕಮಂಗಹಾರಮಿನಿತೆಂದೋದುತ್ತುಮಿರ್ಪೋದದ
ತ್ತಿರಲೀನಾಟ್ಯರಸಂ ಸಮಸ್ತಸುರವೃಂದಾಧೀಶನಿಂದಂ ಪೊನ ।
ಲ್ವರಿದತ್ತಂಬಿನಮಾಡುವಲ್ಲಿ ಮಕುಟವ್ಯಾಲಗ್ನರತ್ನಪ್ರಭಾ
ಪರಿವೇಷಂ ಲಲಿತೇಂದ್ರಚಾಪರುಚಿಯಂ ಮಾಡಿತ್ತು ದಿಕ್ಚಕ್ರದೊಳ್ ॥ ೧೧೯

ಕುಳಶೈಲಂಗಳ್ ಪದಾಘಾತದೊಳಲುಗುವಿನಂ ತಾರಕಾಸಂಕುಳಂ ತೋ
ಳ್ಗಳದೊಂದಳ್ಳೇಱಿನೊಳ್ ಪೂವಲಿವೊಲುದುರ್ವಿನಂ ವಾರ್ಧಿಗಳ್ ರೇಚಕೋತ್ಥಾ ।
ನಿಳತೀವ್ರಾಘಾತದಿಂದುಚ್ಚಳಿಪಿನಮಖಿಳಾಶಾಂತರಂ ದೇವತೂರ್ಯಾ
ವಳಿಗೀತಧ್ವಾನದಿಂದಂ ಪುದುವಿನಮೆಸೆದತ್ತಿಂದ್ರನಾನಂದನೃತ್ಯಂ ॥ ೧೨೦

ಎಳೆಯೊಳ್ ತೋಱಿದ ರೂಪನಾಗಳೆ ನಭೋಭಾಗಾಗ್ರದೊಳ್ ತೋರ್ಪನಾ
ಗಳೆ ಗೆಂಟಾಗಳೆ ಸಾರೆಯಾಗಿ ಪೊಳೆವಂ ಸೂಕ್ಷ್ಮಾಂಗನಾಗಿರ್ಪನಾ ।

ಗಳ್ ದಿಗ್ವ್ಯಾಪಕನಪ್ಪನಿಂತು ಪಲವುಂ ಚಕೋದ್ಯಂಗಳಿಂ ವಿಕ್ರಿಯಾ
ಬಳದಿಂದಾಡಿ ಮಹೇಂದ್ರಜಾಲಿಗನುಮಂ ಪೋಲ್ತಂ ಸುರಾಧೀಶ್ವರಂ ॥ ೧೨೧

ವ॥ ಅಂತು ತನ್ನ ತಾಂಡವಾರಂಭದೊಳಳವಿಗಳಿದ ರಾಗದಿಂ ನಿರ್ಮಿಸಿದ ಭುಜಶಾಖಾಸಹಸ್ರಂಗಳೊಳ್ ದಾಂಗುಡಿವಿಟ್ಟನಂಗಜಂಗಮಲತೆಗಳನನುಕರಿಸಿ ದೇವಗಣಿಕೆಯರಾಡುವಾಗಳ್,

ರಸಭಾವಾಭಿನಯಂಗಳಂ ಭುಜಲತಾಭ್ರೂಚಾಪನೇತ್ರೋತ್ಪಲ
ಪ್ರಸರಂಗಳ್ ಪಸರಂಗೆಯುತ್ತಿರೆ ಲಸನ್ನೇತ್ರಂಗಳಂ ಕೂಡೆ ಬಂ।
ಚಿಸುತಂ ಮೆಚ್ಚುವ ಮೆಚ್ಚನೊಳ್ಪ ಜನತಾನೇತ್ರಂಗಳಂ ನಾಡೆ ಚೆ
ಲ್ವೆಸೆದತ್ತಿಂದ್ರನ ನೀಳ್ದತೋಳ್ದುಡುಗಲೊಳ್ ದೇವಾಂಗನಾನರ್ತನಂ ॥

ಆನಂದಂಬೆರಸಂಕದಚ್ಚರಸೆಯರ್ ದೇವೇಂದ್ರನೈರಾವತಾ
ಳಾನಸ್ತಂಭಸಮಂಗಳಪ್ಪ ಭುಜಸಂದೋಹಂಗಳೊಳ್ ವೀರಕಾಂ।
ತಾನೀಕಕ್ಕೆಣೆಯಾಗಿ ಕೂಡೆ ಕುಣಿದರ್ ಮತ್ತಂ ಕೆಲರ್ ನೋಡಿ ಸೂ
ಚೀನಾಟ್ಯಂಗಳನಾಡಿದರ್ ಖರನಖಪ್ರಾಂತಂಗಳೊಳ್ ಶಕ್ರನಾ ॥ ೧೨೨

ತ್ರಿದಶಗಣಾಧಿನಾಯಕನ ಪರ್ಮಿದ ತೋಳ್ದುಡುಗಲ್ಗಳೊಳ್ ಪಳಂ
ಚಿದೆ ಗಗನಂಬರಂ ನೆಗೆದು ಸೂಸುವ ಬಾಹುಪರಿಭ್ರಮಂಗಳೊಳ್।
ಬೆದಱದೆ ಶಕ್ರನೃತ್ಯದೊಳೊಡಂಬಡೆ ನರ್ತಿಸುವಲ್ಲಿ ಜತ್ತವ
ಟ್ಟದ ಮಣಿಯಂತದೇಂ ಪದುಳವಾದುದೊ ದಿವ್ಯವಧೂಕದಂಬಕಂ॥ ೧೨೪

ಯುವಸಂಘಾತಮದೊಂದು ತೋಳ್ದುಡುಗಲೊಳ್ ಮತ್ತೊಂದು ತೋಳ್ಗೋ
ಳಿಯೊಳ್
ಯುವತೀವ್ರಾತಮನೇಕಭೇದರಸಭಾವಂಗಳ್ ಪೊದಱ್ದಿಣ್ಮೆ ಪೊ।
ಣ್ಮುವಿನಂ ನರ್ತಿಸೆ ಸೂತ್ರಧಾರವಿಧಿಯಿಂ ಸುತ್ರಾಮನಂದಿಂತು ತಾಂ
ಡವಲಾಸ್ಯಂಗಳ ಚೆಲ್ವನೊರ್ಮೆಯೆ ತದೀಯಾಸ್ಥಾನದೊಳ್ ತೋಱಿದಂ ॥

ವ॥ ಅಂತು ದೇವೇಂದ್ರಕರಸರೋಜಾಕರದೊಳ್ ಸಮುತ್ಫುಲ್ಲಮುಖಪದ್ಮಂಗಳಿಂ ಪದ್ಮಿನಿಗಳೆನಿಸಿ ಸುರೇಂದ್ರತಾರಹಾರಮುಕ್ತಾಫಳಪ್ರತಿಬಿಂಬಿತತನುಗಳಿಂ ವಿದ್ಯಾದೇವತೆಗಳೆನಿಸಿ ದಿವಿಜಸೌಂದರಿಯರ್ ಗೊಂದಣಂಮಾಡುವಲ್ಲಿ ಕಡೆಗಣ್ಣೊಳ್ ತುಳುಂಕಿಯುಂ ಕದಪಿನೊಳ್ ಪೊಂಪುಳಿಯಾಗಿಯುಂ

ಭ್ರೂವಿಭ್ರಮದೊಳ್ ಪೊನಲ್ವರಿದುಂ ಅರುಣಾಧರದೊಳ್ ಕೊಳಂಗೊಂಡುಂ ದರಹಸಿತದೊಳ್ ಬೆಳ್ಳಂಗೆಡೆದುಂ ಅಂಗರಾಗದೊಳ್ ರಂಗಂಬಡೆದುಂ ಸಿರಿಸದಾಮಕೋಮಲೆಯರ ಭುಜಲತೆಗಳೊಳ್ ಪಸರಿಸಿಯುಂ ಘನಸ್ತನಂಗಳೊಳಿಡಪಿಯುಂ ಗಂಭೀರನಾಭಿಯೊಳ್ ಸುಳಿಗೊಂಡುಂ ನಿತಂಬದೊಳ್ ತುಱುಂಬಿಯುಂ ಮೃದುಪದದೊಳಂದಂಬಡೆದುಂ ಆಕೆಗಳಂಗೋಪಾಂಗದೊಳಂತು ನಾಟ್ಯರಸಮೆ ತೀವಿ ತುಳುಂಕುಗುಟ್ಟಿ ದಿವಿಜಸಾಮಾನಿಕಜನಕ್ಕಂ ನಾಭಿರಾಜಾದಿಮನುಜಸಭೆಗಂ ಅತ್ಯಾಶ್ಚರ್ಯಮಂ ಮಾಡಿದಾಗಳ್,

ಧರೆ ರಂಗಂ ಗಗನಂ ಮನೋಹರತರಂ ನಾಟ್ಯಾಲಯಂ ನರ್ತಕಂ
ಸುರರಾಜಂ ಸಭೆ ದೇವಮರ್ತ್ಯಸಭೆ ಸಂದಾರಾಧ್ಯನೀಶಂ ಜಗ |
ದ್ಗುರು ತನ್ನೃತ್ಯಫಲಂ ತ್ರಿವರ್ಗವಿಭವಂ ತಾನೆಂದೊಡೇಮಾತೊ ಸಾ
ಸಿರಮುಂ ನಾಲಗೆಯುಳ್ಳವಾಸುಕಿಯುಮಿನ್ನೇನೆಂದದಂ ಬಣ್ಣಿಪಂ || ೧೦೬

ವ|| ಅಂತು ಪುರಂದರನಾನಂದನೃತ್ಯಾವಸಾನದೊಳೀಪರಮೇಶ್ವರಂ ಧರ್ಮಾಮೃತವರ್ಷದಿಂ ಭವ್ಯಸಸ್ಯಸಮೃದ್ಧಿಯಂ ಮಾಡುವುದಱಿಂ ವೃಷಮೆಂಬುದು ಧರ್ಮಮದಱಿಂದೊಪ್ಪುವುದಱಿಂದಂ ಸ್ವರ್ಗಾವತರಣಸಮಯದೊಳ್ ನಿಜಜನನೀವದನವನಜಮಂ ಸ್ವಪ್ನದೊಳ್ ಧವಳವೃಷಭಾಕಾರದಿಂ ಪೊಕ್ಕುದಱಿಂದಂ ವೃಷಭಸ್ವಾಮಿಯೆಂದು ಪೆಸರನಿಟ್ಟು ಮಜ್ಜನಮಂಡನಕ್ರಿಯೆಗಳ್ಗೆ ದೇವಿಯರನೇ ದಾದಿಯರ್ಮಾಡಿ ಸಮಯಾನುರೂಪವೇಷದ ಸುರಕುಮಾರಕರನೊಡನಾಡಿಗಳ್ಮಾಡಿ ದೇವಸಮಾಜಂ ಬೆರಸು,

ಕ್ರಮದಿಂ ಜನ್ಮಾಭಿಷೇಕೋತ್ಸವಮನಮರಶೈಲಾಗ್ರದೊಳ್ ಮಾಡಿ ಲೋಕೋ
ತ್ತಮನಂ ಕೊಂಡೊಯ್ದಯೋಧ್ಯಾಪುರದೊಳೊಸಗೆಯಂಮಾಡಿ ಜನ್ಮೋತ್ಸವಪ್ರ
ಕ್ರಮಮೆಂದಾನಂದನೃತ್ಯಪ್ರಮದಮನಧಿಕಂಮಾಡಿ ತನ್ನಿಂದ್ರಲೋಕ
ಕ್ಕಮರೇಂದ್ರಂ ಪೋದನಾಗಳ್ ಸುಕವಿಜನಮನೋಮಾನಸೋತ್ತಂಸಹಂಸಂ

ದಂ ಬೆಸಸುವಂತೆ ಮಾಡಿ ಮ
ನಂಬಿಡೆ ಪೊಡೆವಡಿಸಿ ನಮಿಯುಮಂ ವಿನಮಿಯುಮಂ ॥ ೧೧೨

ವ॥ ತಾನುಮಾದಿಭಟ್ಟಾರಕರ ಪದಪಯೋಜಂಗಳ್ಗೆ ಉಗಿ ನಿಜವಿಮಾನ ಮನಾಮಾನವರನೇಱಿಸಿಕೊಂಡು ಪೋಗಿ ರಜತಾಚಲಮನೆಯ್ದಿ,

ಇದು ವಿಜಯಾರ್ಧಪರ್ವತಮಿದಾದಿಜಿನೇಂದ್ರನ ಕೀರ್ತಿಯಂತೆ ಶಾ
ರದಜಳದಾಮೃತಾಂಬುಧಿಪಯಃಪ್ಲವಪಾಂಡುರಮುನ್ನದಾಳನಾ ।
ದದಿನಿದು ಪಾಡಿ ಪೂತ ಸೆಳೆಗೊಂಬುಗಳಾಟದಿನಾಡಿ ನಮ್ಮನಿಂ
ದಿದಿಗೆರ್ಗಳಲಿರ್ಪವೋಲ್ ಸೊಗಯಿಸಿರ್ದುದು ರಮ್ಯಮಿದೊಂದೆ ಧಾತ್ರಿಯೊಳ್

ಎನಗುಳ್ಳಾಯತಿ ಮೇರುಗುಂಟೆ ಪೆಱತೇನುತ್ಸೇಧಮೊಂದುಂಟೆ ಗೋ
ತ್ರನಗಂಗಳ್ ಶಿಖರಂಗಳೊಳ್ ನಿಱಿಸಿ ಸಿಂಧುಬ್ರಾತಮಂ ಪೆಂಪಿನಿಂ ।
ಬಿರ್ನೊಳಂ ಬೀಗುವುದಾನಮಂ ಚರಣದೊಳ್ ತಾಳ್ದಿರ್ದನೆಂದಂದು ನೋ
ಡಿ ನಗುತ್ತಿರ್ಪವೊಲಾಯ್ತು ನಿರ್ಝರರವಶ್ರೀಯಿಂದಮಿಾಪರ್ವತಂ ॥ ೧೧೪

ದೊರೆಗಂ ಪೆಂಪಿಂಗಮಾಟಪ್ಪವರ ಮಹಿಮೆಯಂತಾಳ್ದಿದಿರ್ ನೀಮೆ ಗಂಭೀ
ರರಿರಂತಸ್ಸಾರರಿಂ ನೀಮಿರೆ ಪೆಱರೊಳರೇ ಸಕ್ಕಿಮಾಡಲ್ಕೆ ವಿಶ್ವಂ ।
ಭರೆಯೊಳ್ ಸಂದೀಮದೀಯಾಯತಿಯು ದೊರೆಗೆ ನೀಂ ಸಕ್ಕಿಯೆಂಬಂ
ತಿರೆ ನೀಳ್ಪಿಂ ಪರ್ವಿ ಪೂರ್ವಾಪರಜಳಧಿಗಳಂ ಮುಟ್ಟಿ ನಿಂದತ್ತಗೇಂದ್ರಂ ॥

ಇದಱೊಳ್ ಖೇಚರಕಿನ್ನರಾಮರಯುಗಂ ನಾನಾವಿನೋದಂಗಳಂ
ಮದನಾವೇಶಕರಂಗಳಂ ಸಲಿಸುತುಂ ಪ್ರೋತ್ಫುಲ್ಲಚಂಚಲ್ಲತಾ ।
ಸ್ಪದದೊಳ್ ಚೂತಲತಾಲತಾಂತಮಕರಂದಾಮೋದಸಂಸಕ್ತಷ
ಟ್ಪದದೊಳ್ ತಳ್ತಿರೆ ಕಾಮರಾಗಮಯಮಾಯ್ತೀನಗಂ ರಮ್ಯಮೋ ॥

ಮಿಡಿವಂ ಬೀಣೆಯನಿವನಿವ
ಳೊಡನೆಸೆವಳ್ ಬೆರಲ ಕೊರಲ ಕೂಟಂ ಬೆರಲಂ ।
ಮಿಡಿಯಿಸಿದುದೆನಿಸಿ ರಾಗದ
ತೊಡರೊಳ್ ತೊಡರ್ದಿರ್ಪುವಲ್ಲಿ ಕಿನ್ನರಯುಗಳಂ ॥ ೧೧೭

ಶ್ರುತಿಸೌಖ್ಯಾವಹವಲ್ಲಕೀಕ್ವಣಿತದೊಳ್ ಕರ್ಪೂರಪಾಳೀಮಿಮಿ
ಶ್ರಿತತಾಂಬೂಲರಸೋತ್ಕಟಪ್ರಮದದೊಳ್ ನಾನಾರಸಾಸ್ವಾದದೊಳ್ ।

ರತರಾಗೋತ್ಸವಮುಂ ಗಜೋತ್ಸವಮುಮಾಳ್ದಿರ್ಪನ್ನೆಗಂ ಸಿದ್ಧದಂ
ಪತಿಗಳ್ ಕ್ರೀಡಿಸುತಿರ್ಪರೀನಗತಟಶ್ರೀಖಂಡಷಂಡಂಗಳೊಳ್ ॥ ೧೧೮

ಧ್ವನಿಯೆನಿಸಿದಳಂಕಾರ
ಧ್ವನಿಯೆಸೆವಿನಮೆಸೆವುದಲ್ಲಿ ಮಧುರವಿಪಂಚೀ ।
ಧ್ವನಿಯೊಡನನೇಕರಾಗ[1]
ಧ್ವನಿಯೆನೆ ಸೊಗಯಿಪುದು ಕಿನ್ನರಧ್ವನಿ ನಗದೊಳ್ ॥ ೧೧೯

ಉತ್ತಮವನಮದಕರಿಕಟ
ಭಿತ್ತಿಗಳಿಂ ಸುರಿವ ಮದದ ಬಂಧುರಗಂಧಂ ।
ಕತ್ತುರಿ ಮೃಗಮದದೊಳ್ ಪುದಿ
ದೆತ್ತಂ ಮಗಮಗಿಸೆ ಕಂಪು ಪೊಂಪುಳಿ ಪುಗಿಲೊಳ್ ॥ ೧೨೦

ಪೂರ್ವಾಪರಜಳನಿಧಿಗಳ
ಪರ್ವುವರಂ ನೀಳ್ದು ಶಿಖರನಿಕರಂ ನಭಮಂ ।
ಪರ್ವಿರೆ ಸೊಗಯಿಸಿದುದು ಸಕ
ಳೋರ್ವಿಯೊಳುರ್ವೀಧರಂಗಳನ್ನವುಮೊಳವೇ ॥ ೧೨೧

ವ॥ ಇದು ಭರತಮೆಂಬ ವಿಜಯಾರ್ಧದೊಳ್ ನಿಂದುದಱಿಂ ವಿಜಯಾರ್ಧ ಮೆಂಬ ಪೆಸರಂ ಪಡೆದುದಿದರ್ಕೆ ಪ್ರಥಮಮೇಖಳಾಸ್ಥಿತೋಭಯಶ್ರೇಣಿಯೊಳ್ ಕರ್ಮಭೂಮಿಯನಿಯೋಗಮೆ ನಿಯೋಗಂ; ಅಲ್ಲಿಯುೞಚರರುತ್ಕೃಷ್ಟನಿಕೃಷ್ಟಕಾಲಸ್ಥಿತಿಯೊಳ್ ಆಯುಷ್ಯೋಚ್ಛ್ರಿತಿಯೆಂಬಿವಱಿಂದ ಮೇಲುಮೊಱೆದೇಹಪ್ರಮಾಣದೊಳ್ ಕುಂದುವರುಂ ಪೆರ್ಚುವರುಮಲ್ಲ. ಅವರ್ಗೆ ಪ್ರಜ್ಞಪ್ತಿವಿದ್ಯೆ ಮೊದಲಾಗಿ ಕುಲಜಾತಿಸಾಧಿತವಿದ್ಯೆಗಳ್ ಪಲವುಂ ಬೆಸಕೆಯ್ವುವು. ಅಲ್ಲಿ ಸಾಧಿತವಿದ್ಯೆಗಳ್ ಸಾಧಿಸುವಾಗಳ್ ಸಿದ್ಧಾಯತನಪ್ರಭೃತಿನವಕೂಟಂಗಳುಮಂ ದ್ವೀಪಾದಿಸಮುದ್ರತೀರಶುಚಿಪ್ರದೇಶಂಗಳಲ್ಲಿದಿರ್ದು ಸಾಧಿಸುವುದೆಂದವರನಲ್ಲಿಗೆ ವಾಸ್ತವ್ಯಮಾಡಿ ದಕ್ಷಿಣೋತ್ತರಶ್ರೇಣಿಗಳೊಳಿರ್ಪ ವಿದ್ಯಾಧರಾಧೀಶ್ವರರಂ ಬರಿಸಿ ಗಗನವಲ್ಲಭರಥನೂಪುರಚಕ್ರವಾಳಂಗಳೆಂಬ ರಾಜಧಾನಿಗಳಾಗಿನೆಗೞ್ದ ನೂಱುಪತ್ತುಂ ಪೊೞಲ್ಗಳನೊಳಕೊಂಡ ದಕ್ಷಿಣೋತ್ತರಶ್ರೇಣಿಗಳಂ

1. ಗ—ನಾಕ

ನಮಿವಿನಮಿಗಳ್ಗೆ ಕೊಟ್ಟು ಗಾಂಧಾರಪನ್ನಗವಿದ್ಯೆಗಳನವರ್ಗೆ ವಿಧಿಪೂರ್ವ
ಕಮಿತ್ತು,

ಇದು ಪುರುದೇವಶಾಸನಮಿವರ್ ನಿಮಗಾಳ್ವರುಮಿರ್ವರೆನ್ನ ಪೇ
ಳ್ದುದನಿದನಿಂತೆ ನಂಬಿ ಬೆಸಕೆಯ್ವುದು ನೀಮಿವರ್ಗೆಂದು ಖೇಚರಾ ।
ಸ್ಪದಸಕಳಾಧಿಪತ್ಯಮನನಾಕುಳಮಂತವರ್ಗಿತ್ತನಾರ್ಗಮ
ಭ್ಯುದಯಮನೀಗುಮೆಂಬುದದು ಚೋದ್ಯಮೆ ತತ್ಪುರುದೇವಸೇವನಂ

ವ॥ ಅಂತು ಧರಣೇಂದ್ರನವರನಂಬರಚರೇಂದ್ರಪದವಿಯೊಳ್ ನಿಱಿಸಿ
ನಿಜಾಮರಲೋಕಕ್ಕೆ ಪೋದಂ. ಅನ್ನೆಗಮಿತ್ತಲ್,

ಇದು ಬೇಱೊಂದಿಳೆಗತ್ಯುದಗ್ರಮಹಿಮಂ ಹೇಮಾಚಳೇಂದ್ರಂ ಜಗ
ಕ್ಕಿದು ಬೇಱೊಂದತಿನಿಷ್ಪ್ರಕಂಪಸಲಿಲಂ ಗಂಭೀರಕೂಪಾರಮೆಂ ।
ಬುದನೆಂದರ್ಚಿಸೆ ಖೇಚರಾಮರಗಣಂ ನಿಂದಂ ಕೊಳಲ್ ಶಾಶ್ವತಾ
ಸ್ಪದಮಂ ಯೋಗನಿಯೋಗನಿಶ್ಚಳಮನಂ ಸಂದಾದಿಭಟ್ಟಾರಕಂ ॥ ೧೨೩

ವ॥ ಅಂತು,

ಪರಮಂ ಪೂರ್ಣ್ದುಱುದಿಂಗಳಂ ನೆಱಪಿ ಚರ್ಯಾಮಾರ್ಗದೊಂದಂದಮಂ
ಧರೆಯೊಳ್ ಮಾರ್ಗವಿಬೋಧನಾರ್ಥಮುಱಿಯಲ್ಕೆಂದೆತ್ತಿ ಕಯ್ಯಂ ಸುರೇ ।
ಶ್ವರಶೈಳಂ ತಳರ್ವಂತೆವೋಲ್ ತಳರ್ದನೀರ್ಯಾಗೋಚರಂ ಶುದ್ಧಿ ತ
ಳ್ತಿರೆ ತನ್ನೊಳ್ ಧರೆಯಂಪದಾಂಬುಜರಜಂಗಳ್ ನೀರಜಂಮಾಳ್ಪಿನಂ ॥ ೧೨೪

ವ॥ ಅಂತು ತಳರ್ದನುಕ್ರಮದಿಂದಂ ಗ್ರಾಮನಗರಖೇಡಖರ್ವಡ
ಮಡಂಬಂಗಳೊಳೊಡಂಬಡಿಲ್ಲದೆ ಚರ್ಯಾಮಾರ್ಗದೊಳ್ ನಡೆವಲ್ಲಿ ಜನ
ಪದಪುರಸನಾಭಿಜನಂಗಳ್ ಕಂಡರ್ ಕಂಡಲ್ಲಿಯೆ ಮುಸುಱಿಕೊಂಡು,

ಬೆಸನಾವುದೆಮಗೆ ಬೆಸನಂ
ಬೆಸಸೆನೆಯೇಬಾಸ್ತೆಯೆಂದು ಮುಂದಿಟ್ಟರ್ ಸ್ರ ।
ಗ್ವಸನವಿಲೇಪನಭೂಷಾ
ಪ್ರಸರಂಗಳನಲ್ಲಿ ಕೆಲಬರತಿಜಡಮತಿಗಳ್ ॥ ೧೨೫

ಮಾಹವಮಹಾಹುಂಕಾರಕಾಳ್ಕೂಟವಿಟಪಿಪ್ರರೋಹಶಂಕಾವಹನಾಭಿಕೂಪಾವಲಂಬಿಕೂರ್ಚಕಳಾಪಂ ಲಲಾಟನಿಹಿತಕಾಂಸುಂಭಾಂಶುಕಪಟ್ಟಿಕಾಪ್ರಾಂತನಿಬಿಡನಿಬದ್ಧಕೇಶಬಂಧಮಾಚಕೂಳಸ್ವಸ್ತಿಕಬದ್ಧವಿಚಿತ್ರವಸ್ತ್ರದ್ವಯೋದ್ದಾಮಧಾನುಷ್ಕಮುದ್ವೀಚಿಮರುಮರೀಚಿನಿಚಯಚಂಚಳೋದ್ದಾಮಬಳಬಹಳನಿಕವಚಪ್ರಸಪೋಣಿವಾರಾಶ್ಬಿಕಮುಗ್ರಪುಂಖಪ್ರೇಂಖೋಳಾನೇಕನೇತ್ರಪಟ್ಟಿಕಾಸಟೂಳ್ಸರಳಕುಂತಹಸ್ತಮಹಾಹಯಾರೋಹಣಮಸಿತಭುಜಗಶಿಶುತರಳತರವಾರಿಖಡ್ಗಖೇಟಕವ್ಯಗ್ರಕರದ್ವಯೋದ್ದಾಮಪದಾತಿಬಹಳಮಿದು ಲಾಟಬಲಂ, ಎಂದನೇಕದೇಶಾಧೀಶಬಲಂಗಳಂಬೇಱುವೇಱು ತೋಱುತ್ತುಂ ಬರ್ಪನ್ನೆಗಂ ಮುಂದೆ,

ಇಭಖಡ್ಗಿವ್ರಾತನಾನಾಹರಿಮಯಕಟಕಭ್ರಾಜಿತಂ ತುಂಗವಂಶ
ಪ್ರಭವಂ ಸಿಂಹಾಸನಶ್ರೀಸಮುಚಿತಮಮೃತಾಂಭೋಧಿಕಲ್ಲೋಲಮಾಳಾ ।
ನಿಭಲೀಲಾಸಂಚಳಚ್ಚಾಮರರುಚಿರಮಿಳಾಚಕ್ರವಿಖ್ಯಾತಭೂಭೃ
ತ್ಪ್ರಭು ಚಕ್ರಾಧೀಶನೊಳ್ ಮಚ್ಚರಿಪವೊಲೆಸದಿರ್ದತ್ತು ರೌಪ್ಯಾಚಳೇಂದ್ರಂ

ವ॥ ಅಂತು ವಿಜಯಾರ್ಧಾಚಳಕಟಕಾಭಿಮುಖೀಕೃತನಿಜವಿಜಯಕಟಕನಾಗಿ ಬಡಗವೊಗದೆ ನಡೆದು ತನ್ಮಹೀಧರದ ಜಗತೀತಳಮಣಿಮಯಸೋಪಾನಮನೇಱುವಲ್ಲಿ ಪಶ್ಚಿಮಾಭಿಮುಖನಾಗಿ ಪೋಗಿ ಪಂಚಷಡ್ಯೋಜನಾಯಾಮದೊಳಂ ದ್ವಾದಶಯೋಜನವಿಸ್ತಾರಾಷ್ಟಯೋಜನೋತ್ಸೇಧವಜ್ರಕವಾಟಪುಟಮುಂ ವಿಚಿತ್ರಮಣಿಮಯಖಚಿತ್ರತದ್ವಾರಬಂಧಬಂಧುರಮುಮಧಸ್ಸ್ಥಳಪ್ರಸರ್ಪತ್ಸಿಂಧುವಾಹಪ್ರವಾಹವಿರಾಜಿತಮುಂ ಪ್ರಸವಾಗಾರದಂತೆ ನಿಷಿದ್ಧಾನ್ಯಪ್ರವೇಶಮುಂ ರಾಜಭವನದಂತೆ ಕೃತರಕ್ಷಾವಿಧಿಯುಂ ವಿವಾಹಗೇಹದಂತೆ ಸಂಗತಮಂಗಳಪರಿಕರಮುಂ ಜೀವಿತಾಶಯದಂತೆ ಅತ್ಯಾಯಾಮಮುಂ ಮುಕ್ತಜ್ವರದಂತೆ ನಿರ್ಮುಕ್ತೋಷ್ಮಮುಂ ಮೂರ್ಛಾಪ್ರಾಪ್ತನಂತೆ ತಮೋಮಯಮುಮಪ್ಪ ತಮಿಸ್ರಗುಹೆಯನೆಯ್ದಿದಾಗಳ್,

ಅದಱೊಳಗೆ ಪುದಿದು ಮಂದೈ
ಸಿದ ಕತ್ತಲೆಗಗಿದು ಸುಗಿವ ಪೆರ್ಬಡೆಯುಂ ಕಂ ।
ಡಿದು ನಡೆಯದೆ ಸೆಡೆದಿಂದಿ
ರ್ದುದೆಂದು ಬೆಸಸಿದೊಡೆ ಚಕ್ರಿ ಸೇನಾಪತಿಯುಂ ॥ ೭೪

ಣ್ದಿರದಾದಿಬ್ರಹ್ಮನೇೞ್ತ್ತೆರ್ದನೆ ಕನಸುವೇೞ್ದಪ್ಪುದೆಂದಗ್ರಜಂಗಾ
ಪರದಿಂಪಂ ಪೇೞ್ದ ಕೇಣ್ಬುತ್ಸವದೊಳ್ ಪರಮಾನಂದಮಂ ತಾಳ್ದಿ ನಿಂದಂ ॥

ವ॥ ಅನ್ನೆಗಮಾದಿಮುನೀಶ್ವರನುಮಾಪುರಾಂತರಾಳದೊಳ್ ಸಂವೇಗವೈರಾಗ್ಯಾಭಿವೃದ್ಧ್ಯರ್ಥಮಾಗೆ ಜಗತ್ಕಾಯಸ್ವಭಾವಭಾವನಾಪರಂ ಸಕಳಶರೀರಗುಣಾಧಿಕದುಃಖಾರ್ದಿತಾವಿನೀತರೊಳ್ ಮೈತ್ರಿಪ್ರಮೋದಕಾರುಣ್ಯಮಾಧ್ಯಸ್ಥವೃತ್ತಿಗಳಂ ಭಾವಿಸುತ್ತುಂ ಯುಗ್ಮಪ್ರಮಾಣಕ್ಷೋಣೀನಿರೀಕ್ಷಣನಿರತನುಮತಿದ್ರುತವಿಲಂಬಿತಗತಿವ್ಯಪೇತನುಮಾಗಿ ನಗರಾರಣ್ಯನಿರ್ವಿಶೇಷನುತ್ತಮಮಧ್ಯಮಜಘನ್ಯಾಗಾರಂಗಳೊಳ್ ಚಂದ್ರಗತಿಯಿಂ ಸಲುತ್ತುಮಾಳೋಕಸಂಭ್ರಮೋಪೇತಪುರಜನಾನುಗಮ್ಯಮಾನಂ ಸೋಮಪ್ರಭರಾಜಮಂದಿರಾಭಿಮುಖನಾಗಿ ಬರ್ಪನ್ನೆಗಂ, ದ್ವಾರಪಾಳಕಂ ಸಿದ್ಧಾರ್ಥನೆಂಬಂ ಪರಿತದುಭಗವದ್ವೃತ್ತಕಪ್ರಸಕ್ತವಚನರಚನಾಮುಖರಮುಖಸರಸೀರುಹನಾಗಿರ್ದ ಸೋಮಪ್ರಭಂಗಂ ಶ್ರೇಯಾಂಸಂಗಮಱಿಪಿದಾಗಳ್,

ಕರಕಳಿತಾರ್ಘ್ಯಪಾದ್ಯನನವದ್ಯಗುಣಂಗೆ ಸಮಸ್ತರಾಜಕಂ
ಬೆರಸಿದಿರೆೞ್ದು ರಾಜಗೃಹದಿಂ ಪೊಱಮಟ್ಟತಿಭಕ್ತಿಯಿಂ ಪದಾಂ ।
ಬುರುಹಮನೆಯ್ದೆ ವಂದೆಱಗೆ ಶೋಭಿಸಿದಂ ಮುನಿಮುಖ್ಯನಾಗಳಿ
ರ್ವರ ನಡುವಿರ್ದ ನೀಳನಿಷಧಂಗಳ ಮಧ್ಯದ ಮಂದರಾದ್ರಿವೋಲ್ ॥ ೧೩೧

ವ॥ ಆಗಳಾದಿತೀರ್ಥಕರ್ತಾರನ ದಿಗಂಬರರೂಪಮಂ ಕಾಣಲೊಡಂ ಶ್ರೀಮತಿಯಾದ ಭವದೊಳ್ ವಜ್ರಜಂಘನುಂ ತಾನುಮಿರ್ದ ಸರ್ಪಸರೋವರದೊಳ್ ಚಾರಣಯುಗಳಕ್ಕೆ ವಿಧಿಪೂರ್ವಕಂ ಮಹಾದಾನಮನಿತ್ತುದನಾಗಳಾಗಳ್ ಪುಟ್ಟಿದ ಭವಸಂಸ್ಕಾರದಿಂದಂ ಸವಿಸ್ತರಮಱಿದು,

ಈಯಲ್ಬಂದತ್ತು ಕಲ್ಪಾಂಘ್ರಿಪಮಭಿಮತಮಂ ಪೂರ್ವಪುಣ್ಯಾರ್ಜಿತಂ ಕೊ
ೞ್ಳೀಯಲ್ಬಂದತ್ತಿದೊಂದಕ್ಷಯನಿಧಿಯೆನುತುಂ ತನ್ನನೊಲ್ದಾತ್ರಿಲೋಕ ।
ಶ್ರೀಯೆಲ್ಲಂ ಪೊರ್ದಿದಂತೇನೊಸೆದನೊ ಮನದೊಳ್ ಸೂಕ್ತಿಕರ್ಣಾವತಂಸಂ
ಶ್ರೇಯಾಂಸಂ ಪ್ರೋನ್ನತಾಂಸಂ ಸುಕವಿಜನಮನೋಮಾನಸೋತ್ತಂಸ
ಹಂಸಂ ॥ ೧೩೨

ವ॥ ಅಂತತಿಪ್ರಮೋದಪ್ರೀಣಿತಾಂತಃಕರಣನಾಗಿ,

ಇದರೊಳ್ ಮಂಗಳಗೀತತೂರ್ಯನಿನದಂ ಕೈಗಣ್ಮೆ ಮಾಂಗಲ್ಯವೇ
ಷದ ಕಾಂತಾತತಿಮಂಗಳೋಪಕರಣದ್ರವ್ಯಂಗಳಿಂದೊಪ್ಪೆ ಪೆ ।
ರ್ಚಿದ ತನ್ನುತ್ತಮಭಕ್ತಿಯಿಂ ನಿಲಿಪುದುಂ ಶ್ರೀಯೋಗೃಹದ್ವಾರದೊಳ್
ನಿಧಿನಿಲ್ವಂತಿರೆ ನಿಂದನೂರ್ಜಿತಗುಣಂ ಸಂಸಾರಸಾರೋದಯಂ ॥ ೧೩೩

ಗ॥ ಇದು ದೇವೇಂದ್ರಮುನೀಂದ್ರವಂದ್ಯ ಪರಮಜಿನೇಂದ್ರಮುಖ
ಚಂದ್ರವಾಕ್ಚಂದ್ರಿಕಾಪ್ರಸರ ಪ್ರಸಾದೋದೀರ್ಣ ಸೂಕ್ತಿ
ಕಲ್ಲೋಲಮಾಲಾ ಕೀರ್ಣಕವಿತಾಗುಣಾರ್ಣವ
ಪ್ರಣೀತಮಪ್ಪಾದಿ ಪುರಾಣದೊಳ್
ಪರಿನಿಷ್ಕ್ರಮಣಕಲ್ಯಾಣವರ್ಣನಂ
ನವಮಾಶ್ವಾಸಂ ಸಂಪೂರ್ಣಂ.



## ದ ಶ ಮಾ ಶ್ವಾ ಸಂ.

ಶ್ರೀದಾನತೀರ್ಥವಿಖ್ಯಾತನಿ
ನಾದುದು ಪಱರಾದಿತೀರ್ಥಕರನಂ ನಿಱಿಸ ।
ಲ್ಕೇದೊರೆಯರೀಗಳೀಯುಗ
ದಾದಿಯೊಳೀತನೆ ಸರಸ್ವತೀಮಣಿಹಾರಂ ॥ ೧

ವ॥ ಎಂಬಿನಮಾದಿತೀರ್ಥಕರ್ತಾರನಂ ಶ್ರದ್ಧಾದಿಸಪ್ತಗುಣಸಂಪನ್ನನುಂ ಪ್ರತಿಗ್ರಹಾದಿನವವಿಧಪುಣ್ಯಪುರಸ್ಸರನುಮಾಗಿ ಸಿಱಿಸಿ, ಕರ್ಮಭೂಮಿಯ ಮೊದಲೊಳಾದಿದಾನತೀರ್ಥಪ್ರವರ್ತಕಂ ಶ್ರೇಯಾಂಸಂ ನಿಜಾಗ್ರಜನಪ್ಪ ಸೋಮಪ್ರಭಂ ಬೆರಸು ಕನಕಕಳಶದೊಳ್ ತೀವಿದಮೃತರಸಸಮಾನ ಧವಳೇಕ್ಷುರಸಧಾರೆ ಪುಣ್ಯಧಾರೆಯಂತೆ ಸೊಗಯಿಸುವಿನಂ ಸಮುತ್ತಾನೀಕೃತವಿಶಾಲಪಾಣಿಪಾತ್ರದೊಳೆಱೆವುದುಂ,

ವಸುಧಾರೆ ನಾಡೆಯುಂ ಕ
ಣ್ಗೆಸದಳಮಾಯ್ತಮರಕರಪರಿಚ್ಯುತಮೆತ್ತಂ ।
ಪೊಸಪೂವಿನ ಸರಿ ಪಿರಿದಾ
ಯ್ತಸದಳಮೆಸಪೆಲರದೊಂದು ಮೇಲ್ವಾಯ್ದಾಗಳ್ ॥ ೨

ಇವು ಪಾತ್ರದಾನತರುವಿನ
ವಿವಿಧಫಳಾವಳಿಗಳಿವು ತದಂಘ್ರಿಪದ ದಳಂ ।
ನವಕುಸುಮಾಳಿಗಳೆನಿಸಿದು
ವವಿರಳತರರತ್ನಪುಷ್ಪಧಾರಾಸಾರಂ ॥ ೩

ಆನಂದದುಂದುಭಿಧ್ವನಿ
ತಾನೊಡನೊಡನೆಸೆಯೆ ನಭದೊಳೊಡನೆಸೆದುದಹೋ ।
ದಾನಿಯಹೋಪಾತ್ರಮಹೋ
ದಾನಮಹೋದೇಯಮೆಂಬ ದಿವ್ಯಧ್ವನಿಗಳ್ ॥ ೪

ವ॥ ಅಂತು ಕಾಯಸ್ಥಿತಿಯಂ ನಿರ್ವರ್ತಿಸಿ ತದನಂತರಮೆ,

ಕುರುಗೋತ್ರಂ ಧರೆಯೊಳ್ ಪವಿತ್ರಮೆನಿಸಲ್ಕಿನ್ನಾತರ್ದಿಂದೆಮ್ಮ ವಂ
ದಿರವಿಖ್ಯಾಭೂಭುವನೈಕಪೂತಮೆನಿಸಲ್ ಸಾಲ್ದಿರ್ದದಾನುಂ ಕೃತಾ ।

ರ್ಥರೆನೆಂದಾಪವನುಗ್ರಹಂಗೆಯ್ದೆ ನೀಮೆೞ್ತಂದೊಡೆಂದಾಗಳ್
ವರ್ರಾಮತ್ಯುತ್ತಮಭಕ್ತಿಯಿಂಪೆಱಗಿದರ್ ತತ್ಪಾದಪದ್ಮಂಗಳೊಳ್ ೫

ವ॥ ಅಂತೆಱಗಿದಾಗಳ್,

ಅಕ್ಷಯದಾನಂ ನಿಮಗ
ಕ್ಕಕ್ಷುಣ್ಣಮಿದೆಂದು ಪರಮಮುನಿ ಪರಸೆ ಬೞಿ ।
ಕ್ಕಕ್ಷಯತೃತೀಯೆಯೆಂಬಳಿ
ಳಕ್ಷಿತಿಗಂ ನೆಗೞ್ದುದಲ್ತೆ ತತ್ಪುಣ್ಯದಿನಂ ೬

ವ॥ ಅಂತು ಪರಸಿ ಪೊಱಮಟ್ಟು ಪೋಪ ಯತಿಪತಿಯುಂ ಕ್ಷಿತಿಪತಿಗಳಿರ್ವರುಮಗಲಲಾಱದೊಡನೊಡನೆ ಪೋಗಿ,

ಅಂತು ಮುನಿವೃಷಭನಂ ಕೞಿ
ದಂತರಮಂ ಕಳಿಪಿ ಮಗುೞ್ದುಮಗುೞ್ದುಂ ಕಾಂತಾ ।
ರಾಂತರಮಂ ಪುಗುವನ್ನೆಗ
ಮಂತವರೆಮೆಯಿಕ್ಕದಂತೆ ನೋಡಿದರಾಗಳ್ ॥ ೭

ವ॥ ಅಂತೆಂತಾನುಮವರನನುಗಮಿಸಿ ಸೋಮಪ್ರಭನುಂ ಶ್ರೇಯಾಂಸನುಂ ಮಗುೞ್ದು ಬಂದು ದಿವಿಜಕರೋನ್ಮುಕ್ತಮುಕ್ತಾದಿರತ್ನಂಗಳಂ ಪೊೞಲೆಲ್ಲಂ ಗೋಸನೆಪಿಡಿಸಿ ನೆಗೞ್ದ ದಾನಾತಿಶಯಕ್ಕೆ ವಿಸ್ಮಯಂಬಟ್ಟು ಮಹಾಂಭೋರಾಶಿಗಂಭೀರನಪ್ಪಾದಿಭಟ್ಟಾರಕನ ಚಿತ್ತವೃತ್ತಿಯನಾಮಹಾತ್ಮನಾವಮಾಪ್ಕೆಯೊಳಱಿದನೆಂದು ಭರತೇಶ್ವರನಕಂಪನಾದಿನೃಪಸಮೂಹಂ ಬೆರಸು ಬಂದು ಪೂಜಿಸಿ,

ಸುರನರಲೋಕವಿಸ್ಮಯಕರಂ ದೊರೆವೆತ್ತುದು ನಿನ್ನ ದಾನವಾ
ಗುರುವಿನ ಚಿತ್ತವೃತ್ತಿಯನದೆಂತುಪಲಕ್ಷಿಸಲಾರ್ತೆಯೋ ಮಹಾ ।
ಪುರುಷನಧೀಶನಿಂದೆನಗೆ ನೀನತಿಪೂಜ್ಯನೆಯೆಂದು ಪೆರ್ಚಿದಾ
ದರದೊಳೆ ತನ್ನನಿಂತು ಬೆಸಗೊಂಡೊಡೆ ಸಂತಸದಿಂ ಕುರುಧ್ವಜಂ ೮

ವ॥ ಇಂತೆಂದು ಪೇೞ್ದಂ:—ಈವೃಷನಾಥನೀಭವಕ್ಕೆಂಟನೆಯ ಭವದೊಳ್ ಈಜಂಬೂದ್ವೀಪದ ಪೂರ್ವವಿದೇಹದ ಪುಷ್ಕಳಾವತೀವಿಷಯದ ಉತ್ಪಳ

ಖೇಟಮೆಂಬ ಪೊೞಲನಾಳ್ವ ವಜ್ರಬಾಹುಗಮಾತನರಸಿ ವಸುಂಧರೆಗಂ ವಜ್ರಜಂಘನೆಂಬೊಂತನೂಜನಾದಂ. ಅನುಮಾವಿದೇಹದ ಪುಂಡರೀಕಿಣಿಯೆಂಬ ಪೊೞಲನಾಳ್ವ ವಜ್ರದಂತಚಕ್ರವರ್ತಿಗಂ ಆತನ ಮಹಾದೇವಿಲಕ್ಷ್ಮೀಮತಿಗಂ ಶ್ರೀಮತಿಯೆಂಬ ತನೂಜೆಯಾಗಿ ವಜ್ರಜಂಘಂಗೆ ವಲ್ಲಭೆಯೆಂ. ಅಂದು ಸರ್ಪಸರೋವರಮೆಂಬ ಕೊಳನ ತಡಿಯೊಳ್ ಬೀಡಂ ಬಿಟ್ಟಿರ್ದು ಚಾರಣಯುಗಕ್ಕೆ ವಿಧಿಪೂರ್ವಕಂ ಮಹಾದಾನಮನಿತ್ತುದನೀಗಳಾದಿನಾಥನ ಮುನಿರೂಪಮಂ ಕಾಣಲೊಡಂ ಜಾತಿಸ್ಮರನಾಗಿ ಮಾರ್ಗಸ್ಥಿತಿಯನಱಿದು ನಿಱಿಸಿದೆಂ. ಆದಾನಮಂ ಕುಡುವ ತನಗಂ ಕೊಳ್ವ ಪರಮಪಾತ್ರಕ್ಕಮುಪಕಾರಿಯಪ್ಪಾಹಾರಾದಿವಿರತಣಮದುವುಂ,

ಕುಡುವೊಂ ಕುಡುವುದು ಪಾತ್ರಂ
ಕುಡೆ ಪಡೆವತಿವಿಪುಳಫಲಮೆನಲ್ ನಾಲ್ಕುತೆಱಂ ।
ಗಡ ದಾನಮಲ್ಲಿ ಮೊದಲೊಳ್
ಕುಡುವಂ ಶ್ರದ್ಧಾದಿಗುಣಸಮನ್ವಿತನಕ್ಕುಂ ॥ ೯

ವ॥ ಕುಡುವುದುಮಾಹಾರಾಭಯಭೈಷಜ್ಯಶಾಸ್ತ್ರದಾನದಿಂ ಚತುರ್ವಿಧಮಕ್ಕುಂ. ಪಾತ್ರಮುತ್ತಮಮಧ್ಯಮಜಘನ್ಯಭೇದದಿಂ ತ್ರಿವಿಧಮಕ್ಕುಂ. ಅಲ್ಲಿ ದರ್ಶನವಿಶುದ್ಧನುಂ ಶೀಲಸಂಪನ್ನನುಮಪ್ಪ ಸಂಯತನುತ್ತಮಪಾತ್ರಂ; ಶ್ರೀಸಮ್ಯಗ್ದರ್ಶನವಿಶುದ್ಧನುಮಣುವ್ರತಧಾರಿಯುಮಪ್ಪಶ್ರಾವಕಂ ಮಧ್ಯಮಪಾತ್ರಂ ; ದರ್ಶನವಿಶುದ್ಧನಾಗಿಯುಂ ಶೀಲವ್ರತಭಾವನಾರಹಿತನಸಂಯತಂ ಜಘನ್ಯಪಾತ್ರಂ ; ಮಿಥ್ಯಾದೃಷ್ಟಿಯಪ್ಪಂ ತನ್ನನೆಂತುಂ ಸಮಱಿನೆಗಪ್ಪೊಡಮಾತನಪಾತ್ರಮೆ.

ಫಳಮುಂ ಸುಪಾತ್ರದಾನದ
ಫಳಮೆ ದಲುತ್ಕೃಷ್ಟಭೋಗಭೂಮಿಯೊಳಮನಾ ।
ಕುಳಕಲ್ಪಾಮರಲೋಕಂ
ಗಳೊಳಂ ಪುಟ್ಟಿಸುಗುಮಪ್ಪ ಕಾರಣದಿಂದಂ ॥ ೧೦

ವ॥ ಉೞಿದ ಮಧ್ಯಮಜಘನ್ಯಪಾತ್ರದಾನಂಗಳ್ ಮಧ್ಯಮಜಘನ್ಯಭೋಗಭೂಮಿಭೋಗಾನುಭವಮನೀಗುಂ ; ಅಪಾತ್ರದಾನಂ ಭೋಗಭೂಮಿ

ಗಳೊಳಂ ಭೋಗಭೂಮಿಪ್ರವಿಭಾಗದ್ವೀಪಂಗಳೊಳ್ ತಿರ್‍ಯಗ್ಜಾತಿತ್ವಮುಮಂ ಅಂತರ್ದ್ವೀಪಂಗಳೊಳ್ ಕುಮಾನುಷತ್ವಮುಮಂ ಮಾಡುಗುಂ; ಇದಾಪಾತ್ರದಾನಫಲಂ.

ಅಭಯದಿಂ ನಿರೋಗರುಂ ಶ್ರುತ
ವಿಭವಸಮನ್ವಿತರುಮಪ್ಪರೆಂಬುದು ಪಿರಿದ ।
ಲ್ತು ಭವಾಂಬುಧಿಯುಮನೀಸುವ
ರಭಯೌಷಧಶಾಸ್ತ್ರದಾನಫಳವಿಳಸನದಿಂ ೧೧

ಎಂಬುದುಮಾಶ್ರೇಯೋವಚ
ನಂ ಬಗೆಯನಲರ್ಚೆ ಭವ್ಯನೃಪನಿಕರಮುದೇ ।
ನೆಂಬುತ್ಸಾಹದೆ ನಲಿದುದೊ
ಸೊಂಬುಪಯೋಧರಕೆ ನಲಿವ ಶಿಖಿನಿಕರದವೊಲ್ ೧೨

ವ॥ ಆಗಳವರ್ಗಳ್,

ಯತಿ ವಿಮಳಯಶಃಪ್ರಸರಂ
ಗತದೋಷಗುಣಂ ತ್ರಿವರ್ಗಫಳನಿಳಯಂ ಸ ।
ತ್ಕೃತಿಯುಂ ದಾನಮುಮಾದಂ
ಪತಿಗಲ್ಲದೆ ಪೇಟ ಪೆಱಂಗೆ ಸಮನಿಸದಪ್ಪುದೇ ೧೩

ವ॥ ಅದಱಿನೀಯುಗಾದಿಯೊಳಾದಿದಾನತೀರ್ಥಪ್ರವರ್ತನೈಕಪುಣ್ಯಭಾಜನನ್ನೈ ನೀನೆ ಯೆಂದು ಪೊಗೞ್ದು ಪೂಜಿಸಿ ಪೋದರ್. ಅನ್ನೆಗಮಿತ್ತ ವೃಷಭಯೋಗೀಂದ್ರನುಂ ಸಕಳಸಾವದ್ಯಾತಿದೂರನುಮಪ್ಪ ಜಿನಕಲ್ಪಿತಮೆಂಬಾಚರಣಮಂ ಕೈಕೊಂಡು, ಯೋಗಯೋಗ್ಯಂಗಳೊಳ್ ಅವಹಿತಧ್ಯಾನಾಧೀನಮಾನಸನಾಗಿ ವಿಹಾರಿಸುತ್ತುಂ ಸಂವತ್ಸರಸಹಸ್ರಂಗಳಂ ಕಳಿಪಿ, ಪುರಿಮತಾಳಪುರಬಹಿರ್ಭಾಗನಿಕಟಶಕಟೋದ್ಯಾನವಟವಿಟಪಿಯ ಕೆಳಗೆ ವಿಶಾಳನಿರಾಕುಳನಿರ್ಜಂತುಕನಿರ್ಮಲಶಿಲಾಪಟ್ಟದ ಮೇಲೆ ನಿಬಿಡನಿಬದ್ಧಪರ್ಯಂಕಾಸನನುಂ ಪೂರ್ವಾನುಮುಖನುಮಾಗಿರ್ದಾಗಳ್,

ಕರಣಗಣಂ ಕುನುಂಗಿರೆ ಮನಂ ನೊಸಲಲ್ಲಿರೆ ಲೋಚನಂಗಳು
ಳ್ಳೆರೆಮುಗುಳ್ದೆಂಬುವೆತ್ತಿರೆ ಕರದ್ವಯಪಲ್ಲವಮಂಕದೊಳ್ ಮರ

ಲ್ದಿರೆ ತನು ನಿಷ್ಪ್ರಕಂಪಮಿರೆ ದಂತಚಯಂ ಸಮನಾಗೆ ತನ್ನೊಳೊಂ
ದಿರೆ ಸಮಸಂದುದಾಪರಮಯೋಗಿಗೆ ಯೋಗನಿಯೋಗಭಾವನಂ ೧೪

ವ॥ ಅಂತು ಯೋಗಯೋಗ್ಯಬಾಹ್ಯಸಾಮಗ್ರಿಯೊಳ್ ಮುನ್ನಮೆ ನೆಱಿದು ಪರಮಪದಮನೆ ಮನದೊಳ್ ನಿಱಿಸಿ ಸಮ್ಯಗ್ಜ್ಞಾನದರ್ಶನಾನಂತವೀರ್ಯಸೂಕ್ಷ್ಮಗುರುಲಘುತ್ವಾವಗಾಹಾವ್ಯಾಬಾಧಂಗಳೆಂಬ ಸಿದ್ಧಪರಮೇಷ್ಠಿಗಳಷ್ಟಗುಣಂಗಳಂ ನೆನೆಯುತ್ತುಂ, ಅಧ್ರುವಾದಿದ್ವಾದಶಾನುಪ್ರೇಕ್ಷಾಭಾವನಾಭಾವಿತಾಂತಃಕರಣನಾಗಿ ಮುನ್ನಮಾಜ್ಞಾವಿಚಯಮಪಾಯವಿಚಯವಿಪಾಕವಿಚಯಸಂಸ್ಥಾನವಿಚಯಮೆಂಬ ನಾಲ್ಕುಂ ಧರ್ಮ್ಯಧ್ಯಾನಮಂ ಧ್ಯಾನಿಸುತ್ತುಂ, ಜ್ಞಾನಾದಿಪರಿಣಾಮಂಗಳೊಳ್ ನಿರತಿಶಯಲೇಶ್ಯಾವಿಶುದ್ಧಿಯಂ ತಾಳ್ದಿ, ತದನಂತರಮಪ್ರಮತ್ತಗುಣಸ್ಥಾನಂಗಳೊಧಃಪ್ರವೃತ್ತಿಕರಣಪರಿಣಾಮಂಗಳಿಂದಮನಂತಾನುಬಂಧಿಕ್ರೋಧಮಾನಮಾಯಾಲೋಭಂಗಳಂ ವಿಸಂಯೋಜಿಸಿ, ಅಂತರ್ಮುಹೂರ್ತಮಂ ವಿಶ್ರಮಿಸಿ, ಮಗುೞ್ದು ತ್ರಿವಿಧಕರಣಪರಿಣಾಮಪರಿಣತನನುಕ್ರಮದಿಂ ಮಿಥ್ಯಾತ್ವಸಮ್ಯಙ್ಮಿಥ್ಯಾತ್ವಸಮ್ಯಕ್ತ್ವಪ್ರಕೃತಿಯೆಂಬ ದರ್ಶನಮೋಹನೀಯತ್ರಿಕದ ನಿರ್ಮೂಲದಿಂ ಕ್ಷಾಯಿಕಸಮ್ಯಗ್ದೃಷ್ಟಿಯಾಗಿ, ಬೞಿಯಮಂತರ್ಮುಹೂರ್ತಕಾಲಂ ಪ್ರಮತ್ತಾಪ್ರಮತ್ತಪರಾವರ್ತನಸಹಸ್ರಂಗೆಯ್ದು ಮೋಕ್ಷಪ್ರಾಸಾದಾಧಿರೋಹಣನಿಶ್ರೇಣೀಭೂತಕ್ಷಪಕಶ್ರೇಣಿಪ್ರಯೋಗ್ಯಾಧಃಪ್ರವೃತ್ತಿಕರಣಪರಿಣತನಪೂರ್ವಕರಣಕ್ಷಪಕಪ್ರಥಮಶುಕ್ಲಧ್ಯಾನಪರಿಣತನಾಗಿದೀರ್ಘಾಯುಃಕರ್ಮಮನುೞಿಪಿಮತ್ತಿನುೞಿದ ಕರ್ಮಂಗಳಂ ಸ್ಥಿತ್ಯನುಭಾಗಕಾಂಡಕಘಾತಪ್ರದೇಶಗುಣಶ್ರೇಣಿನಿರ್ಜರಾದಿವಿಧಿಯಿನನುಕ್ರಮಂ ಕಿಡಿಸುತ್ತುಂ ಪ್ರತಿಸಮಯಮನಂತಗುಣಶಕ್ತಿಖಚಿತೈಕಪರಿಣಾಮನಿವೃತ್ತಿಕರಣಕ್ಷಪಕನಾಗಿ ಪೂರ್ವೋಕ್ತವಿಧಾನದಿನಂತರ್ಮುಹೂರ್ತದಿಂ ನಿದ್ರಾನಿದ್ರಾಪಚಳಾಪ್ರಚಳಾಸ್ತ್ಯಾನಗೃದ್ಧಿನರಕಗತಿತತ್ಪ್ರಯೋಗ್ಯಾನುಪೂರ್ವತಿರ್ಯಗ್ಗತಿತತ್ಪ್ರಯೋಗಾನುಪೂರ್ವ್ಯೇಕೇಂದ್ರಿಯವಿಕಳೇಂದ್ರಿಯಜಾತ್ಯಾತಪೋದ್ಯೋತಸ್ಥಾವರಸಾಧಾರಣಸೂಕ್ಷ್ಮಂಗಳೆಂಬ ಪದಿನಾಱುಪ್ರಕೃತಿಗಳುಮಂ ನಿರವಶೇಷಂ ಕಿಡಿಸಿ, ಮತ್ತಮಂತರ್ಮುಹೂರ್ತದಿಂ ವಿಶುದ್ಧಪರಿಣಾಮಾತಿಶಯಪರವಶನಪ್ರತ್ಯಾಖ್ಯಾನಕ್ರೋಧಮಾನಮಾಯಾಲೋಭಂಗಳೆಂಬೆಂಟುಕಷಾಯಂಗಳಂ ಕಿಡಿಸಿ,

ಮತ್ತಂ ಕಿಱುಕಿಱಿದು ಬೇಗದಿಂ ತನ್ನ ಪರಿಣಾಮವಿಶೇಷದಿಂ ಚತುಸ್ಸಂಜ್ವಲನವನೋಕಷಾಯಂಗಳೆಂಬ ಪದಿಮೂಱುಪ್ರಕೃತಿಗಳುಮಂತರಾಯಕರಣಂಮಾಡಿ, ಮತ್ತಂಕಿಱುಕಿಱಿದು ಬೇಗದಿಂ ಕ್ರಮಕ್ರಮದೊಳ್ ನಪುಂಸಕವೇದಮುಂ ಸ್ತ್ರೀವೇದಮುಂ ಪುಂವೇದಮುಂ ಪುರಾತನಕರ್ಮದೊಡನೆ ಹಾಸ್ಯರತ್ಯರತಿಶೋಕಭಯಜುಗುಪ್ಸಾಭಿಧಾನನವನೋಕಷಾಯಷಟ್ಕರ್ಮಮುಂ ಘಾತಿಸಿ, ಪುಂವೇದಾದಿನವಬಂಧವುಮಂ ಸಮಯೋನದ್ವ್ಯಾವಳಿಕಾಸಮಯಂಗಳಿಂ ಕಿಡಿಸಿ, ಬೞಿಯುಮುಪಗತವೇದನಾಗಿ, ಮತ್ತಂ ಪ್ರತಿಸಮಯಪ್ರವರ್ತಮಾನಸಂಜ್ವಲನಚತುಃಕಷಾಯಘಾತಿತಾಶೇಷಾನುಭಾಗಸ್ವಕರ್ಮಕರಣಾಪೂರ್ವಕರಣಸ್ಪರ್ಧಕಾಭಿಘಾತದಿನಂತರ್ಮುಹೂರ್ತಕಾಲದಿಂ ಕಿಡಿಸಿ, ಬೞಿಯಂ ಪೂರ್ವಸ್ಪರ್ಧಕಾನುಭೋಗಮನುಚಿತಕೃಷ್ಟಿವಿಧಾನದಿನನಂತಗುಣಹಾನಿರೂಪದಿಂದ್ವಾಪದಸಂಗ್ರಹಕೃಷ್ಟಿಗಳಂ ಮಾಡುತ್ತುಮಂತರ್ಮುಹೂರ್ತದಿಂ ಕೃಷ್ಟಿರೂಪಗತಚತಷ್ಕಷಾಯಸಮಸ್ತಾನುಭಾಗನಾಗಿ, ಮತ್ತಂ ಕಿಱುಕಿಱಿದುಬೇಗದಿಂಕ್ರಮಕ್ರಮದಿಂದಂ ಕ್ರೋಧಮಾನಮಾಯಾಲೋಭಸಂಜ್ವಲನಂಗಳಂ ಮೂಱುಂ ತೆಱದ ಕೃಷ್ಟಿಗಳಂ ಬೇಱೆಬೇಱೆಕಿಡಿಸಿ ಕಷಾಯತ್ರಿಕಕ್ಕೆನಿರ್ಮೂಳವಿಳಯಂಮಾಡಿ, ಮತ್ತಿನಿಸುಂ ಬೇಗದಿಂಲೋಭಸಂಜ್ವಲನದ ಮೊದಲ ಕೃಷ್ಟಿಗತಾನುಭಾಗಮಂ ಕಿಡಿಸಿ ಮತ್ತಂ, ದ್ವಿತೀಯಕೃಷ್ಟಿಗತಾನುಭಾಗಮಂ ಭೇದಿಸುತ್ತುಂ, ಬಾದರಸಾಂಪರಾಯಕೃಷ್ಣರೂಪಾನುಭಾಗಮನನಂತಗುಣಹಾನಿರೂಪದಿಂ ಕುಂದಿಸಿ ಸೂಕ್ಷ್ಮಸಾಂಪರಾಯಸಮನ್ವಿತಸೂಕ್ಷ್ಮಸಾಂಪರಾಯಕ್ಷಪಕನಾಗಿ ಯಥೋಕ್ತಪರಿಣಾಮದಿಂ ಸೂಕ್ಷ್ಮಸಾಂಪರಾಯಕೃಷ್ಟಿಗಳಂ ಮಾಡುತ್ತುಮಂತರ್ಮುಹೂರ್ತಕಾಲದಿಂ ಬಾದರಲೋಭಸಂಜ್ವಲನಮಂ ಕಿಡಿಸಿ, ವಿನ್ವೃತ್ತಸಾಮಾಯಿಕಚ್ಛೇದೋಪಸ್ಥಾಪನಾಶುದ್ಧಿಸಂಯಮಾನುಗತಾನುವೃತಿಕರಣಸ್ಥಾನನಾಗಿ ತದನಂತರಸಮಯದೊಳ್ ಸೂಕ್ಷ್ಮಸಾಂಪರಾಯಸಂಯಮಸಮನ್ವಿತಂಸೂಕ್ಷ್ಮಸಾಂಪರಾಯಕ್ಷಪಕನಾಗಿ ಯಥೋಕ್ತಪರಿಣಾಮಕಾಲದಿಂ ಸೂಕ್ಷ್ಮಸಾಂಪರಾಯಲೋಭಕ್ಕೆ ನಿರ್ಮೂಲಂಮಾಡಿ ನಿರಸ್ತಾಷ್ಟಾವಿಂಶತಿಮೋಹನೀಯಮಳಕಳಂಕನಾಗಿ ವೀತರಾಗದ್ವೇಷಭಾವನಾಭಾವಿತಯಥಾಖ್ಯಾತಚಾರಿತ್ರಕ್ಷೀಣಕಷಾಯವೀತರಾಗಛದ್ಮಸ್ಥಗುಣ

ನ್ಧ್ಯಾನಾನೇಕತ್ವವಿತರ್ಕವಿಚಾರಾಭಿಧಾನಧ್ಯಾನಪರಿಣತನಪರಿಮಿತಪ್ರದೇಶನಿ
ರ್ಜರಾದಿಕ್ರಿಯಾಕಳಾಪಕಳಿತನುಚಿತಕತಿಪಯಸಮಯಂಗಳಿನಾತ್ರ ದ್ವಿಚರ
ಮಸಮಯದೊಳ್ ನಿದ್ರಾಪ್ರಚಲೆಗಳಂ ಕಿಡಿಸಿ ಚರಮಸಮಯದೊಳ್
ಮತಿಶ್ರುತಾವಧಿಮನಃಪರ್ಯಯಕೇವಳಾವಬೋಧವಿಷಯಜ್ಞಾನಾವರಣಪಂ
ಚಕಮುಮಂ ಚಕ್ಷುರಚಕ್ಷುರವಧಿಕೇವಲದರ್ಶನಾವರಣಚತುಷ್ಕಮುಮಂ
ದಾನಲಾಭಭೋಗೋಪಭೋಗವೀರ್ಯಾಂತರಾಯಪಂಚಕಮುಮಂ ನಿರ್ಮೂ
ಳಮಪ್ಪಂತೊರ್ಮೊದಲೆ ಕಿಡಿಸಿ ತದನಂತರಸಮಯದೊಳ್,

ಅಳಿದು ಕಿಡೆ ಘಾತಿಗಳ್ ದಾ
ನಲಾಭಭೋಗೋಪಭೋಗವೀರ್ಯಂಗಳೊಳ್ ।
ಗ್ಗಳಿಸಿದನಂತಚತುಷ್ಟಯ
ವಿಳಾಸಿಕೈವಲ್ಯಲಕ್ಷ್ಮಿಯಂ ಯತಿ ಪಡೆದಂ ॥ ೧೪

ಅನತಿಶಯಕೇವಲಜ್ಞಾ
ನನಿರೀಕ್ಷಿತವಿಶ್ವನಾಥನಾದಿಜಿನಂ ಫಾ ।
ಲ್ಗುನಬಹುಳೈಕಾದಶಿಯೊಳ
ಮನಂತಸುಖನಿಳಯಮುತ್ತರಾಷಾಢದೊಳಂ ॥ ೧೫

ಧ್ಯಾನಮರೀಚಿಯಿಂ ಬದರೆ ಘಾತಿತಮಸ್ತಮಮೆಯ್ದೆ ಭವ್ಯಸಂ
ತಾನಸರೋಜರಾಜಿಗೆಲರ್ಮೊದಲಾದಮಳಂಬಮಾಗೆ ವ್ಯ ।
ಮಾನಿಕಚಕ್ರವಾಕದೊಲವುಣ್ಮಿರೆ ಚೆಲ್ವೆಸೆದತ್ತು ಕೇವಲ
ಜ್ಞಾನದಿನೇಶಬಿಂಬದ ಪೊದಳ್ದುದಯಂ ವೃಷಭೋದಯಾದ್ರಿಯೊಳ್ ॥ ೧೬

ವ॥ ಆಪ್ರಸ್ತಾವದೊಳ್,

ಸುರಪುಷ್ಪಾಸಾರದಿಂದಂ ಸುರಗಣಪಟಹಪ್ರಸ್ಫುರದ್ಧ್ವಾನದಿಂದಂ
ಸುರಕಾಂತಾರಾಗದಿಂದಂ ಸುರವಿರಚಿತಮಂದಾನಿಳಾಂದೋಳದಿಂದಂ ।
ಸುರವಂದಿಸ್ತೋತ್ರದಿಂದಂ ದೆಸೆ ಗಗನತಳಂ ತೀವಿ ತಳ್ಳಂಕುಗುಟ್ಟು
ತ್ತಿರೆಯುಂ ಕೈವಲ್ಯಬೋಧೋದಯಮಹಿಮೆ ಜಗಕ್ಕಾದುದಾಶ್ಚರ್ಯಭೂತಂ

ವ॥ ಆಗಳಾದಿದೇವನ ಕೇವಲಜ್ಞಾನಸಂಪೂರ್ಣಚಂದ್ರೋದಯೋಜ್ಜೃಂ
ಭಿತಜಗತ್ರಯಾಂಭೋದಿವೇಳಾಪ್ರಧ್ವಾನಾನುಕಾರಿಘಂಟಾರವಕಂಠೀರವಾರಾ

ವಪಟಹಪ್ರಣಾದಶಂಖನಿಸ್ವನಸಮುತ್ಪನ್ನಬೋಧಾನೇಕಯಾನವಿಮಾನಾ ರೂಢಕಲ್ಪಜಜ್ಯೋತಿಷ್ಕವಾನವ್ಯಂತರಭವನಾಮರನಿಕಾಯಪರಿವೇಷ್ಟಿತ ಶೋಭಿತಮತಿರುಚಿರನಿಜಾಂಗರುಚಿಗಳೊಳಂ ಅನೇಕಾಳಂಕಾರರತ್ನಪ್ರಭಾ ಪ್ರಸರದೊಳಂ ಗಗನತಳಮನಳಂಕರಿಸಿ ಸೌಧರ್ಮೇಂದ್ರನಿಂದ್ರಾಣೀಸಮೇ ತಮನೇಕಕಲ್ಪಾಮರೇಂದ್ರಪರಿವೃತನಾಗಿ ಬರೆ,

ಹಾರಾಂಬುಸ್ವಚ್ಛನೀರಂ ಸುರಯುವತಿಮುಖಾಂಭೋಜನೇತ್ರೋತ್ಪಳಶ್ರೀ
ಸಾರಂ ಕಾಶ್ಮೀರರಾಗಾರುಣಿತಕುಚರಥಾಂಗಾಭಿಧಾನೋಜ್ವಳಂ ನೀ ।
ಹಾರಪ್ರಸ್ಪರ್ಧಿಚಂಚಚ್ಚಮರಜಕಳಹಂಸಾಸ್ಪದಂ ಚೆಲ್ವನಿತ್ತ
ತ್ತೋರಂತಂಭೋದಮಾರ್ಗಂ ತಿಳಿವಕೊಳದವೋಲ್ದೇವಸಂದೋಹದಿಂದಂ
ಸುರಕುಸುಮದ ಪೊಸವಾಸಿಗ
ಮೆರಡುಂ ಕರತಳದೊಳೆಸೆದು ತನ್ನಯ ತೋಳೊಳ್ ।
ದೊರೆಯೆನೆ ಬಂದತ್ತು ಸೊಯಂ
ಬರಕ್ಕೆ ಬರ್ಪಂತು ದೇವಗಣಿಕಾನಿಕರಂ ॥ ೧೯

ಯುಗಪದ್ವಾದಿತದೇವದುಂದುಭಿಗಳಿಂದಾಯ್ತುದ್ಧ ಶಬ್ದಾತ್ಮಕಂ
ಜಗಮುತ್ತುಂಗಕಿರೀಟರಶ್ಮಿರಚಿತಾನೇಕೇಂದ್ರಚಾಪಂಗಳಿಂ ।
ಗಗನಂ ತಿಂತಿಣಿಯಾದುದಾಗಳನಿತುಂ ದಿಗ್ಭಿತ್ತಿಗಳ್ ಚಿತ್ರಭಿ
ತ್ತಿಗಳಂತಾದುವು ಕಲ್ಪಜಾಮರತನುಚ್ಛಾಯಾವಿಳಾಸಂಗಳಿಂ ॥ ೨೦

ಜಯ ಜಯ ನಂದ ನಂದ ಪರಮೇಶ್ವರ ಪಾಪವಿನಾಶ ಲೋಕವಿ
ಸ್ಮಯಕರ ಶಂಭು ಶಂಕರ ಮನೋಜಭಯಂಕರ ಭವ್ಯಬಂಧು ನಿ ।
ಮ್ಮಯ ದಯೆಯಿಂದಮೀಭವಸಮುದ್ರಮನೀಸುವೆವೆಂಬ ದೇವಕೋ
ಟಿಯ ನಿನದಂ ಪಳಂಚಲೆಯೆ ಘೂರ್ಣಿಸಿದತ್ತು ಸಮಸ್ತದಿಕ್ತಟಂ ೨೧

ವ॥ ಅಂತು ಸೌಧರ್ಮೇಂದ್ರಂ ಬಂದು ತನ್ನ ಬೆಸದೊಳ್ ಮುನ್ನಮೆ ಧನದವಿನಿರ್ಮಿತಮಾಗಿರ್ದ ಸಮವಸರಣಮಂ ಕಂಡಂ. ಅದು ಭೂಭಾಗ ದಿಂದಮೈಸಾಸಿರದಂಡಂ ಮೇಗೆ ನೆಗೆದಲ್ಲಿ ಪನ್ನೆರಡುಯೋಜನಸಮವೃ ತ್ತಮುಂ ಏಕೇಂದ್ರನೀಲಶಿಲಾತಲಘಟಿತಮಸೃಣತಳಮುಂ ದಿಕ್ಚತುಷ್ಟಯ ವ್ಯವಸ್ಥಿತದೇವಮಾನವತಿರ್ಯಗ್ವಿನೇಯಜನಸುಖಾರೋಹಣಹೇತುಭೂತ

ಪದೌಷಧಿಶಕ್ತಿಯುಕ್ತಮಣಿಮಯವಿಂಶತಿಸಹಸ್ರಸೋಪಾನವಿರಾಜಿತಮುಂ ಭುವನತ್ರಯಲಕ್ಷ್ಮೀಲಪನವಿಳೋಕನಮಂಗಳದರ್ಪಣಾಯಮಾನಮುಮಪ್ಪ ಭೂಮಿಭಾಗಗ ಪರ್ಯಂತಪ್ರದೇಶಮನಳಂಕರಿಸಿ ಚಂಚತ್ಪಂಚರತ್ನಪಾಂಶುಮಯಮಾಗಿ,

ವಳಯಾಕೃತಿಯಿಂದಿದನೇಂ
ಬಳಸಿದುದೊ ಸುರೇಂದ್ರಚಾಪಮಂಡಳಮೆನೆ ಬ ।
ಳ್ವಳಬಳೆದ ಪಂಚರತ್ನದ
ಬೆಳಗಿಂದಂ ಬೆಳಪುದಲ್ಲಿ ಧೂಳೀಶಾಳಂ ॥ ೧೧

ವ॥ ಅದಱ ನಾಲ್ಕುದೆಸೆಯೊಳಂ ಮಕರತೋರಣಾಳಂಕೃತಜ್ಯೋತಿರಮರದೌವಾರಿಕಪರಿಪಾಳಿತಬಹಿರಂತರ್ಜಗತೀದ್ವಯನಿಹಿತಪ್ರತ್ಯೇಕಾಷ್ಟೋತ್ತರಶತಾಷ್ಟಮಂಗಳನವನಿಧಿಸಮನ್ವಿತಜಾತರೂಪಗೋಪುರಾಭ್ಯಂತರಮಹಾವೀಧೀಮಧ್ಯದೊಳ್ ದ್ವಾದಶಗೋಪುರವಿರಾಜಿತಸಾಲತ್ರಯಪರೀತಕುಂಡದ್ವಯಸಮೇತನಂದನಾದಿಷೋಡಶಸರೋವರಪರಿವೇಷ್ಟಿತದಿಕ್ಚತುಷ್ಟಯವ್ಯವಸ್ಥಿತತಪನೀಯಷೋಡಶಸೋಪಾನೋಪಶೋಭಿತಜಗತೀತಳಮಧ್ಯದೊಳ್ ಅನುಕ್ರಮದೊಳೆಂಟುನಾಲ್ಕುನಾಲ್ಕುಂಬಿಲ್ಲಿಡಿಯಮಾಗಿ ವೈಡೂರ್ಯಹೇಮಪಂಚರತ್ನಂಗಳಪ್ಪ ಮೂಱು ಪೀಠಂಗಳ ಮೇಗೆ ಚತುರಶ್ರಾಧೋಭಾಗಪರಿವೃತ್ತಾಗ್ರಭಾಗಾಧ್ಯಾಸಿತಹಿರಣ್ಮಯಜಿನಬಿಂಬಕದಂಬಂಗಳುಂ ಪರಿಲಂಬಿತಹೇಮಘಂಟಾಕಿಂಕಿಣೀಚಾಮರಧ್ವಜಂಗಳುಮಾಗೆ,

ಮಾನಮನೆಂತುಂ ಮಿಥ್ಯಾ
ಜ್ಞಾನಿಗಳೆರ್ದೆಯೊಳಗೆ ನೆಲಸಲೀಯದೆ ನಾಲ್ಕುಂ ।
ಮಾನಸ್ತಂಭಂಗಳ್ ರ
ತ್ನಾನದ್ಧಂಗಳ್ ನಿರಂತರಂ ಸೊಗಯಿಸುಗುಂ ॥ ೧೩

ಮಾನಸ್ತಂಭದಿನಂತಾ
ಮಾನಸ್ತಂಭಂಬರಂ ಸುಧಾಹರ್ಮ್ಯಮಯಂ ।
ತಾನೆಯ್ದೆ ಯ್ದವಱಿಡೆಯೊಳ್
ತಾನೊಂದೊಂದರ್ಹದಾಲಯಂ ಸೊಗಯಿಸುಗುಂ ॥ ೧೪

ವ॥ ಅಂತು ಪರ್ವ್ಯಾಚೈತ್ಯಾಲಯಮಾವನಿಯೆಂಬುದು. ಅದಱ ವಿಸ್ತಾರಮರ್ಧಯೋಜನಂ. ಅಲ್ಲಿಂಪತ್ತ ಪೂರ್ವೋಕ್ತವರ್ಣನೋಪೇತವಿವಿಧಮಣಿಖಚಿತರಜತಮಯಚತುರ್ಗೋಪುರದ್ವಾರವಿರಾಜಮಾನವೇದಿಕಾವೃತೋಭಯತಟಘಟಿತಮಣಿಮಯಸೋಪಾನಭಾಸಮಾನಮುಮರ್ಧಯೋಜನವಿಸ್ತಾರಮುಮಾಗಿ,

ಬಳಸಿ ಜಳವಿಹಗಜಳಚರ
ಜಳಜೋತ್ಪಳಕಳಿತಮಮಳಜಳ ಜಳಕೇಳೀ ।
ವಿಳಸನವಿದಗ್ಧಖೇಚರ
ನಿಳಿಂಪದಂಪತಿಯಿನಂಬುಖಾತಿಕೆ ರಯ್ಯಂ ॥ ೨೫

ವ॥ ಅಂತಲ್ಲಿಂದತ್ತ ವಿಚಿತ್ರರತ್ನರಚಿತಜ್ಯೋತಿಷ್ಕದೌವಾರಿಕಾಷ್ಟಮಂಗಳನವನಿಧಿಸನಾಥಜಗತೀಸಮನ್ವಿತತಾರಮಯಚತುರ್ಗೋಪುರವಿಭ್ರಾಜಿತಹಿರಣ್ಮಯವೇದಿಕಾವಳಯಿತಮುಂ ಅಶೋಕಲತಿಕಾಪ್ರತಾನನವಮಾಲಿಕಾವಲ್ಲರೀಸಮುಲ್ಲಾಸಮಾನಮಾಳತೀವ್ರತತಿವಿತಾನಚೂತವಲ್ಲೀವೇಲ್ಲನನಿಸರ್ಗಸೌಂದರಕ್ರೀಡಾಚಳಕೇಳೀಸಮಭಿರಾಮಮುಮಾಗಿ,

ಭ್ರಮದ್ಭ್ರಮರಸಂಕುಲಂ ಕುರುಳ ಬಂಬಲಂ ಪುಷ್ಪವಿ
ಭ್ರಮಂ ನಯನಲೀಲೆಯಂ ಕುಡಿಯ ನೀಳ್ಪು ತೋಳ್ದೊಂಗಲಂ ।
ದಮಂ ನೆಱೆಯೆ ಭಂಗಿ ಭಂಗಿಯನೆ ಪೋಲ್ವ ದೇವೀವಿಳಾ
ಸಮಂ ನಿಜವಿಳಾಸದಿಂ ನಗುವುವಲ್ಲಿ ವಲ್ಲೀವನಂ ॥ ೨೬

ಅದಱಗಲವೊಂದುಯೋಜನ
ಮದಱಿಂದತ್ತಣದು ನಿಷಧಗಿರಿನಿಭಮೆಸೆದಿ ।
ರ್ದುದು ಬಳಸಿ ಕನಕಶಾಳಂ
ಮೃದುಪವನವಿಲೋಲಕೇತುಮಾಲಾಲಲಿತಂ ॥ ೨೭

ವ॥ ಅದಱ ನಾಲ್ಕುಂದೆಸೆಯೊಳಂ ರಜತಮಯಗೋಪುರಚತುಷ್ಟಯಂ ನೆಲಸಿರ್ದುದು,

ಅದು ದೌವಾರಿಕಯಕ್ಷಾ
ಸ್ಪದಮಂತದಱೆರಡು ಕೆಲದೊಳೆರಡೆರಡು ಪೊದ ।

ಪ್ರೋದ್ದವಿದ ಸುರಸಂಗೀತಕ
ಸದನಂಗಳ್ ದೇವನರ್ತಕೀಶುಭದಂಗಳ್ ॥ ೨೮

ಅವಱ ಕೆಲಂಬಿಡಿದೊಂದೊಂ
ದವಿರಳನವಧೂಪಧೂಮಧೂಸರಿತನಭೋ ।
ವಿವರಂ ವಿವಿಧಮಣಿಪ್ರ್ರಕ
ರವಿರಾಜಿತಧೂಪಧೂಮಘಟಮೆಸೆದಿರ್ಕುಂ ॥ ೨೯

ನೆಗೆದಗರುಧೂಪಧೂಮದ
ಮಗಮಗಿಪಮರಿಯರ ಸುಯ್ಯ ಪರಿಮಳದ ಪೊದ ।
ಪ್ಕೆಗೆ ಸೋಲ್ತು ಸೂಱೆ ಸೂಱಿದೆ
ಮೊಗಸಿದುಮೆರಡೆಡೆಗಮುಲಸದಳಿಗಳ ಬಳಗಂ ॥ ೩೦

ವ॥ ಅಂತು ನಾಲ್ಕುದೆಸೆಯ ವೀಥಿಗಳೊಳಿರ್ದ ನಾಲ್ಕುನಾಲ್ಕುಂ ಗೋಪುರಂಗಳಿಂದಂ ಪದಿನಾಱು ನಾಟಕಶಾಲೆಗಳಿಂದಂ ಪದಿನಾಱು ಧೂಪಘಟಂಗಳಿಂದ ಮೊಪ್ಪಿ ತತ್ಕನಕಶಾಲಾಭ್ಯಂತರದೊಳ್ ತ್ರಿಸಾಲತ್ರಿಪೀಠೋಪಸ್ಥಿತಾರ್ಹತ್ಪ್ರತಿಮೋಪೇತಚೈತ್ಯದ್ರುಮೋಪೇತಾಭಿರಾಮಮಧ್ಯಪ್ರದೇಶಾಶೋಕಸಪ್ತಚ್ಛದಚಂಪಕಚೂತಪಾದಪೋಪಶೋಭಿತಮುಮೇಕಯೋಜನಪ್ರಮಾಣವಿಸ್ತಾರಮುಮಾಗಿ,

ಕುಚಭರಚಳಿತಕೃಶೋದರ
ಖಚರೀಸಂಚರಣರಣಿತನೂಪುರರಶನಾ ।
ಪ್ರಚುರರವವಹನರುಚಿರ
ಪ್ರಚುರಂ ಮೃದುಪವನಮುಪವನಂ ಸೊಗಯಿಸುಗುಂ ॥ ೩೧

ವ॥ ಅಲ್ಲಿಂದತ್ತ ವನವನಿತೆಯ ಕನಕಕಾಂಚೀಕಳಾಪಮನನುಕರಿಸಿ ರತ್ನಾಭರಣತೋರಣಘಂಟಾಜಾಳಮುಕ್ತಾಲಂಬನಪುಷ್ಪದಾಮಾಷ್ಟಮಂಗಳನವನಿಧಿಪ್ರಧಾನಂಗಳುಂ ಯಕ್ಷದೌವಾರಿಕಾಧಿಷ್ಠಿತಂಗಳಪ್ಪ ನಾಲ್ಕುಂ ರಜತಗೋಪುರಂಗಳನೊಳಕೊಂಡ ಕಳಧೌತವೇದಿಕಾಭ್ಯಂತರದೊಳ್ ಮಣಿಪೀಠದ ಮೇಗಣ ಸುವರ್ಣಸ್ತಂಭಾಗ್ರಂಗಳೊಳ್,

ಗಜವೃಷಭಾಂಕುಶಚಕ್ರಾಂ
ಬುಜಹಂಸಮಯೂರಮತ್ಸ್ಯ ಫಣಿವೈರಿಮತಂ ।
ಗಜರಿಪುಖಗಪ್ಲವಿಶಾಲ
ಧ್ವಜಂಗಳಿಂ ಧ್ವಜಮಹೀತಳಂ ಸೊಗಯಿಸುಗುಂ ॥ ೩೨

ವ॥ ಅಂತು ನಾಲ್ಕುಂದೆಸೆಯೊಳಮಂಬುಧಿವೀಚೀಚಯವಿಳಾಸಮನಿಳಿಸಿ ಮಿಳಿರ್ವ ನಾಲ್ಸಾಸಿರದ ಮೂನೂಱುಱ್ಪತ್ತು ಮಹಾಧ್ವಜಂಗಳಿಂದಂ ನಾಲ್ವತೊಂಭತ್ತುಲಕ್ಕೆಯುಮಱುವತ್ತೈಸಾಸಿರದ ಮೂನೂಱು[1] ಪರಿವಾರಧ್ವಜಂಗಳಿಂದಮೆಸೆವ ಪತಾಕಾವನಿತಳಮೊಂದುಯೋಜನಂ. ಅಲ್ಲಿಂದತ್ತ ಮಷ್ಟಮಂಗಳನವನಿಧಿಸಮೇತಂಗಳುಂ ನಾಟ್ಯಶಾಲಾದ್ವಂದ್ವಧೂಪಘಟಾದ್ವಂದ್ವಾಭಿರಾಮಂಗಳುಂ ನಾಗಕುಮಾರದ್ವಾರಪಾಳಕವಿರಾಜಿತಂಗಳುಮಪ್ಪ ಬೆಳ್ಳಿಯ ನಾಲ್ಕುಂಗೋಪುರಂಗಳಿಂದಮೊಪ್ಪಿ ವಳಯಾಕೃತಿಯಾಗಿ ಬಳಸಿದ ಮಾನುಷೋತ್ತರಪರ್ವತಮನಿಳಿಸುವ ಜಾತರೂಪಮಯವಿಶಾಲವಳಯದೊಳಗೆ ಪರಭಾಗಂಬಡೆದು ಚೈತ್ಯವೃಕ್ಷಪರಿಕಲಿತಚತುರ್ದಿಗ್ವಿಸ್ಥಿತಸಿದ್ಧಪ್ರತಿಮಾವಭಾಸಿಸಿದ್ಧಾರ್ಥವೃಕ್ಷಪರಿಭ್ರಾಜಿತಮಪ್ಪ ಮಧ್ಯಪ್ರದೇಶಮುಮೇಕಯೋಜನವಿಷ್ಕಂಭಮುಮಾಗಿ,

ದೇವೋತ್ತರಕುರುಗಳಿ ನಾ
ನಾವಿಧಕಲ್ಪಾಂಘ್ರಿಪಂಗಳಿಂದಂ ಪತಿಯಂ ।
ತೀವಿ ಬಳಸಿರ್ದುವೆನೆ ಕ
ಲ್ಪಾವನಿರುಹಭೂಮಿಭಾಗಮತಿರಮಣೀಯಂ ॥ ೩೩

ವ॥ ಅಲ್ಲಿಂದತ್ತ ಕಾರ್ತಸ್ವರವೇದಿಕಾವಿಭೂಷಣಂಗಳುಂ ನಾಗದೌವಾರಿಕಾಭಿರಾಮಂಗಳುಂ ಅಷ್ಟಮಂಗಳನವನಿಧಿವಿಳಸಿತಂಗಳುಮಪ್ಪ ರಜತಮಯಚತುರ್ಗೋಪುರಂಗಳೊಳಗೆ ನಾಲ್ಕುಂ ಮಹಾವೀಧಿಮಧ್ಯಂಗಳೊಳ್ ರತ್ನತೋರಣಶತಾಂತರಿತಂಗಳುಂ ಜಿನೇಂದ್ರರುಂದ್ರಸಿದ್ಧಾಭ್ಯರ್ಚಿತಂಗಳುಂ ಕದಳಿಕಾತಪತ್ರಚಾಮರಕನಕಘಂಟಾಕಿಂಕಿಣೀಮನೋಹರಂಗಳುಮಪ್ಪ ತೊಂಭತ್ತೊಂಭತ್ತು ರತ್ನತೋರಣಂಗಳುಮಮರ್ದಿರೆ ತದ್ವೇದಿಕಾವಳಯಾಂತರದೊಳರ್ಧಯೋಜನವಿಸ್ತಾರಮಾಗಿ,

[1] ಕ—ನಾಲ್ವತ್ತಾರುಲಕ್ಕೆಯುಮರುವತ್ತುಸಾಸಿರದರುನೂಱು.

ಭಾಸುರತೇಜೋಭಾಸಿ ಸು
ರಾಸುರಗಂಧರ್ವಕಿನ್ನರೋರಗಖಚರಾ ।
ಧ್ಯಾಸಿತವಿಚಿತ್ರರತ್ನ
ಪ್ರಾಸಾದಪರೀತಭೂತಳಂ ಕಮನೀಯಂ ॥ ೩೪

ವ॥ ಅಲ್ಲಿಂದತ್ತ ಗದಾದಿಹಸ್ತಕಲ್ಪಜದೌವಾರಿಕಾಧಿಷ್ಠಿತನವನಿಧಿಮಂಗಳಾಳಂಕೃತೇಂದ್ರನೀಲಗೋಪುರಚತುಷ್ಟಯವಿರಾಜಮಾನಗಗನಸ್ಫಟಿಕಪ್ರಾಕಾರವೇದಿಕಾಕುಡ್ಯದ್ವಯೋಪಶೋಭಿತಮುಂ ಜಗತ್ತ್ರಯಶ್ರೀನಿವಾಸಮುಮಾಕಾಶಸ್ಫಟಿಕಮಯಮುಮನೇಕಗವ್ಯೂತಿವಿಸ್ತಾರಮುಮಾಗಿ ಶ್ರೀಮಂಟಪವಿರ್ದುದು. ಅದಱೊಳಗೆ ಧೂಳಿಶಾಳದಿಂದಂ ಪ್ರಥಮಪೀಠಂಬರಂ ಮಹಾಮಾರ್ಗೋಭಯಭಾಗಂಗಳೊಳ್ ನೀಳ್ದ ನಿರ್ಮಲಸ್ಫಟಿಕಮಯಭಿತ್ತಿಗಳಂತುಂ ಬೆರಸು ಪದಿನಾಱುಂ ಭಿತ್ತಿಗಳೊಳ್ ನಾಲ್ಕುಂ ವೀಧಿಗಳುೞಿಯೆ ನೆಗಱ್ದ ಪನ್ನೆರಡುಂ ಕೋಷ್ಠಂಗಳೊಳ್,

ಮುನಿನಾಥರ್ ಕಲ್ಪಕಾಂತಾಜನತತಿ ಗಣಿನಿಶ್ರಾವಿಕಾಸಂಕುಳಂ ಭ
ಕ್ತಿನಮಜ್ಜ್ಯೋತಿಷ್ಕದೇವೀಪ್ರತತಿ ವನವಧೂವ್ರಾತಮೌತ್ಸುಕ್ಯವದ್ಭಾ ।
ವನಭಾಮಾರಾಜಿ ತದ್ಭಾವನಸುರರಖಿಳವ್ಯಂತರಜ್ಯೋತಿರಿಂದ್ರರ್
ವಿನಮತ್ಕಲ್ಪಾಮರೇಂದ್ರರ್ ಮನುಜಸಮಿತಿ ಸಿಂಹಾದಿತಿರ್ಯಕ್ಸಮೂಹಂ॥ ೩೫

ವ॥ ಎಂಬ ದ್ವಾದಶಗಣಂಗಳಿರ್ಕುಂ. ಅಲ್ಲಿಂದತ್ತ ಕ್ರಮದೊಳ್ ವೈಡೂರ್ಯಹೇಮಸರ್ವರತ್ನಮಯಂಗಳುಮಷ್ಟಚತುಷ್ಟಯಚತುರ್ದಂಡೋತ್ಸೇಧಂಗಳುಂ ಪಂಚಾಶದಧಿಕಸಪ್ತಶತಧನುರ್ವ್ಯಾಪ್ತಂಗಳುಮನೇಕಚಾಪೋತ್ಸೇಧಚಿತ್ರಧರ್ಮಚಕ್ರಧರಯಕ್ಷಾಧಿಷ್ಠಿತಂಗಳುಮಪ್ಪ ಮಹಾಧ್ವಜಂಗಳುಮಷ್ಟಮಂಗಳದ್ರವ್ಯಸಂಪನ್ನಂಗಳುಮಪ್ಪ ಪ್ರಥಮದ್ವಿತೀಯತೃತೀಯಪೀಠಂಗಳಿಂದಂ ಮೇಗೆ ಷಡ್ದಂಡಶತವಿಸ್ತಾರಾಯಾಮದೊಳಂ ನವದಂಡಶತೋತ್ಸೇಧದೊಳಂ ನೆಱೆದು,

ಸುರಭಿಸುರಕುಸುಮಕಾಳಾ
ಗರುಧೂಪೋದ್ದಾಮಗಂಧಮಂ ಜಿನತನುಬಂ ।
ಧುರಗಂಧಮೆ ಗೆಲ್ದಿರೆ ನಿ
ರ್ಭರಗಂಧಂ ಗಂಧಕುಟಿ ಕರಂ ಸೊಗಯಿಸುಗುಂ ॥ ೩೬

ಆಗಂಧಕುಟಿಯ ಮಧ್ಯಮ
ಭಾಗದೊಳೆಸೆದತ್ತು ಮೇರುಶಿಖರೋಪಮಮುಂ ।
ದ್ರಾಗಮಣಿಕಿರಣಕೃತಪರ
ಭಾಗಂ ಪ್ರಜ್ವಳಿತಸಕಳಗಗನಾಭೋಗಂ ॥ ೩೭

ಕೇಸರಿಗಣವಿಧೃತಂ ಸಿಂ
ಹಾಸನಮದನಲ್ಲಿ ನಾಲ್ವೆರಲ್ಮುಟ್ಟದೆ ದೇ ।
ವಾಸುರಮಕುಟಮಣಿದ್ಯುತಿ
ಭಾಸುರಚರಣಾರವಿಂದನಾದಿಜಿನೇಂದ್ರಂ ॥ ೩೮

ಇರೆ ಭಾಮಂಡಲದೀಪ್ತಿಯ
ಪರೆಪುಂ ಛತ್ರತ್ರಯಪ್ರಭಾಪರಿಕರಮುಂ ।
ಪರೆದು ದಿವಾಕರಹಿಮಕರ
ಕರನಿಕರಪ್ರಚುರರುಚಿಗಳಂ ಮಸುಳಿಸುಗುಂ ॥ ೩೯

ಚಾರುವಿಟಪಾವಳೀವೃತ
ಕೋರಕಿತಾಂಕುರಿತಪಲ್ಲವಿತಮುಕುಳಿತ ವಿ ।
ಸ್ತಾರಿತರಮ್ಯಾಶೋಕಮ
ಹೀರುಹಮುಮನಭವನಂಗರುಚಿ ಪುದಿದಿರ್ಕುಂ ॥ ೪೦

ಸುರಪುಷ್ಪವೃಷ್ಟಿ ಮೊಳಗುವ
ಸುರದುಂದುಭಿ ನಭದೊಳೆಸೆಯೆ ಯಕ್ಷಕುಮಾರರ್ ।
ನೆರೆದಿಕ್ಕೆ ಚತುಷ್ಷಷ್ಟಿಚ
ಮರರುಹದ ಪೊದಳ್ದ ಪೊಳೆಪು ದೆಸೆಗೆಸೆದಿರ್ಕುಂ ॥ ೪೧

ವ॥ ಮತ್ತಂ ಘಾತಿಗಳ ಕೇಡಿನೊಳ್ ಗವ್ಯೂತಿಶತಚತುಷ್ಟಯ ಸುಭಿಕ್ಷತೆ ಮೊದಲಾಗೆ,

ಮಿತನಖಕೇಶಶೋಭಿತತನುತ್ವಮಭುಕ್ತ್ಯುಪಸರ್ಗಭಾವ ಮ
ಸ್ಮಿತಚತುರಾನನತ್ವಮಖಿಳಾಗಮವಿತ್ತ್ವಮಪಕ್ಷ್ಮತಾ ಸಮಾ ।
ಯತಗಗನಪ್ರಚಾರಮುಪಜೀವವಧಂ ಪರಿಪೀತದೇಹಬಿಂ
ಬಳೆವೆರಸಿಂತು ಪತ್ತತಿಶಯಂಗಳವೇಂ ಜಿನನೊಳ್ ಪೊದಳ್ದುವೋ ॥ ೪೨

ವರಸಮಿತಿ ಚೈತ್ಯಕುಜಗೋ
ಪುರಮಾನಸ್ತಂಭಹರ್ಮ್ಯಸಿದ್ಧಾರ್ಥಕುಜೋ ।
ತ್ಕರಮಂಟಪಕೇಳೀಭೂ
ಧರತುಂಗಸ್ತೂಪಕೇತನಸ್ತಂಭಂಗಳ್ ॥ ೪೩

ಜಿನತನುವಿಂ ದ್ವಾದಶಗುಣ
ಮೆನಿಸಿಕುಂ ಪ್ರಾಕಾರವೇದಿಕಾನಿಕರಮದೀ ।
ಶನ ತನುಗೆ ಚತುರ್ಗುಣಮಂ
ತನಿತುಂ ತೋರಣಮುಮುದಱಿನಿನಿಸಭ್ಯುದಯಂ ॥ ೪೪

ವ॥ ಇಂತು ಧನದಂ ಸಮೆದ ಸಮವಸರಣಮಂ ಕ್ರಮಕ್ರಮದೊಳ್ ನೋಡುತ್ತುಂ ಬಂದು ಗಂಧಕುಟಿಯಂ ತ್ರಿಃಪ್ರದಕ್ಷಿಣಂಗೆಯ್ದು ಸರ್ವಾಂಗಪ್ರಣತನಾಗಿ,

ಇನಿತೆಂದಿನ್ನಿವೆಂದುವಿವಿಧದವೆಂದಾರ್ಬಣ್ಣಿಸಲ್ಬಲ್ಲರಂ
ಜಿನಗಂ ನಿರ್ಭರಭಕ್ತಿ ತಮ್ಮ ಮನದೊಳ್ ಕೈಗಣ್ಮೆ ಕೈಮ್ಮೆಯೊಳಂ ।
ದ್ರನುಮಿಂದ್ರಾಣಿಯುಮಿಂದ್ರವೃಂದಸಹಿತಂ ದೇವೇಂದ್ರಲೋಕಂಗಳ
ರ್ಚನೆಯಿಂದರ್ಚಿಸಿದರ್ ಜಿನೇಂದ್ರಪದಪೀಠೋಪಾಂತಭೂಪ್ರಾಂತಮಂ

ಬೆಳಗೀ ಕರ್ಪೂರಪಾಳೀಚಯದ ಸೊಡರ್ಗಳಂ ಸೀಡು ಮಂದಾರಮಾಲಾ
ವಳಿಯಂ ಕಟ್ಟೈಯ್ದೆ ದಿವ್ಯಾಂಬರರಚಿತವಿತಾನಂಗಳಂ ನೇಱು ಮುಕ್ತಾ ।
ಫಳಲಂಬೂಷಂಗಳಂ ಬಿತ್ತರಿಸನವರತಂ ರಂಗದೊಳ್ ಪಂಚರತ್ನಂ
ಗಳನೆಂದಿಂದ್ರರ್ಕಳಂತಃಪುರದ ಕಳಕಳಂ ರಯ್ಯಮಾಯ್ತುತ್ತಮಿತ್ತಂ ॥ ೪೫

ವ॥ ಅಂತರ್ಚಿಸಿ ಕರ್ಮಾರಿವಿಜಯಾನಂತಚತುಷ್ಟಯಪ್ರಾಪ್ತಿವಾಕ್ಪೂಜಾಸ್ಥಾಯಿಕಾವಿಹಾರಶರೀರಪ್ರಕೃತಿಗಳೆಂಬೆಂಟುಮತಿಶಯಂಗಳನತಿಶಯಭಕ್ತಿಯಿಂ ಸ್ತುತಿಯಿಸಿ, ನಿಜೋಚಿತಸ್ಥಾನದೊಳ್ಸ್ಕಳ್ಳದಾದಿತೀರ್ಥಕರರನೋಲಗಿಸುತ್ತಿರ್ಪನ್ನೆಗಂ, ಪುರಿಮತಾಳಪುರಾಧೀಶ್ವರಂ ಭರತಮಹೀಶನಿಂ ನೇರ್ಗಿಱಿಯಂ ವೃಷಭಸೇನಕುಮಾರಂ ನಾನಾವಿಧಾರ್ಚನಾಮಂಗಳದ್ರವ್ಯಹಸ್ತಂ ಸಮಸ್ತಪರಿಜನಪರಿವೃತಂ ಬಂದು ವೃಷಭೇಶ್ವರನ ಶ್ರೀಮುಖಮಂ ಕಾಣಲೊಡಂ ಆಸನ್ನಭವ್ಯತಾಪ್ರೇರಿತನಾಗಿ,

ಭಗವದರುಹನ ಸಮಕ್ಷದೊ
ಳಗಣ್ಯಪುಣ್ಯಪ್ರಭಾವದಿಂದಂ ಕೊಂಡಂ ।
ಭಗವದ್ರೂಪಮನಿಂದ್ರಾ
ದಿಗಳೆಲ್ಲಂ ಪೊಗೞೆ ಕಾಲಲಬ್ಧಿಯನಾಗಳ್ ॥ ೪೭

ವ॥ ಅಂತು ದೀಕ್ಷಾಗ್ರಹಣಾನಂತರಸಮಯಸಮುತ್ಪನ್ನಸಪ್ತರ್ಧಿಜ್ಞಾನಚತುಷ್ಟಯಂ ಪ್ರಥಮಗಣಧರನಾದಂ. ಅನ್ನೆಗಮಿತ್ತ ಭರತರಾಜನಯೋಧ್ಯಾಪುರದೊಳಾಸ್ಥಾನಮಂಟಪದೊಳಿರೆ ತತ್ಪುರೋಹಿತಾಯುಧಾಧ್ಯಕ್ಷಾಂತಃಪುರವೃದ್ಧಕಂಚುಕಿಗಳ್ ಬಂದು ಮಹೀತಳಾಶ್ಲಿಷ್ಟಜಾನುಲಲಾಟಪಟ್ಟರ್ ಪ್ರಣಾಮಪೂರ್ವಪುರಸ್ಸರಂ ಶಿರೋವೇಷ್ಟನಪ್ರಲಂಬಚೇಲಾಂಚಳಪಿಹಿತವದನರಾಗಿ,
ಪುರುದೇವಂಗಾದ ಕೈವಲ್ಯದ ಮಹಿಮೆಯುಮನಾಯುಧಾಗಾರದೊಳ್ ಭಾಸ್ವರಚಕ್ರೋದ್ಭಾಸಿಚಕ್ರೋತ್ಪನ್ನದ ವಿಜಯಮಹಾಶ್ಚರ್ಯಮುಮಂ ಶೋಭಿತಾಂತಃಪುರದೊಳ್ ಮಹಾದೇವಿಗಾದಾತ್ಮಜನನೋತ್ಸವಮುಮನಾ ಮೂವರುಂ ಬಿನ್ನಪಂಗೆಯ್ದಿರೆ ಜಾತಾನಂದನೀ ಮೂಱೊಸಗೆಗಳೊಳಮಿನ್ನಾವುದಂ ಮುನ್ನಮಾಪ್ಪೆಂ

ಧರ್ಮಾರ್ಥಕಾಮಮೆಂಬಿವು
ಧರ್ಮಾರ್ಥಜನಕ್ಕೆ ನೆಱೆದ ನೆರ್ಮಂತವಱೊಳ್ ।
ಧರ್ಮಂ ಪ್ರಧಾನಮರ್ಥಂ
ಧರ್ಮಾಂಘ್ರಿಪಫಳಮುದರ್ಕೆ ರಸಮದು ಕಾಮಂ ॥ ೪೮

ಅದಱಿಂದಮಿವಱೊಳರ್ಹ
ತ್ಪದಪದ್ಮಪ್ರಣತಿಮುಖ್ಯವೊಸಗೆಯುಮೆಮಗಿ ।
ನ್ನಿದಱಿಂದಮಿಲ್ಲಿ ಮೇಲಾ
ವುದೆಂದು ಬಗೆ ಬೆದಱಿ ಭಕ್ತಿನಿರತಂ ಭರತಂ ॥ ೪೯

ಪುರಜನಸಕಳಾಂತಃಪುರ
ಪರಿಜನಮುದಕರಿಕರೇಣುಪರಿವೃತನಂಭೋ ।
ಧರರವಗಭೀರಭೇರೀ
ಸ್ವರಪೂರಿತಸಕಳಗಗನದಿಗವನಿಮಧ್ಯಂ ॥ ೫೦

ವ॥ ಅಂತು ಬಂದು ಗಗನಮಂಡಳಮನಲಂಕರಿಸಿದಭವನಾಸ್ಥಾನಮಂಟ ಪಮಂ ಗೆಂಟಱೊಳೆ ಕಂಡು ಮದಗಜೇಂದ್ರಮನಿೞಿದು ರಾಜಚಿಹ್ನಂಗಳ ನಿರಿಸಿ ಧೂಳೀಶಾಳಮಾನಸ್ತಂಭಾಂಭಃಖಾತಿಕಾವಲ್ಲೀವನೋಪವನಪತಾ ಕಾವನಿಕಲ್ಪಭೂರುಹಭೂತಳಸ್ತೂಪಪ್ರಾಸಾದಮಾಳಾವಿಳಾಸಿತಮುಮನ ವೞಿಡೆಯೆಡೆಯ ಕನಕಪ್ರಾಕಾರವೇದಿಕಾನೇಕಗೋಪುರದ್ವಾರಪಾಳಕಾಷ್ಟ ಮಂಗಳನವನಿಧಿತೋರಣಧೂಪಘಟನಾಟ್ಯಶಾಲಾಚೈತ್ಯವೃಕ್ಷಸಿದ್ಧಾರ್ಥಮ ಹೀರುಹಮಹಾಶೋಭೆಯುಮಂ ಶ್ರೀಮಂಟಪಶ್ರೀಯುಮನತ್ಯಂತವಿಸ್ಮಯ ಸ್ಮೇರಮುಖನುಮತಿಚಿರನ್ಯಸ್ತಹಸ್ತಪಲ್ಲವನುಂ ಮುಹುರ್ಮುಹುರಾಂದೋ ಳಿತಮಸ್ತನುಂ ಉದಂಚದ್ರೋಮಾಂಚಕಂಚುಕಿತನುಮಾಗಿ ನೋಡು ತ್ತಮುತ್ತುಂಗಪ್ರಥಮದ್ವಿತೀಯತೃತೀಯಪೀಠಗಳನನೇಕಾರ್ಚನೆಗಳಿಂದ ರ್ಚಿಸುತ್ತುಂ ಮೂಱುಸೂೞ್ವಲಗೊಂಡು ಜಗತ್ತ್ರಯಾಧೀಶ್ವರ ಶ್ರೀಮು ಖಾಭಿಮುಖನಾಗಿ ನಿಂದು ಸ್ತುತಿಸಿ,

ತ್ರಿದಶೇಂದ್ರಮೌಳಿಮಣಿ ಶೋ
ಣದೀಪ್ತಿಗಳ್ ಪುದಿದು ಪೊಳೆವಲಕ್ತಕರಸದಿಂ ।
ಪುದಿದಂತೊಪ್ಪಿರ್ಪರ್ಹ
ತ್ಪದಂಗಳೆಮಗೀಗೆ ತಡೆಯದರ್ಹತ್ಪದಮಂ ॥ ೫೧

ಭುವನೇಶ್ವರ ನಿಜರೂಪ
ಸ್ತವವಸ್ತುಸ್ತವಗುಣಸ್ತವಂಗಳನವಱಿಂ ।
ತುವರಂ ಬಣ್ಣಿಸಲಮರೇಂ
ದ್ರಮಾಸುಕಿಪ್ರಭುಗರಾರ್ತರಿಲ್ಲೆನ್ನಳವೇ ॥ ೫೨

ಅಳತೆಗೆ ತೂಕಕ್ಕೆಣಿಕೆಗೆ
ಯೊಳಗಾದುವು ಸಕಳವಸ್ತುಗಳ್ ಭುವನಜನ ।
ಕ್ಕಳಯಲ್ ತೂಗಲ್ಕೆಣಿಸ
ಲ್ಕಳುಂಬಮೆನಿಸಿದುವು ನಿನ್ನ ಗುಣಗಣಮರ್ಹಾ ॥ ೫೩

ತನ್ನಿರ್ದೆಡೆಯದೆ ಮೇರುವಿ
ನುನ್ನತಿ ಜಳನಿಧಿಯ ಗುಣ್ಪು ನಭದ ವಿಭುತ್ವಂ ।

ನಿನ್ನ ಗುಣೋನ್ನತಿ ಸಕಳಜ
ಗನ್ನುತ ಭುವನಾಂತರಾಳಮಂ ಪರ್ಬಿರ್ಕುಂ ॥ ೫೪

ಆಕುಳನೆನಾಗಿ ಸುಟಿದೆನ
ನಾಕುಳಮಪ್ಪೆಡೆಯನಱಸಿ ಕಾಣೆಂ ಮೂಱುಂ ।
ಲೋಕದೊಳಂ ನಿನ್ನಿರ್ಕೆಯೆ
ಲೋಕಾಗ್ರಮೆ ಸಂತಮದನೆ ಮಾಡೆನಗರ್ಹಾ ॥ ೫೫

ಭವನಿಗಳದ ತೊಡರಂ ಕಳೆ
ಭವಜಳಧಿಯ ತಡಿಗೆ ಸಾರ್ಚು ಭವಗಹನದುಪ ।
ದ್ರವಮಂ ಕಿಡಿಸು ಭವಾಂತಕ
ಭವನಕ್ಕುಯ್ ತಡೆಯದೆನ್ನ ನೀಂ ಭವಮಥನಾ ॥ ೫೬

ಮರಣದ ಜನ್ಮದ ನಿಗಳಂ
ನಿರಾಕುಳಂ ಪತ್ತುವಿಡುವಿನಂ ಜಿನ ನಿನ್ನಂ ।
ಸ್ಮರಿಯಿಪುದನಣೋರಣ್ವಾಂ
ತರವ್ಯತಿಕ್ರಮಣಮಾತ್ರಮಂ ಮೆಱೆವಪೆನೇ ॥ ೫೭

ತ್ರಿಳಕಂ ವಶ್ಯಮೆ ಜಡಜನ
ವೊಳಗೆಱಿಯದು ಸಕಳಭವ್ಯತಿಳಕಂಗೆ ಜಗ ।
ತ್ತ್ರಿಳಕ ಭವತ್ಪದ ಚಂದನ
ತಿಳಕಂ ತ್ರೈಲೋಕ್ಯವಶ್ಯಮಕ್ಕುಮವಶ್ಯಂ ॥ ೫೮

ಅಮರೇಂದ್ರೋನ್ನತಿ ಖೇಚರೇಂದ್ರವಿಭವಂ ಭೋಗೀಂದ್ರಭೋಗಂ ಮಹೇಂ
ದ್ರಮಹೈಶ್ವರ್ಯಮಿವೆಲ್ಲಮಧ್ರುವಮಿವಂ ಬೇಳ್ಪಂತು ಬೇಳಲ್ಲೆನು ।
ತ್ತಮದೀಕ್ಷಾವಿಧಿಯುಂ ಸಮಾಧಿಮರಣಂ ಕರ್ಮಕ್ಷಯಂ ಬೋಧಿಲಾ
ಭಮುಮೋಘಂ ದೊರೆಕೊಳ್ವುದಕ್ಕೆಮಗೆ ಮುಕ್ತಿಶ್ರೀಮನೋವಲ್ಲಭಾ॥ ೫೯

ವ॥ ಎಂದನೇಕಸ್ತೋತ್ರಪವಿತ್ರೀಕೃತಮುಖಾರವಿಂದನಮರಸಮಾಜವಿಸ್ಮಯಸ್ಮೇರೇಕ್ಷಣೈಕಲಕ್ಷಲಕ್ಷಣನಾಗಿ ನಿಜೋಚಿತಪ್ರದೇಶಸ್ಥಾನದೊಳ್ ಕುಳ್ಳಿರ್ದು,

ನೃಸುರಾಸುರಪರಿಷತ್ಸ
ಸ್ಯಸಂಕುಳಂ ಜಿನವಚೋಮೃತಾಸಾರಮನಂ ।
ದಸದಳಮೆ ಬಯಸೆ ಭರತಂ
ಬೆಸಗೊಂಡಂ ಜಿನನನಖಿಳವಸ್ತುಸ್ಥಿತಿಯಂ ॥ ೬೦

ವ॥ ಅಂತು ಬೆಸಗೊಳೆ,

ಅಂದಪಗತತಾಲ್ವೋಷ್ಠ
ಸ್ಪಂದನಮಸ್ಪ್ರಷ್ಟಕರಣವರ್ಣಂ ಜಗದಾ ।
ನಂದಕರಂ ಜಳಧರರವ
ಸಾಂದರಮತಿವಿಶದಮಧುರಗಂಭೀರರವಂ ॥ ೬೧

ವ॥ ಅಂತು ನೆಗೞ್ದ ದಿವ್ಯಧ್ವನಿಯೊಳಾಪರಮಯೋಗೀಂದ್ರನಿಂತೆಂದು ಬೆಸಸಿದಂ. ನಿನ್ನ ಬೆಸಗೊಂಡ ತತ್ವಮುಂ ಹೇಯೋಪಾದೇಯರೂಪದಿಂ ದ್ವಿವಿಧಮಕ್ಕುಂ; ಅಲ್ಲಿ ಸಂಸಾರಕಾರಣಂಗಳ್ ಹೇಯಂಗಳ್; ಮುಕ್ತಿಕಾರಣಂಗಳುಪಾದೇಯಂಗಳ್. ಅವಱೊಳ್ ದ್ರವ್ಯಕ್ಷೇತ್ರಕಾಲಭವಭಾವಭೇದದಿಂ ಪಂಚವಿಧಂ ಸಂಸಾರಂ. ಅಲ್ಲಿ ಮಿಥ್ಯಾದರ್ಶನವಿರತಿಪ್ರಮಾದಕಷಾಯಯೋಗೋಪಾರ್ಜಿತಜ್ಞಾನಾವರಣಾದಿಕರ್ಮಂಗಳ್ ಸಂಸಾರಕಾರಣಂಗಳ್. ಅನಾದಿಬಂಧನಬಂಧದ್ರವ್ಯಭಾವಕರ್ಮವಿಗಮದಿನನಂತಜ್ಞಾನಾದಿನಿಜರೂಪಮಂ ಪಡೆವುದು ಮುಕ್ತಿ. ಸಮ್ಯಗ್ದರ್ಶನಚಾರಿತ್ರಂಗಳ ವಿಕಲ್ಪಂಗಳ್ ಮೋಕ್ಷಕಾರಣಂಗಳ್. ಅಲ್ಲಿ ತತ್ವಾರ್ಥಶ್ರದ್ಧಾನಂ ಸಮ್ಯಗ್ದರ್ಶನಂ; ಆತತ್ವಮುಂ ಜೀವಾಜೀವಾಸ್ರವಬಂಧಸಂವರನಿರ್ಜರಾಮೋಕ್ಷಭೇದದಿಂ ಸಪ್ತವಿಧಂ. ಪ್ರಮಾಣನಯನಿಕ್ಷೇಪಾನುಯೋಗಸದಾದಿಗಳಿಂ ನಿಶ್ಚಯಿಸಿದ ಸಪ್ತತತ್ವಂಗಳೊಳಗೆ ಚೇತನಾಲಕ್ಷಣಮಪ್ಪುದು ಜೀವತತ್ವಂ. ಆಜೀವತತ್ವಮುಂ ಸಂಸಾರಮುಕ್ತಿಭೇದದಿಂ ದ್ವಿವಿಧಮಕ್ಕುಂ. ಅಲ್ಲಿ ಮುಕ್ತಿಜೀವಮೇಕಪ್ರಕಾರಮೇ. ಸಂಸಾರಿಜೀವಂ ತ್ರಸಸ್ಥಾವರವಿಕಲ್ಪದಿಂದಿರ್ತೆಱನಕ್ಕುಂ. ಅಲ್ಲಿಯುಂ ತ್ರಸನಾಮಕರ್ಮೋದಯವಶಂಗಳ್ ತ್ರಸಕಾಯಂಗಳ್. ಸ್ಥಾವರನಾಮಕರ್ಮಪಾಕಾಧೀನಂಗಳ್ ಸ್ಥಾವರಂಗಳ್. ಸ್ಪರ್ಶನರಸನೇಂದ್ರಿಯೋಪೇತಂಗಳಪ್ಪ ಶಂಖಾದಿ ದ್ವೀಂದ್ರಿಯಗಳ್; ಸ್ಪರ್ಶನರಸನಘ್ರಾಣೇಂದ್ರಿಯಸಮನ್ವಿತಂಗಳಪ್ಪ ಪಿಪೀಲಿಕಾದಿ ತ್ರೀಂದ್ರಿಯಂಗಳ್; ಸ್ಪರ್ಶನರಸನಘ್ರಾಣಚಕ್ಷು

ರಿಂದ್ರಿಯಸಮನ್ವಿತಂಗಳಪ್ಪ ಮಧುಕರಾದಿ ಚತುರಿಂದ್ರಿಯಂಗಳ್; ಸ್ಪರ್ಶನರಸನಘ್ರಾಣಚಕ್ಷುಃಶ್ರೋತ್ರೇಂದ್ರಿಯಸಮನ್ವಿತಂಗಳಪ್ಪ ಮನುಷ್ಯಾದಿ ಪಂಚೇಂದ್ರಿಯಂಗಳೆಂದಿಂತು ತ್ರಸಜೀವಂಗಳ್ ಚತುರ್ವಿಧಮಕ್ಕುಂ. ಸ್ಪರ್ಶನೇಂದ್ರಿಯಮಾತ್ರಂಗಳ್ ಸ್ಥಾವರಂಗಳೆಂಬುವು. ಅವು ಪೃಥಿವ್ಯಪ್ತೇಜೋವಾಯುವನಸ್ಪತಿಭೇದದಿಂ ಪಂಚವಿಧಂ. ಚೇತನಾರಹಿತಮಜೀವತತ್ವಂ. ಅದು ಗತಿಸ್ಥಿತ್ಯವಗಾಹಶರೀರಾದಿವರ್ತನಾಹೇತುಧರ್ಮಾಧರ್ಮಾಕಾಶಪುದ್ಗಲಕಾಲಭೇದದಿಂ ಪಂಚವಿಧಂ. ಶುಭಾಶುಭರೂಪಮನೋವಾಕ್ಕಾಯಪರಿಸ್ಪಂದಹೇತುಕಮಾಗಿ ಬಪ್ಪ ಕರ್ಮದ ಬರವಾಸ್ರವಮೆಂಬುದು. ಕರ್ಮದ ಜೀವನ ಕ್ಷೀರನೀರನ್ಯಾಯಸಂಬಧಂ ಬಂಧಮೆಂಬುದು. ಶುಭಾಶುಭಪರಿಣಾಮಪ್ರಣಾಳಿಕೆಯಿಂ ಬರ್ಪ ಕರ್ಮಮಂ ಬರಲೀಯದೆ ಗುಪ್ತ್ಯಾದಿಗಳಿಂ ತಗುಳ್ವುದುಸಂವರೆಯೆಂಬುದು. ಯಥಾಕಾಲಾನುಭವನತಪೋನಿಮಿತ್ತಮಾಗಿ ಸವಿಪಾಕವಿಪಾಕರೂಪದಿಂ ಪೂರ್ವಾರ್ಜಿತಕರ್ಮನಿರ್ಜರಣಂ ನಿರ್ಜರೆಯೆಂಬುದು. ಮೂಲೋತ್ತರಾದಿಭೇದಭಿನ್ನಕರ್ಮಪ್ರಕೃತಿಗಳ ನಿರ್ಮೂಳೋಚ್ಛಿತ್ತಿ ಮೋಕ್ಷಮೆಂಬುದು. ಸಂಶಯವಿಪರ್ಯಯಸಾವದ್ಯಾವಸಾಯಸ್ವಭಾವರಹಿತಮಾಗಿ ಜೀವಾದಿಪದಾರ್ಥಯಾಥಾತ್ಮ್ಯಾವಗಮಂ ಸಮ್ಯಜ್ಞಾನಂ. ಅದು, ಮತಿಶ್ರುತಾವಧಿಮನಃಪರ್ಯಯಕೇವಲಜ್ಞಾನಭೇದದಿಂ ಪಂಚವಿಧಂ. ಸಂಸಾರಪರಿತ್ಯಾಗೋದ್ಯುಕ್ತಸಮ್ಯಜ್ಞಾನೋಪೇತಭವ್ಯಜೀವನ ಬಾಹ್ಯಾಭ್ಯಂತರಕ್ರಿಯಾನಿವೃತ್ತಿ ಸಮ್ಯಕ್ಚಾರಿತ್ರಮೆಂಬುದು. ಅದು ಸಾಮಾಯಿಕಚ್ಛೇದೋಪಸ್ಥಾಪನಾಪರಿಹಾರಶುದ್ಧಿಸೂಕ್ಷ್ಮಸಾಂಪರಾಯಯಥಾಖ್ಯಾತಚಾರಿತ್ರಭೇದದಿಂ ಪಂಚವಿಧಮೆಂದು ಹೇಯೋಪಾದೇಯತತ್ವಮಮನಱಿಪಿ ಮತ್ತಮಿವಕ್ಕಾಧಾರಭೂತಜಗತ್ತ್ರಯಾಂತಸ್ಥಿತ್ಯೇಕೋನಪಂಚಾಶನ್ನರಕಪ್ರಸ್ತರಭವನವ್ಯಂತರಾವಾಸಾಸಂಖ್ಯಾತದ್ವೀಪಾಬ್ಧಿತ್ರಿಷಷ್ಟಿಸ್ವರ್ಗಪಟಲಂಗಳುಮಂ ವಿಸ್ತರಿಸಿ ತನ್ನಿವಾಸಿಗಳ ದೇಹಾಯುಃಪ್ರಮಾಣಂಗಳುಮಂ ಸುಖದುಃಖಾದಿಗಳುಮಂ ತೀರ್ಥಕರ ಚಕ್ರಧರ ಬಲದೇವ ವಾಸುದೇವ ಪ್ರತಿವಾಸುದೇವ ಕಥಾಸಂಬಂಧಮುಮಂ ನಿರ್ಣಯಂ ಮಾಡಿದಾಗಳ್,

ಸುರದನುಜಮನುಜವರಕಿ
ನ್ನರತಿರ್ಯಗ್ಗಣಮನೆಯ್ದೆ ತಿಳಿಪಿದುದರ್ಹ।

ತ್ವರವೇಶ್ವರಗದಿತಮನೋ
ಹರಧರ್ಮಾಮೃತಮದಿದೋರ್ಡಮೃತಂ ಸವಿಯೇ ॥ ೬೩

ಬ್ರತಸಮ್ಯಕ್ತ್ವವಿಶುದ್ಧಿಯೊ
ೞತರ್ಕ್ಯಗುಣನೆಯ್ದೆ ನೆಱೆದ ಭರತೇಶ್ವರನೊ ।
ರ್ಜಿತಪುಣ್ಯನೊಪ್ಪಿದಂ ಶರ
ದೃತುವಿಕಸತ್ಕಮಳವನಸಲೀಲಶ್ರೀಯಿಂ ॥ ೬೪

ವ॥ ತದನಂತರಂ ಕುರುವಂಶಚೂಡಾಮಣಿಯೆನಿಸಿದ ಸೋಮಪ್ರಭನು ಮಾತನನುಜನಾದಿದಾನತೀರ್ಥಕರಪ್ರವರ್ತನಂ ಶ್ರೇಯಾಂಸನುಂ ಭರತೇಶ್ವರಾನುಜನನಂತವೀರ್ಯನುಂ ಭಟ್ಟಾರಕಪಾದಮೂಲದೊಳ್ ದೀಕ್ಷೆಯಂ ಕೈಕೊಂಡು ಗಣಧರರಾದರ್, ಬ್ರಾಹ್ಮಿಯುಂ ಸೌಂದರಿಯುಂ ಮತ್ತಂ ಪೆರ್ವೆಂಗೆಯರ್ ವಿವಾಹವಿಮುಖೆಯರಾಗಿ ಗುರುಪ್ರಸಾದದಿಂ ದೀಕ್ಷೆಯಂ ಕೈಕೊಂಡು ಗಣಿನೀಗಣಪ್ರಧಾನೆಯರಾದರ್ ; ಮತ್ತಂ ಗೃಹೀತೋಪವಾಸಕವ್ರತಂ ಶ್ರುತಕೀರ್ತಿಯೆಂಬಂ ಶ್ರಾವಕಾಗ್ರಣಿಯಾದಂ ; ಪ್ರಿಯವ್ರತೆಯೆಂಬೊಳ್ ಸುವ್ರತಗ್ರಹಣದಿಂ ಶ್ರಾವಿಕಾಪುರಸ್ಸರೆಯಾದಳ್ ; ಭರತರಾಜಪುತ್ರಂ ಮರೀಚಿಯೊರ್ಬನುೞಿಯೆ ಮುನ್ನಂ ಭಗ್ನರಾದ ಕಚ್ಛಮಹಾಕಚ್ಛಾದಿಗಳ್ ದಪ್ರಾಪಮಂಕೈಕೊಂಡರ್; ಅನಂತವೀರ್ಯನೀಕ್ಷೇತ್ರದೊಳನೇಕಕಾಲಂ ಪರಾಮೃಷ್ಟಮಾದ ಮುಕ್ತಿಮಾರ್ಗಮಂ ಮುನ್ನಮೆ ಸಮುಱುವೆನೆಂಬಂತೆ ಮೋಕ್ಷಲಕ್ಷ್ಮೀವಲ್ಲಭನಾದಂ ; ಭರತೇಶ್ವರನುಂ ಬಾಹುಬಲಿಕುಮಾರನುಂ ಜಿನೇಶ್ವರಪಾದಪದ್ಮಂಗಳ್ಗೆಱಗಿ ನಿಜರಾಜಧಾನಿಗಳ್ಗೆ ಪೋದರ್. ಇತ್ತ ಸಾಧಮೋರ್ಗೀಂದ್ರನುಂ ಧರ್ಮಚಕ್ರವರ್ತಿತ್ವಕ್ಕೆ ದಿಗ್ವಿಜಯಮೆನಿಸಿದ ಭಗವದ್ವಿಹಾರಮನವಧಿಯಿಂದಮುಱಿದು, ಅದನೆ ಪುನರುಕ್ತಂ ಮಾಳ್ಪಂತೆ,

ದೇವ ವಿನಯೋತ್ತರಂ ಸ
ಸ್ಯಾವಳಿ ಸುಗಿದುಗಿದು ಕೂಡೆ ಬಾಡಿರ್ದುದು ಪಾ ।
ಪಾವಗ್ರಹದಿಂದದನಱಿ
ಳಾವನಿತಳಕಂತು ತಳಿಯ ಧರ್ಮಾಮೃತಮಂ ॥ ೬೫

ಮಿಳಿರೆ ದಯಾಧ್ವಜಮುನ್ನತಿ
ಗೊಳಗಾಗಿರೆ ಧರ್ಮಚಕ್ರಮಾಯತಿಯಂ ಕೈ ।

ಕೊಳ್ ಭವ್ಯವರೂಥಿನಿ ನಿ
ರ್ಮಳ ನಿನ್ನ ವಿಹಾರಮಾರನೇನೆಱಗಿಸದೋ ॥ ೭೬

ವ॥ ಎಂದು ದೇವೇಂದ್ರನಾದಿಜಿನೇಂದ್ರಂಗೆ ಬಿನ್ನಪಂಗೆಯ್ದು ತ್ರಿಭುವನೈ ಕಭವ್ಯಕೋಟಿಯ ಪುಣ್ಯಪ್ರೇರಣೆಯಿಂದಂ ಸಮವಸರಣಮಂಡಳಂ ಗಗನ ಮಂಡಳದೊಳ್ ನಡೆಯೆ ಮರುತ್ಕುಮಾರಸಮ್ಮಾರ್ಜಿತಯೋಜನಾಂತರಾ ವ್ಯಭೂಮಿಭಾಗನುಂ, ಮೇಘಕುಮಾರಸಂಸಿಕ್ತಪ್ರಶಮಿತರಜಃಪ್ರಸಾ ಧರಣೀತಳನುಂ, ಪರಿಪಕ್ವಗಂಧಶಾಲಿವನವಿರಾಜಮಾನಸಮಸ್ತಸಸ್ಯಭಾಗ ಮನನುಂ, ಪ್ರಸನ್ನದಿಕ್ಸನ್ಯಾನನಸಮುದ್ದಿಷ್ಟಾತ್ಮಸನ್ನಿಧಾನನುಂ, ಧೌತಾ ಸಿನಿಭನಭೋಮಂಡಳನುಂ, ಜನಿತಜಗತ್ಸಾನಂದನುಂ, ಸಮಸ್ತಜನಮೈ ತ್ರೀಸಮೇತನುಂ, ಸಕಳರ್ತುಕುಸುಮಪಲ್ಲವಫಳಸಿಳಸಿತತರು ನಿರಂತ ರಿತರತ್ನಮಯದರ್ಪಣಪ್ರತಿಮಾವನೀತಳವಿಳಾಸನುಂ, ಅನುಕೂಲವಿಹಾ ರಭಿಮಂದಾನಿಲನುಂ, ಅನ್ಯೋನ್ಯಾಹ್ವಾನನಿರತದಿವಿಜನಿಕರಪೂರಿತಸಕಳ ಗಗನತಳನುಂ, ಆದರ್ಶಾದ್ಯಷ್ಟಮಂಗಳಧ್ವಜಮಾಳಾವಿತಾನವಿಚಿತ್ರಾಂಬರ ನುಂ, ಸಹಸ್ರದಿನಕರಕರಸ್ಪರ್ಧಿಸಹಸ್ರಾರಧರ್ಮಚಕ್ರಪುರಸ್ಸರನುಮಾಗಿ,

ಶಕ ಕಾಶ್ಮೀರಾಂಧ್ರ ಕರ್ನಾಟಕ ಮಗಧಯವನಾವಂತಿ ಪಾಂಚಾಳ ಸೌರಾ
ಷ್ಟ್ರ ಕಳಿಂಗಾಭೀರ ಸೌವೀರಕ ಕುರು ಕರಹಾಟಾಂಗ ಗಾಂಧಾರ ವಂಗಾ ।
ಶ್ಮಕ ಬಾಹ್ಲೀಕಾದಿ ದೇಶಂಗಳ ಸಕಳವಿನೇಯೋತ್ಕರಕ್ಕೆಲ್ಲಮುತ್ಸ್ರಾ ।
ತ್ಸುಕಮಂಮಾಡುತ್ತುಮಿರ್ದಂ ಸುಕವಿಜನಮನೋಮಾನಸೋತ್ತಂಸಹಂಸಂ

ವ॥ ಅಂತು ಧರ್ಮಕ್ಷೇತ್ರಂಗಳಂ ವಿಹಾರಿಸಿ ವಿನೇಯಜನಾಶಯಮಂ ಶೇಶಯಂಗಳನಲಂಕರ್ತುಂ ಬಂದು,

ಪರಮಾನಂತಚತುಷ್ಟಯೈಕನಿಳಯಂ ಶ್ರೀಮತ್ಸಭಾಮಂಡಳಾಂ
ತರಸಿಂಹಾಸನಸುಸ್ಥಿತಂ ಗಣವೃತಂ ಚಂಚಚ್ಚತುಷ್ಷಷ್ಟಿಚಾ ।
ಮರವಿಭ್ರಾಜಿತನಾನತತ್ರಿಭುವನಂ ಕುಂದೇಂದುದುಗ್ಧಾಬ್ಧಿಪಾಂ
ಡುರಕೈಲಾಸನಗೇಂದ್ರದೊಳ್ ನೆಲಸಿದಂ ಸಂಸಾರಸಾರೋದಯಂ ॥ ೭೭

ಆದಿಪುರಾಣದೊಳ್ ಕೇವಲಜ್ಞಾನೋತ್ಪತ್ತಿಪ್ರಕರಣಂ ದಶಮಾಶ್ವಾಸಂ ಸಂಪೂರ್ಣಂ.

---

## ಏಕಾದಶಾಶ್ವಾಸಂ.

ಶ್ರೀಪರಿಪೂರ್ಣಂ ಭರತಮ
ಹೀಪಾಳಂ ಚಕ್ರಪೂಜೆಗೆಯ್ದಂ ಸಕಳ ।
ಕ್ಷ್ಮಾಪಶಿರೋರತ್ನಾಂಶು
ವ್ಯಾಪಿತಚರಣಂ ಸರಸ್ವತೀಮಣಿಹಾರಂ ೧

ವ॥ ಆಗಳ್

ನೆಲನಾಕಾಶಂ ದಿಶಾಮಂಡಲಮೆನಿತನಿತುಂ ಚಕ್ರವರ್ತಿಪ್ರತಾಪಾ
ನಲತೀವ್ರಜ್ಯೋತಿಯಿಂ ಪರ್ವುವುದನಿದುಮೆ ಪೇೞ್ದಪ್ಪುದೆಂಬಂತಿರೌರ್ವ ।
ಜ್ವಲನಜ್ವಾಳಾಕಳಾಪೋದ್ಗಮಮನನುಗುಣಂಮಾಡುತುಂದ್ವಾದಶಾರ್ಕೋ
ಜ್ವಲತೇಜಶ್ಚಕ್ರರೂಪಂ ಬೆಳಗಿದುದು ದಿಶಾಚಕ್ರಮಂ ಚಕ್ರರತ್ನಂ ॥ ೨

ಅದು ದೇವಲೋಕದಂತೊ
ಪ್ಪಿದುದು ಸಹಸ್ರಾರಸಹಿತಮದು ಚಕ್ರಿಯ ತೇ ।
ಜದ ಜಸದವಾರ್ಯವೀರ್ಯದ
ಪೊದಳ್ದ ಭುಜವೀರ್ಯದೊಂದು ರೂಪನೆ ಪೋಲ್ಕುಂ ॥ ೩

ವ॥ ಆಸುದರ್ಶನಮೆಂಬ ಚಕ್ರರತ್ನಮುಂ ಪೂಜಿಸಿಂಬೞಿಯುಂ ದ್ವಾದಶ ಯೋಜನಾಯಾಮದೊಳಂ ನವಯೋಜನವಿಸ್ತಾರದೊಳಂ ಬೀಡಂ ಬಿಡುವ ಚಕ್ರವರ್ತಿಯ ಕಟಕಮಂ ತನ್ನ ನೆೞಲೊಳ್ ಕಾವ ಸೂರ್ಯಪ್ರಭಮೆಂಬ ವಿಚಿತ್ರಮಣಿಮಯೂಖಚಿತ್ರಿತಚ್ಛತ್ರರತ್ನಮುಮುತ್ಖಾತಮಾತ್ರವಿತ್ರಸ್ತ ಸಮಸ್ತಾರಿಮಂಡಲಮುಂ ವೀರಲಕ್ಷ್ಮೀಕರ್ಣಪೂರನೀಳೇಂದೀವರಶ್ಯಾಮ ಳಮುಮಪ್ಪ ಸೌನಂದಕಮೆಂಬ ಖಡ್ಗರತ್ನಮುಂ, ವಿಜಯಾರ್ಧಾಚಳಮ ಹಾಗುಹಾಗಹ್ವರಮುಖವಜ್ರಕವಾಟಪುಟವಿಘಟನಪಟುವಪ್ಪ ಚಂಡವೇಗ ಮೆಂಬ ದಂಡರತ್ನಮುಂ, ಅಗಾಧಜಲದುರ್ಗಸಮುತ್ತರಣನಿರತಸಕಳಶಿಬಿ ರಸಂಧಾರಣಶಕ್ತಿಯುಕ್ತಮಪ್ಪ ವಜ್ರಮಯಮೆಂಬ ಚರ್ಮರತ್ನಮುಂ, ಚಕ್ರವರ್ತಿಯ ಮಣಿಮಕುಟಶಿಖರಾಯಮಾನಮಪ್ಪ ಚೂಡಾಮಣಿಯೆಂ ಬ ಮಣಿರತ್ನಮುಂ, ಮಹಾಗುಹಾಗಹ್ವರಾಂತರಸೂಚಿನಿರ್ಭೇದ್ಯತಮಸ್ತ ಮೋ ನಿರಸನಪ್ರಭಾಪ್ರಭೂತಗುಣೋಪೇತಮಪ್ಪ ಚಿಂತಾಜನನಿಯೆಂಬ ಕಾಕಿಣಿರತ್ನಮುಂ, ನಾಮಗ್ರಹಣಮಾತ್ರದಿಂದಮೆ ಸಮಸ್ತವಸ್ತುವಿಸ್ತಾ

ರಾಂತರ್ನಿಹಿತವಸ್ತುಸಮರ್ಪಣಪರಾಯಣನಪ್ಪ ಕಾಮವೃಷ್ಟಿಯೆಂಬ ಗೃಹಪತಿರತ್ನಮುಂ, ಮ್ಲೇಚ್ಛರಾಜಸೇನಾಪತಿಚ್ಛೆದಮದಾವಲೇಪಪರಿಲೋಪವಿಳಾಸಿಯುಂ ಷಡ್ವಿಧಸೇನಾನಾಯಕಪರಾಯಣನುಮಪ್ಪ ಯೋಧ್ಯನೆಂಬ ಸೇನಾನಿರತ್ನಮುಂ, ಮಹಾನದಾಪಗಾಪದನಸಮಯಸೌಧಶ್ರೇಣಿಸಂಕ್ರಮಾದಿವಿಧಾನಪ್ರಾಗಲ್ಭ್ಯನುಂ ಅನುಸ್ಮರಣಮಾತ್ರನಿಷ್ಪಾದಿತಸಪ್ತತಳಾವಿಪ್ರಾಸಾದಪ್ರಕರನುಮಪ್ಪ ಭದ್ರಮುಖನೆಂಬ ತಕ್ಷಕರತ್ನಮುಂ, ಶಾಂತಿಕಪೌಷ್ಟಿಕಕ್ರಿಯಾಕುಶಲನುಂ ಧರ್ಮಕಾರ್ಯಾದಿಕುಶಲನುಮಪ್ಪ ಬುದ್ಧಿಸಾಗರನೆಂಬ ಪುರೋಹಿತರತ್ನಮುಂ, ಕಾಮರೂಪಿಯುಂ ಕಾಮಚಾರಿಯುಮಪ್ಪ ವಿಜಯಾರ್ಧಪರ್ವತವೆಂಬ ಯಾಗಹಸ್ತಿರತ್ನಮುಂ, ಪವನವೇಗನಿವರ್ತನನಿರೂಪಣಮುಂ ದ್ವಾದಶಯೋಜನೋಲ್ಲಂಘನರಹೋನಿವಾಸಭೂಮಿಯುಮಪ್ಪ ಪವನಂಜಯವೆಂಬ ತುರಗರತ್ನಮುಂ, ಮನೋಹರಮುಮಪ್ಪ ಸ್ತ್ರೀರತ್ನಮುಮೆಂದಿಂತು ಜೀವಾಜೀವರತ್ನಂ ಬೇಱಿವೇಱೆ ಸಹಸ್ರಯಕ್ಷರಕ್ಷಿತಂಗಳಪ್ಪವಂ,

ಪೂಜಿಸಿ ಪೊಱಮಟ್ಟಗ್ರತ
ನೂಜೋತ್ಪತ್ತ್ಯುತ್ಸವಕ್ಕೊಡರ್ಚುವ ಪದದೊಳ್ ।
ರಾಜಾಧಿರಾಜನಮರಮ
ಹೀಜದ ಲೀಲೆಯನೆ ಲೀಲೆಯಿಂ ಕೈಕೊಂಡಂ ॥ ೪

ಮಲೆಪರ್ಗಭಿಚಾರಕ್ರಿಯೆ
ವಲಮೆನಿಸಲ್ ಚಕ್ರಿ ಪೂಜ್ಯನುಂ ಸಕಳಮಹೀ ।
ವಳಯಕ್ಕೆ ಶಾಂತಿಕರ್ಮಂ
ಬಲಮೆನಿಸಲ್ ಜಾತಕರ್ಮಮೇಂ ನೆಱೆದತ್ತೋ ॥ ೫

ವ॥ ಅಂತು ಭರತೇಶ್ವರಚಕ್ರವರ್ತಿ ಚಕ್ರಪೂಜಾಗ್ರತನೂಜಜಾತಕರ್ಮೋತ್ಸವನಿರ್ವರ್ತನಾತಿಪ್ರೀಣಿತಾಂತಃಕರಣನಾಗಿರ್ಪನ್ನೆಗಮಾತನತೀವ್ರಪ್ರತಾಪಮೆ ತನ್ನೊಳ್ ಸಂಕ್ರಮಿಸಿದಂತೆ ದಿನಕರಕಿರಣಂಗಳೊಳ್ ಪಳಚ್ಚನಪ್ಪ ಪೊಳೆಪುಂ, ಆತನ ಬೆಳ್ಗೊಡೆಯ ಪಜ್ಜಳಿಸುವ ಪಜ್ಜಳಿಕೆಯೆ ತನ್ನೊಳಪೊಕ್ಕಂತೆ ಚಂದ್ರಮಂಡಲಕುಚ್ಚಮಾಗೆ ಪಳಚ್ಚನಪ್ಪ ಬೆಳ್ದಿಂಗ

ಳುಂ, ಆತನ ದಿಗ್ವಿಜಯದೊಸಗೆಯೊಳ್ ದಿಗಂಗನೆಯರೆತ್ತಿದ ಬೆಳ್ಗೊಡೆಗಳ ಶಂಗಳಂತೆ ತಳದಳಸಿ ಪೊಳೆವ ಬಿಳಿಯ ಮುಗುಳ್ಗಳುಂ, ಆತನ ಬರವಿನುತ್ಸವಕ್ಕೆ ಸಂತಸಂಬಟ್ಟು ಮಹೀಲಲನೆಯ ನಗೆಮೊಗದಂತೆ ತಿಳಿದ ಕೊಳಂಗಳುಂ, ಆತನಂತಃಪುರಕಾಂತೆಯರ ನಗೆಮೊಗದ ನಗೆಗಣ್ಗಳ ಬೆಡಂಗನೆ ಕಿಱುನಗೆನಗುವಂತೆ ಮೆಲ್ಲಮೆಲ್ಲನುಳ್ಳಲರ್ವ ಮಹೋತ್ಪಳನೀಳೋತ್ಪಳಂಗಳುಂ, ಆತಂಗೆ ತುಱುಂಗಲುಂ ಬಂಬಲುಮಾಗೆ ಬೀಸುವ ಚಾಮರದ ಪೊಳೆಪುಗಳೇ ದೆಸೆದೆಸೆಗೆಸೆವಂತೆ ಪಸರಿಸಿ ನೆಗೆವದ ರಾಜಹಂಸಗಳುಂ, ಆತನ ಪಡೆಗೆ ನಡೆಯಲೆಡೆಮಾಡಿದಂತೆ ಬಳ್ವಳಾದ ದೆಸೆಗಳುಂ, ಆತನ ವಿಜಯಾರ್ಥ ಸೈನ್ಯಕ್ಕೆ ತಡೆಯುದೆ ಪಾಯಲ್ಕೆ ವೇೞ್ಕುಮೆಂಬಂತೆ ನೆಲೆಮಾಡಿದ ಮಹಾನದೀನದಗಂಳುಂ, ಆತನ ವಿಜಯಕಟಕಮದಸಿಂಧುರಬಂಧುರಮದಗಂಧಮನೆತ ನಗೆ ಪಡೆವಂತೆ ದೆಸೆದೆಸೆಗೆ ಪೊಣ್ಮುವ ಸಪ್ತಚ್ಛದವನಂಗಳುಂ ತನ್ನ ಬರವಂ ಪ್ರಕಟಂಮಾಡೆ,

ಪೊಸಜಾದಿಯ ಬೆಳೆದೊಱಗಿದ
ಪೊಸಗೆಱಮೆಯ ಪೊಸತರಲ್ದ ತಾವರೆಗಳ ಕಂ ॥
ಪಸದಳಮೆಸೆದಿರೆ ದೆಸೆದೆಸೆ
ಗೊಸಗೆಯೆ ಬರ್ಪಂತೆ ಕಣ್ಗೆ ವಂದುದು ಶರದಂ ॥ ೬

ಖರಕಿರಣಂಗಳ ಕಾಯ್ಪಿನ
ಕರತನದಿಂ ಚಂದ್ರಕಿರಣದುಜ್ವಳಿಕೆಯಿನಾ ।
ಭರತನ ಮುಳಿಸೊಸಗೆಯನನು
ಕರಿಸಿದುದೇಂ ಚಕ್ರವರ್ತಿವೃತ್ತಮೊ ಶರದಂ ॥ ೭

ಸುರಿದಪುದು ಮುಗಿಲ ಮುತ್ತಿನ
ಸರಿ ಗಗನದಿನೆನಿಸಿ ಪೊಳೆವುವೆಳವಿಸಿಲೊಳ್ ಬೆ ।
ಳ್ಸರಿ ತೋರವನಿಯ ಪುದುವಿನೊ
ಳರಲ್ದ ತಿಳಿಗೊಳನೆ ನಭದೊಳೞಿದಂತಿರ್ಕುಂ ॥ ೮

ಕಾಂತಿಯೊಳೆ ಪುದಿದು ಬೆಳಪ ಬೆ
ಳಂತಿಗೆ ಬೆಳ್ದಿಂಗಳಲರ್ದ ಪೊಸಜಾದಿ ದಿಶಾ ।

ಕಾಂತೆಯ ಬೆಳ್ಪಸದನದದ
ಗುಂತಿಯನೇಂ ತನಗೆ ನಾಡೆಯುಂ ಮಾಡಿದುದೋ ॥ ೯

ವ॥ ಅಂತು ತನ್ನ ದಿಗ್ವಿಜಯೋದ್ಯೋಗಕ್ಕುಪಯೋಗಿಯಾಗಿ ಬಂದ ಶಾರದಶ್ರೀಯುಮಿದಿರ್ಗೊಂಡನೇಕಗಣಕಗಣಗಣಿತಶುಭದಿನನಕ್ಷತ್ರಮುಹೂರ್ತದೊಳ್ ದಿಗ್ವಿಜಯಪ್ರಯಾಣಭೇರಿಯುಂ ಪೊಯ್ಸಿದಾಗಳ್,

ಸಮುದಾರಾತಿಮರಾಳನೀರದರವಂ ಸಂಕ್ರುದ್ಧವೈವಸ್ವತೋ
ಪಮವಿದ್ವಿಷ್ಟಫಣೀಂದ್ರಚಂದ್ರಕರವಂ ದೋರ್ದ್ದಂಡಕಂಡೂಯಮು ।
ರ್ದಮವೈರಿದ್ವಿರದೇಂದ್ರಕೇಸರಿರವಂ ತಾನೆಂಬಿನಂ ವ್ಯೋಮಭಾ
ಗಮನೆಯ್ದಿರ್ದುದು ಚಕ್ರವರ್ತಿವಿಜಯಪ್ರಸ್ಥಾನಭೇರೀರವಂ ೧೦

ವ॥ ಆವಿಜಯಪ್ರಸ್ಥಾನಭೇರೀನಿನಾದಾನಂತರಮೆ ಶಾರದನೀರದನಿಕಾಶವಿಶಾಲಧವಳದುಕೂಲಾಂಬರವಿರಾಜಮಾನನುಂ, ಚಂದ್ರಾತಪಪಾಂಡುರಹರಿಚಂದನಾನುಲಿಪ್ತಗಾತ್ರನುಂ, ಅಭಿನವವಿಳಸಿತಮಾಳತೀಮಾಳಾಪರಿಷ್ಕೃತಮಕುಟನುಂ, ಅಪೂರ್ವದೂರ್ವಾಪ್ರವಾಳಾಲಂಕೃತಕರ್ಣಪೂರನುಂ, ಗೋರೋಚನಾರಚಿತವಿಚಿತ್ರತಿಳಕವಿಳಸಿತಲಲಾಟನುಂ, ತಾರಾತರಳಮುಕ್ತಾಫಳಕಲಿತಜಾನುಲಂಬಿತಬ್ರಹ್ಮಸೂತ್ರನುಂ, ಇಂದ್ರಚಾಪವಿಳಾಸೋಪಹಾಸಿರುಂದ್ರೇಂದ್ರಚ್ಛಂದಹಾರಾಭಿರಾಮವಿಶಾಳವಕ್ಷಸ್ಥಳನುಂ, ಪುರೋಹಿತೋಚ್ಚಾರ್ಯಮಾಣಪುಣ್ಯಾಶೀರ್ವಚನನಿರ್ಘೋಷದತ್ತಕರ್ಣನುಮಾಗಿರ್ದ್ದಾಗಳ್,

ದಕ್ಷಿಣಭುಜ ಮಚಿರಪ್ರತಿ
ಪಕ್ಷಮಹೀಪಾಲವಿಜಯಲಕ್ಷ್ಮೀಲಲನಾ ।
ವಕ್ಷೋಜಸ್ಪರ್ಶನಮನ
ನಕ್ಷರಮಱಿಪಿದುದು ಪತಿಗಮಂದಸ್ಪಂದಂ ೧೧

ಅರಿಮಕುಟರತ್ನಮುಂ ನಿಜ
ಚರಣಕ್ಕರ್ಘ್ಯಪ್ರದೀಪಮಾಗಿಪ್ಪುದನಾ ।
ಭರತೇಶ್ವರಂಗೆ ಕಾಣ್ಬಂ
ತಿರೆ ಸೂಚಿಸಿದತ್ತು ದಕ್ಷಿಣಾಕ್ಷಿಸ್ಪಂದಂ ೧೨

ವ॥ ಆಗಳ್ ನಿಜಸ್ಥಪತಿರತ್ನಪ್ರಯತ್ನನಿರ್ಮಿತಮುಂ, ಕುಮುದದಳಧವಳಮನೋಜವಕಾಮಚಾರಿಸ್ಥೂಲಪೃಷ್ಠಯೋಜಿತಮುಂ, ಅನುಕೂಲಶೂರರಥಕಲ್ಪಪರಿಣತರರಥಚೋದಕಪರಿಭ್ರಾಜಿತಮುಂ ಆಗಿ,

ಒದವಿದ ಚಕ್ರರತ್ನದೊಳದೊಂದೆಣೆಯಾಯ್ತೆನಿಸಿರ್ದ ಚಕ್ರಯು
ಗ್ಮದಿನಮರ್ದಚ್ಚು ವಜ್ರಮಯಮಾಗೆ ಕನನ್ಮಣಿಮೌಕ್ತಿಕಪ್ರಭಾ ।
ಸ್ಪದಮಮರೇಂದ್ರರುಂದ್ರಗಿರಿಕುಂಜವಿಚಂಚಳಕೇತನಾಳಿ ಕ
ಟ್ಟಿದಿರೊಳೆ ಬಂದು ನಿಂದುದಜಿತಂಜಯಮಾತ್ತಮನೋರಥಂ ರಥಂ ೧೩

ವ॥ ಆಗಳ್ ಮೌಹೂರ್ತಿಕರ್ ಬಂದು ದೇವಾ ವಿಜಯಪ್ರಸ್ಥಾನಲಗ್ನಂ ಸಾರೆವಂದುದೆಂದು ಬಿನ್ನಪಂಗೈದಾಗಳ್,

ರೋದೋಂತರ್ಭಾಗದೊಳ್ ದುಂದುಭಿಗಳೆಸೆಯೆ ಮಾಂಗಲ್ಯಗೀತಪ್ರಣಾದಂ
ವಾದಿತ್ರಧ್ವಾನದೊಳ್ ಸಂದಣಿಸೆ ಗುರುಜನೋದ್ಗೀತನಾನಾವಿಧಾಶೀ ।
ರ್ವಾದಂ ಶೇಷಾಕ್ಷತಂಗಳ್ ವೆರಸೆಯೆ ಮಹಾವಂದಿವೃಂದಾಂತಮಾಲಾ
ನಾದಂ ಗಂಭೀರನಾದಂ ನೆಗೞ್ದಿರೆ ತಳರ್ದಂ ರಾಗದಿಂ ಸಾರ್ವಭೌಮಂ ॥

ವ॥ ಅಂತು ತಳರ್ದು ಕೃತಪ್ರಸ್ಥಾನವಿವಿಧಮಂಗಳವಿಧಾನೋಚ್ಛ್ರಿತಚತ್ರಾತಪತ್ರಧೋಧೂಯಮಾನಧವಳಚಾಮರಸಹಸ್ರಸಂಛಾದಿತಸಹಸ್ರಕರಪ್ರಭಾಪ್ರಸರರಥಮನೇಱಿ ಮಹಾಮಕುಟಬದ್ಧಪರಿವೃತಂ ರಾಜಭವನಮಂ ಪೊಱಮಟ್ಟು ಚಂಚತ್ಪಂಚರತ್ನತೋರಣಾಲಂಕೃತರಾಜಮಾರ್ಗದಿಂ ಬರ್ಪಾಗಳ್,

ದಿಶಾಯುವತಿಕೇಳಿಕೀರ್ಣಪಟವಾಸಚೂರ್ಣಂ ಜಗ
ತ್ಕುಶೇಶಯನಿವಾಸಿನೀಪ್ರಮದಮುಷ್ಟಿ ಪಿಷ್ಟಾತಕಂ ।
ವಿಶಾಲತರತುಂಗಸೌಧತಳಸಂಗಿಪೌರಾಂಗನಾ
ವಶೀಕರಣಚೂರ್ಣಮಾದುದು ಬಳೌಘಧೂಳೀಚಯಂ ॥ ೧೪

ವ॥ ಅಂತು ಬರ್ಪಾಗಳಂಗಜವಿಜಯಕದಳಿಕಾವಿಳಾಸಮಂ ತಾಳ್ದಿ,

ನೊಸಲಂ ತೊಂಗಲ್ಗುರುಳ್ ಮೋಲುದನೊಗೆವ ಕುಚಂ ಬೆನ್ನನಾನೀಳಕೇಶ
ಪ್ರಸರಂ ಚೆಲ್ವಿಂ ಪೊದಪ್ಪೊಳ್ಳಿಱಿಯನೆಡದ ತೋಳ್ ಸೋಗೆಯಂ ನೂಲ
ತೊಂಗಲ್,

ಲ್ದೆಸೆಯಂ ಕರ್ಣಕನ್ನೆಯುಂ ಭ್ರೂಲತಿಕೆಗಳಂದಮುಂ ಸಂಚಳತ್ತಾರಪಾರಂ
ಪಸರಂಬೆತ್ತ ತ್ತಮೋರಂತಲೆಯ ಭಾರತಸಂ ನೋಡಲೈತಂದಳೊರ್ವಳ್ ॥

ವ॥ ಮತ್ತೊರ್ವಳುತ್ತುಂಗಸೌಧೋತ್ಸಂಗದೊಳ್ ನಿಂದು ಮನುವಂಶಧ್ವಜನಂ ಮಕರಧ್ವಜನೆಂದು ಬಗೆದು,

ಇದು ನಿನ್ನ ಚಾಪವಿಕ್ಷೇಪಮಿದು ನಿನ್ನೀಕ್ಷೇಪಮಂ ಕೈಗೆ ಮಾ
ಡಿದ ಪುಷ್ಪಾಸ್ತ್ರಮಿದಲ್ತೆ ನಿನ್ನ ವಿಜಯಪ್ರಾರಂಭದೊಳ್ ತೋರ್ಕೆಗೆ ।
ತ್ತಿದ ಜೈತ್ರಧ್ವಜಮೆಂದು ತೋರ್ಪ ತೆಱದಿಂ ಭ್ರೂಲಾಸ್ಯಮಂ ನೀಳ್ದಪಾಂ
ಗದ ಬೆಳ್ದಿಂಗಳನೆತ್ತಿಪುಷ್ಪ ಕಬರೀವಿಸ್ತಾರಮಂ ತೋಱಿದಳ್      ೧೭

ವ॥ ಮತ್ತಮೊರ್ವಳುತ್ತುಂಗಪ್ರಾಸಾದೋಪರಿಮತ್ತಳದೊಳ್ ನಿಂದು,

ವಿದದೋಜ್ಜೃಂಭಿತಯವ್ವನಾಸವಮದಪ್ರೋಲ್ಲಾಸದಿಂ ಚಿತ್ತಭೂ
ವಶೆಯೊರ್ಬಳ್ ಮನುವಂಶಚಂದ್ರಮುಖಚಂದ್ರಾಲೋಕದಿಂ ಚಂದ್ರಕಾಂ
ತಶಿಲಾಪುತ್ರಿಕೆಯಂತೊಸರ್ತು ಕೊಳಗೊಂಡಾನೀರೊಳರ್ದಿರ್ದು ಚಿ
ತ್ತಶಯಾಕ್ರೀಡಸರೋವತೀರ್ಣರತಿಯೊಂದಾಕಾರಮಂ ತಾಳ್ದಿದಳ್ ॥   ೧೮

ವ॥ ಮತ್ತಮೊಂದೆಡೆಯೊಳೊರ್ವಳ್,

ವಿವಿಧಾತೋದ್ಯಲಯಾನುಬಂಧಿವಿಳಸಲ್ಲಾಸ್ಯಂ ತಗುಳ್ದಲ್ಲಿ ಸಾ
ಟ್ಯವಿದರ್ ತಾಂಗೆಯುಮೋಱಿ ನೃತ್ಯಗೃಹಮಂ ಚಕ್ರೇಶ್ವರೋದ್ದಾಮರೂ ।
ಪವಿಳೋಕಾಮೃತತೃಪ್ತಲೋಚನಮನಸ್ಸಂಕಲ್ಪಸಂಭೋಗಸಂ
ಭವಘರ್ಮಾಂಬುಗಳಿಂದಮಿರ್ಮಡಿಸಿದಳ್ ನೃತ್ಯಶ್ರಮಸ್ವೇದಮಂ ॥   ೧೯

ವ॥ ಮತ್ತೊರ್ವಳ್,

ಸಮಾಕುಳಗತಿಸ್ಖಲಚ್ಚ್ಛಳನಸಂಚಳತ್ತಾರಹಾ
ರಮಂ ತಳದೊಳೊತ್ತುತ್ತೊಂದು ನೆವದಿಂದನಂಗಾಸ್ತ್ರವಿ ।
ದ್ಧಮಂ ಪಡೆದು ಗೂಡುವಾಯ್ವೆರ್ದೆಯನೊತ್ತಿ ನಿಷ್ಕಂಪಪ
ಕ್ಷ್ಮಮಮಾಂತು ತರಳಾಕ್ಷಿ ವಿಸ್ಮಯದೆ ಚಕ್ರಿಯಂ ನೋಡಿದಳ್      ೨೦

ವ॥ ಮತ್ತಮೊರ್ವಳ್ ಅಭಿನವಯವ್ವನಾಸವಮದವಿಳಾಸನಿರಂಕುಶೆ ಕುಂಕುಮಪಂಕಾಂಕಿತೋಚ್ಚಕುಚಯುಗಳಮಂ ಸಿಂದೂರಿತಮಸ್ತಕಪಿಂಡಮಂ

ಡೆಲಮುವಿರಳಚಳತ್ಕಾಂಚೀಕಲಾಪಮಣಿಕಿಂಕಿಣೀಗಣಝುಂಕಾರಮೆ ಮದಡಿಂಡಿಮರವಾಡಂಬರಮಾಳ್ಕೊಳೆ ತುಳಾಕೋಟಿತಳಕ್ವಣಿತಮೆ ನಿಗ್ಯಾಂದುಕಾರವಮಾಗೆ,

ಸಮದಂ ಯಾನಮೆ ಮಂದಮಂದಗಮನಂ ಕಸ್ತೂರಿಕಾಪಂಕಪ
ಟ್ಟಮೆ ಧಾರಾಮುದಪಟ್ಟಮಾಯ್ತು ಸಿಪಿನಂ ಸೇನಾಮನೋಮರ್ದನೋ ।
ದ್ಯಮದಿಂದಂಗಜಚಕ್ರವರ್ತಿಯ ಗಜಂ ವಾರಾಂಗನಾರೂಪದಿಂ
ದಮೆ ಬರ್ಪಂತಿರೆ ಬಂದು ಚಕ್ರಧರರೂಪಾಶ್ಚರ್ಯಮಂ ನೋಡಿದಳ್ ೨೧

ವ॥ ಮತ್ತೊರ್ಬಳ್ ನಿಜಪ್ರಸಾಧನಗ್ರಹಣಪ್ರಸ್ತಾವದೊಳ್,

ಪಿರಿದೊಂದುತ್ಸುಕಭಾವದಿಂ ಸರಿಗೆಯಂ ಕಾಲೊಳ್ ಕಟೀಸೂತ್ರಮಂ
ಕೊರಲೊಳ್ ಚಂಪಕಮಾಲೆಯಂ ಕನಕಕಾಂಚೀಸ್ಥಾನದೊಳ್ ರತ್ನನೂ ।
ಪುರಮಂ ಕೈಗಳೊಳಾಗಳಾಗಳ್ ತೊಡರ್ಚುತ್ತುಂ ಜನಂ ಕೂಡೆ ಕ
ಪ್ಪುರಗೊಂಡೆಯ್ತರೆ ನೋಡಲೆಂದು ಪರಿದಳ್ ಚಕ್ರೇಶಸೌಂದರ್ಯಮಂ ॥ ೨೨

ವ॥ ಇಂತು ಭರತೇಶ್ವರಚಕ್ರವರ್ತಿಯ ರೂಪಾತಿಶಯಮಂ ನೋಡುವಲ್ಲಿ,

ಗಣಿಕೆಯರ ವಿಳಾಸಾಗಾರದೊಳ್ ಜಾಳಮಾರ್ಗ
ಪ್ರಣಯಿನಿನಿಟುರಪಾಂಗಶ್ರೇಣಿಯೊಳ್ ಮೂಱುಬಣ್ಣಂ ।
ಪೆಣೆದೊಪವೆ ಗವಾಕ್ಷಸ್ಥೇಂದುಕಾಂತೇಂದ್ರನೀಲಾ
ರುಣಮಣಿಕಿರಣಂಗಳ್ ಪೊಣ್ಮುವಂತಾದುವಾಗಳ್ ॥ ೨೩

ವ॥ ಅಂತು ಮನಸಿಜನಾವೇಶಮಂತ್ರದಿಂ ಸ್ತೋಭಂಗೊಂಡ ಪುರಪುರಂಧ್ರೀಕ್ಷೋಭಮಾಗೆ ಮನುವಂಶಚಂದ್ರೋದಯಕ್ಷುಭಿತನಗರಕ್ಷೀರಾಂಭೋರಾಶಿಯ ಕಲ್ಲೋಲಮಾಲೆಗಳಂತೆ ದೆಸೆದೆಸೆಗೆ ಪೊಳೆವ ಪುರಾಂಗನಾಜನದಪಾಂಗಮಾಳೆಗಳುಂ ತಡಿಯ ಶೀಕರನಿಕರಂಗಳಂತೆ ಸೊಗಯಿಸುವ ಧವಳಾಕ್ಷತಸಿತಕುಸುಮಮಂಗಳಲಾಜಾಂಜಲಿಗಳುಮನುರಾಗಮಂಪಡೆಯೆ, ಪುರಪ್ರಧಾನಜನಸಹಿತಾಶೇಷಾಶೀರ್ವಾದಪರಂಪರೆಯನಾನುತ್ತುಂ ಪಂಚರತ್ನತೋರಣದ್ಯುತಿಸಮುದ್ದ್ಯೋತಿತಕನಕಪ್ರಾಕಾರಪ್ರತೋಳದ್ವಾರಮನೆಯ್ದೆವಂದಾಗಳ್,

ಗಿರಿರಾಜೋದಗ್ರಸಿಂದೂರಿತಕರಟಿಘಟಾಟೋಪಮುಂ ಕುಂಕುಮಾಂಭ
ಸ್ಸ್ಫುರಿತಾಂಗೋತ್ತುಂಗವಲ್ಗತ್ತುರಗಬಲಮದೋದ್ದಾಮಮುಂ ಚಿತ್ರನೇತ್ರಾಂ
ಬರನಾನಾಹೇತಿಹಸ್ತೋದ್ಭಟಭಟಸ್ಫೃತನಾಭೀಳಮುಂ ಚಿತ್ತದೊಳ್ ವೀ
ರರಸಂ ಕೈಗಣ್ಮಿ ಪೊಣ್ಮುತ್ತಿರೆ ನಿಜಬಲಮಂ ನೋಡಿದಂ ಸಾರ್ವಭೌಮಂ ॥

ಎರಡುಂ ಕೆಲದೊಳಮರಸನ
ಬರವಂ ಪಾಱುತ್ತೆ ಭೂಪರಿರ್ದಲ್ಲಿಯೆ ಮಱ ।
ತ್ತಿರದೆಱಗೆ ಮಕುಟಮಣಿಗಣ
ಮರೀಚಿ ಪುದಿದತ್ತು ದೆಸೆಯುಮಂ ವಸುಧೆಯುಮಂ ॥ ೧೫

ವ॥ ಅಂತು ಕಿರೀಟಕೋಟಿರತ್ನರಶ್ಮಿರಂಜಿತದಿಕ್ಚಕ್ರಮಾಗಿ ಬಂದೆಱಗಿದ ರಾಜಚಕ್ರಮನನುಕ್ರಮದೊಳ್ ನೇತ್ರತ್ರಿಭಾಗಕಟಾಕ್ಷಸಮಗ್ರೇಕ್ಷಣಭ್ರೂವಿಭ್ರಮಮಧುರಹಸಿತಾಳಾಪನಪರಿಹಾಸವಿಸ್ರಂಭಾಳಾಪಂಗಳಿಂ ಸಂತಸಂಬಡಿಸುತ್ತಂ ಬಂದಂದಿನ ದಿನಮಯೋಧ್ಯಾಪುರಾಸನ್ನದೊಳ್ ನಿಜಸ್ಥಪತಿರತ್ನವಿರಚಿತಮಾಗಿ,

ವಿಜಯಶ್ರೀಗೃಹಮೆನಿಸುವ
ವಿಜಯಪ್ರಸ್ಥಾನಶಿಬಿರನೃಪಮಂದಿರಮಂ ।
ವಿಜಿಗೀಷು ಬಂದು ಪೊಕ್ಕಂ
ವಿಜಯಾಳಂಕಾರಬಾಹು ಭರತಮಹೀಶಂ ॥ ೧೬

ವ॥ ಅಂತು ಪೊಕ್ಕು ಮಂಗಳಶೇಷಾಕ್ಷತಂಗಳನಾಂತುಕೊಂಡು ಹರಿನೀಲಕುಟ್ಟಿಮನಿಹಿತರಜತಹೇಮಭಾಜನಾಲಂಕೃತಮಾಗಿ ವಿಕಸಿತಾಂಭೋಜಹೇಮಕಮಳಮನೋಹರತರಶ್ರೀಯಂ ತಾಳ್ದಿರ್ದ ಭೋಜನಭೂಮಿಗೆ ರಾಜಹಂಸವಿಳಾಸದಿಂ ಬಿಜಯಂಗೆಯ್ದು ಸಕಲವಿದ್ಯಾಪ್ರವೀಣಗುರುಜನಾರ್ಯಜನವಿಳಾಸಿನೀಜನಪರಿವೃತನತಿಮೃದುರಸನಾಸಮ್ಮರ್ದನಮಾತ್ರದ್ರಾವಣೀಯಘೃತಪೂರಮುಮಂ, ಅಲ್ಪದಶನದಂಶಮಾತ್ರಖಂಡನೀಯಮಂಡಕಮುಮನತ್ಯಂತಕೋಮಳತಾಳುತಳಸಂಘಟ್ಟಮಾತ್ರಕ್ಷೋದನೀಯಮೋದಕಮುಮಂ, ಅನಿಷ್ಠುರೋಷ್ಠಪುಟಮಧ್ಯಸಂಧಾರಣಮಾತ್ರಚೂರ್ಣನೀಯಶಾಕವರ್ತಿಕಮುಮಂ, ಅತಿದೂರೋಚ್ಛ್ವಾಸವಿಕಾಸನಾಸಾಂಜಲಿಪುಟಪೇಯಮಾ

ನದುಗ್ಧಹೈಯಂಗವೀನಹುಮಂ, ಸ್ನಿಗ್ಧಮುಮಪ್ಪ ಮನೋಹರಾಹಾರಮು ಮಂ, ನೀಹಾರಶಕಲಪರಿಣತಕಪಿತ್ಥಫಳಪರಿಮಳಮಧುರದಧಿಯುಮಂ, ಏಕೀಭೂತಸಕಳಭುವನಶಿಶಿರದ್ರವ್ಯಸಂಚಾರದ್ರವಶಂಖಾಕಾರಶಿಖರಿಣೀರಮ ಣೀಯಮುಮಂ, ಅಮೃತಪಿಂಡಾಯಮಾನಪಿಂಡದುಗ್ಧಸ್ನಿಗ್ಧಮುಮಪ್ಪ ಮ ನೋಹರಾಹಾರಮುಮಂ,

ಕೆಲದೊಳ್ ರಾಜಕುಮಾರವೃಂದಮಿದಿರೊಳ್ ವಾರಾಂಗನಾವರ್ಗಮಾ
ದಲೆ ವಂದಿಪ್ರಕರಂ ಯಥೋಚಿತನಿಜಸ್ಥಾನಂಗಳೊಳ್ ಗಾಯಕರ್ ।
ಪಲರುಂ ಬಂದುಣೆ ನೋಡಿಯುಂ ನುಡಿಯುಮಟ್ಟುತ್ತುಂ ಪಸಾಯಂಗಳಂ
ಕೆಲಕೆಲ್ಲಂ ಭರತೇಶನಾರೊಗಿಸಿದಂ ಕಲ್ಯಾಣಕಾಹಾರಮಂ ॥ ೨೭

ವ॥ ಅಂತಾರೋಗಿಸಿದಿಂ ಬಳಿಯಂ ಆಚಾಂತಚಂದ್ರಕಾಂತದ್ರವಸುರಭಿಸ ಲಿಲನುಂ ಘನಸಾರಚಂದನಸಾರಪ್ರಮೃಷ್ಟಕರತಳನುಮಾಗಿ, ಕೃತಕಸ್ತೂರಿ ಕಾವಿಲೇಪನನುಂ, ವಿರಚಿತಸುರಭಿಕುಸುಮಶೇಖರನುಂ, ಮೃಗಮದಖದಿ ರಗುಳಿಕಾಬಹಳಕರ್ಪೂರಪಾಳೀಸಂಮಿಶ್ರತಾಂಬೂಲದ್ವಿಗುಣಿತವದನಾರವಿಂ ದಾಮೋದನುಮಾಗಿ, ಷಟ್ಖಂಡಮಂಡಳವಿಜಯವಿಳಾಸವಿಹಾರಶೀಲಂ ಕತಿಪ ಯಪದಂಗಳಂ ವಿಹಾರಿಸಿ, ದುಕೂಲಪ್ರಚ್ಛದಾಚ್ಛಾದಿತಸುಖಾಸನಾಸೀನಂ ಮಣಿಮಯಸಿಂಹಾಸನಮನವಷ್ಟಂಭಿಸಿ,

ಕಳಕಂಠೀಗೀತಂ ಬಗೆ
ಗೊಳಿಯುಂ ವೀಣಾಕ್ವಾಣಂ ಮನಂಗೊಳಿಯುಮಿಳಾ ।
ವಳಯೇಶ್ವರನಮರ್ದಿನ ಕಡ
ಲೊಳಗಿರ್ಪಂತಿರ್ದನಂತವಾಸದೊಳಾಗಳ್ ॥ ೨೮

ವ॥ ಅಂತು ಅಂದಿನ ದಿವಸಮಂ ಕಳಿದು ಮಱುದಿವಸಂ ದ್ವಾದಶಯೋಜನ ಸಂಸರ್ಪದ್ಗಂಭೀರಧೀರಾರಾರವಂಗಳಪ್ಪಾನಂದಿಗಳೆಂಬ ಪನ್ನೆರಡು ಭೇರಿಗ ಳುಂ, ಅಹಿತಮಹೀಪಾಳಹೃದಯಕವಾಟಪುಟವಿಘಟನಪಟುಗಳಪ್ಪ ವಿಜ ಯಘೋಷಂಗಳೆಂಬ ಪನ್ನೆರಡು ಪಟಹಂಗಳುಂ, ಆಗಣ್ಯಪ್ರಣ್ಯಾಬ್ಧಿಸಂಭವಂ ಗಳಪ್ಪ ಗಂಭೀರಾವರ್ತಂಗಳೆಂಬಿರ್ಪತ್ತುನಾಲ್ಕುಶಂಖಂಗಳುಂ, ಮತ್ಸ್ಯಾಮು ಕರಕುಲಿಶಕಳಶಕುಳೀರವರಾಹವಾನರಕಂಠೀರವಚಮೂರುಮಯೂರಗರು

ಡಫಣಿರಾಜಚಿಹ್ನಂಗಳಪ್ಪ ಸಾಲ್ಚತ್ತೆಂಟುಕೋಟಿಪತಾಕೆಗಳೆಸೆಯೆ ಪೂರ್ವಾ
ಭಿಮುಖನಾಗಿ ಚಕ್ರರತ್ನಪುರಸ್ಸರಂ ಬಿಜಯಂಗೆಯ್ವಾಗಳ್,

ಅನವರತಗಳನ್ಮದದು
ರ್ದಿನಾನನಂ ವರ್ಷಜಳಸಮನ್ವಿತಮಂಭೋ।
ದನಿನಾದಂ ಭದ್ರಮನಂ
ಮನೋಜವಂ ಚತುರಶೀತಿಲಕ್ಷಪ್ರಮಿತಂ ॥ ೧೯

ಘನಘಟೆ ನಭದಿಂದಂ ಧಾತ್ರಿಗೆತ್ತೆತ್ತ ಒಂದ
ತ್ತೆನಿಸಿ ಕಳೆದುದೆತ್ತಂ ಚತುಸಪ್ತಚ್ಛವೃಳಾ।
ವನಸುರಭಿಮದಾಸಾರಾಸವಾಸಕ್ತಭೃಂಗೀ
ನಿನದಮುಖರಿತಾಶಾಚಕ್ರಗಂಧೇಭಚಕ್ರಂ ॥ ೨೦

ವನಧಿಯ ನೀಳ್ದ ವರ್ದೆರೆಗಳೀನೆಲನಂ ಕವಿದಪ್ಪವೀಗಳೆಂ
ಬಿನಮತಿವೇಗದಿಂ ಪರಿವ ಪಾಱುವ ಲಕ್ಕೆಯನೊಡ್ಡಿನೊಳ್ಪ್ಪ ತ।
ನ್ನನೆ ನಡೆ ನೋಡಿಸುತ್ತುಮಿರೆ ಜಾಯಿಲವೊಂದೆರಡೆಂದು ತೋಱೆ ನೆ
ಟ್ಟನೆ ಪದಿನೆಂಟು ಕೋಟಿವರೆಗಂ ತಳರ್ದತ್ತು ತುರಂಗಸಾಧನಂ ॥ ೨೧

ವಿವಿಧಾಯುಧಪೂರ್ಣಂಗಳ್
ಪ್ರವೀರಪುರುಷಪ್ರತಿಷ್ಠಿತಂಗಳ್ ಚೇತೋ।
ಜವಹರಿಯೋಗ್ಯಂಗಳ್ ತಳ
ರ್ದುವಾಗಳೆಂಭತ್ತುನಾಲ್ಕುಲಕ್ಕೆ ರಥಂಗಳ್ ॥ ೨೨

ಪಾದಾಭಿಘಾತವಿಚಳ
ನ್ಮೇದಿನ್ಯುದ್ಧೃತವಿಶಾಲಧೂಳೀಪಟಲಾ।
ಚ್ಛಾದಿತಗಗನಂ ನಡೆದುದು
ಪಾದಾತಂ ಚತುರಶೀತಿಕೋಟಿಪ್ರಮಿತಂ ೨೩

ಎಡೆನೆಱೆಯದು ಭುವನತಳಂ
ನಡೆವ ಚತುರ್ಬಲಕೆ ದಿವಿಜಖೇಚರಸೈನ್ಯ।
ಕ್ಕೆಡೆನೆಱೆಯದು ಗಗನಮುಮೆನೆ
ಷಡಂಗಬಲಮಿಂತು ತಳರೆ ತಳರ್ದಂ ಭರತಂ ॥ ೨೪

ದೆಸೆಗಳನೆಂಟುಮಂ ನೆಱೆಯೆ ಮುನ್ನಮೆ ಬಳ್ವಳನಾಗೆ ಮಾಡದಾ
ಗಸಮುಮನುಚ್ಚ ಮಾಗಿನಿಸನೆತ್ತದೆ ನೀಳ್ದರೆ ಭೂಮಿಭಾಗಮಂ ।
ಪಸರಿಸದೀಬಳಪ್ರಸರಮಂ ಭರತೇಶ್ವರನೇಕೆಯೋ ವಿ ನಿ
ರ್ಮಿಸಿದನೆನಲ್ಕೆ ಪೆಂಪುವಡೆದೇಂ ನಡೆದತ್ತೊ ಸಮಸ್ತಸಾಧನಂ ॥ ೩೫

ವ॥ ಅಂತು ಮಹೀಭಾಗಮೆಲ್ಲಂ ಚತುರಂಗಮಯಮುಂ, ದಿಗ್ವಿಭಾಗಮೆಲ್ಲಂ ರಜೋಮಯಮುಂ, ನಭೋಭಾಗಮೆಲ್ಲಂ ದಿವಿಜವಿದ್ಯಾಧರಮಯಮುಂ, ಅಂತರಿಕ್ಷಮೆಲ್ಲಮಾತಪತ್ರಮಂಡಳಮಯಮುಂ, ಸಮೀರಣಸಂಚರಣಮೆಲ್ಲಂ ಮದಗಂಧಮಯಮುಂ, ಸೃಷ್ಟಿಯೆಲ್ಲಮವನಿಪಾಳಮಯಮುಂ, ಭುವನವಿವರಮೆಲ್ಲಂ ಜಯಜಯನಿನಾದಮಯಮುಂ ಆಗಿ ನಡೆವ ನಿಜವಿಜಯಸೈನ್ಯದೊಳನೇಕಮಕುಟಬದ್ಧಶೇಖರಸಹಸ್ರಪರಿಸ್ರಸ್ತ ಕುಸುಮಕೇಸರರಜಮುಂ, ಅನವರತವಿತರಣನಿರತರಾಜಕುಮಾರಮುಷ್ಟಿ ವಿಕೀರ್ಯಮಾಣಸಂತರ್ಪಣಚೂರ್ಣಸಂಕೀರ್ಣಕರ್ಪೂರರಜಮುಂ, ಸಮದ ವಿಜಯಗಜವಿಶಾಲಕುಂಭಭಿತ್ತಿಪರಿಕ್ಷಿಪ್ತಸಾಂದ್ರಸಿಂದೂರರಜಮುಂ ನೆಱಂಬಡೆದು,

ಮದಕರಿತುರಂಗಮಾನವ
ಪದಹತಿಯಿಂ ಗಗನತಳಮನೊಡನಡರ್ವ ರಜಂ ।
ಪದೆಪೊದವೆ ದಿಗಂಗನೆಯರ
ಕೆದಱಿದ ಪಟವಾಸಚೂರ್ಣರಜಮನೆ ಪೋಲ್ಗುಂ ॥ ೩೬

ಪರಿಪೂರಿತಸಕಳದಿಗಂ
ಬರತಳಮನುಕೂಲಮಂದಪವನವಿಲೋಲಂ ।
ಕರಮೆಸೆದುದು ಬಹಳರಜೋಂ
ಬುರಾಶಿಯೊಳ್ ಮತ್ಸ್ಯಮಕರಕೇತನನಿಕರಂ ॥ ೩೭

ವ॥ ಆಗಳ್,

ಕರಿಕರಶೀಕರಮದಜಳ
ತುರಂಗಲಾಲಾಂಬುಸೇಕದಿಂದಡಿದುಱಿದಿ ।
ರ್ದ ರಜಂ ನರೇಂದ್ರಚಾಮರ
ಮರುದಭಿಹತಿಯಿಂ ತೆರಳ್ದು ತೂಳ್ದತ್ತಾಗಳ್ ॥ ೩೮

ಸಿವಿಗೆ ತಪೆದುಱುಗಲೊಡನಿ
ಕ್ಕುವ ಕುಂಚಂ ಲೀಲೆವಡೆಯೆ ಚೆಲ್ವೆಸೆದುದು ಷ
ಣ್ಣವತಿಸಹಸ್ರಾಂತಃಪುರ
ಮವಯುವದೊಳ್ ಭರತಚಕ್ರವರ್ತಿಯ ಕೆಲದೊಳ್ ೩೯

ಬಾಸಣಿಸಿದ ಚೆನ್ನದ ಪೊಸ
ವಾಸಣಿಗೆಯ ಪೊನ್ನಸಿವಿಗೆ ಮಣಿಮಯಕಳಶೋ
ದ್ಭಾಸಿ ದೆಸೆದೆಸೆಯೊಳೆಸೆಯೆ ವಿ
ಳಾಸಂ ಬೆರಸೊಱಗೆ ಭೋಗಿಯರ್ ಕರಮೆಸೆದರ್ ೪೦

ಅವೆಯವದೆ ಕೋಡಿದು ಮುಟ್ಟುವ
ಸವತಿಯ ಬಿಜ್ಜಣಿಗೆ ವಿಡಿದ ಸತ್ತಿಗೆಯ ವಿಳಾ ।
ಸವಮಮರ್ದ ಲೀಲೆಯಿಂ ಪೆಂ
ಡವಾಸದೊಳ್ ಪಾಡಿರೊಯ್ಯನೊಯ್ಯನೆ ನಡೆದರ್ ೪೧

ಕರಿಣೀವೃಂದದ ಮೇಲೆ ತಳ್ತ ತಪೆಗಳ್ ವಾರಾಂಗನಾಗೀತಮುಂ
ಪ್ರರವಂಗಳ್ ಚಳಕೇಶಪಾಶಕುಸುಮಾಮೋದಾಸವಾಸಕ್ತಭೃಂ ।
ಗರವಂಗಳ್ ಪ್ರಿಯಕುಬ್ಜವಾಮನಗಣಾಲಾಪಂಗಳತ್ಯಂತಸಾಂ
ದರಶುದ್ಧಾಂತವಧೂಕದಂಬಕಮನೇಂ ಮೆಯ್ವೆರ್ಚಿಸಲ್ಕಾರ್ತುದೋ ॥ ೪೨

ಪೊಳೆವಲರಮುರ್ದಿನ ಕಪ್ಪುರ
ವಳುಕಿನ ಕತ್ತುರಿಯ ಕೊಳತ ದುರ್ವಾಭರಣಂ ।
ಗಳ ಪೊಳೆವ ಮಾಣಿಕಂಗಳ
ಬೆಳಗಿದೆ ಸೂಚಿಸಿತು ಭರತನಂತಃಪುರಮಂ ॥ ೪೩

ಶೃಂಗಾರಾಂಭೋಧಿವೇಳಾವಿಳಸನದೆಸಕಂ ಮೇಣ್ ಸ್ಮರಪ್ರಾಜ್ಯಸಾಮ್ರಾ
ಜ್ಯಾಂಗಂ ಮೇಣ್ ಚೈತ್ರಲಕ್ಷ್ಮೀಪರಿಕರವಿಭವಂ ಮೇಣಿದೆಂಬಂತೆ ಲೀಲಾ ।
ಪಾಂಗಜ್ಯೋತ್ಸ್ನಾಮೃತಾಂಭಃಪ್ಲವಧವಳಿತದಿಗ್ಭಿತ್ತಿ ಬಂದತ್ತು ಪುಷ್ಪಾ
ಸ್ತ್ರಾಂಗೇಕಚ್ಛತ್ರಮಾಯಿತ್ತು ಜಗಮೆನೆ ಭರತಾಂತಃಪುರಸ್ತ್ರೀಸಮೂಹಂ

ಲಯದಿಂ ಮೆಲ್ಪಿಂ ಬೆಡಂಗಂ ಪಡೆವ ತುರಗದಿಂ ಚಿತ್ರಿತಚ್ಛತ್ರಕಾಲೀ
ಲೆಯಿನುದ್ದಂ ಬರ್ಪ ಚೇಟೀನಿವಹದ ಬರವಿಂ ಭೂಷಣಾಡಂಬರೋದ್ಯೋ

ತಿಯಿನೊಪ್ಪಿದುರ್ದ್ವಿಳಾಸಂ ವಿಳಸಿತಕಮಳಾವಾಸವಿಾಬಪ್ರುದಂ ರಾ
ಣಿಯುವಾಸಂ ನೋಡಿಮೆಂಬಂತೆಸೆದುದು ಪಲವುಂ ತಂಡದಿಂ ಪೆಂಡವಾಸಂ ॥ ೪೫

ತುರಗವುವೊಂದು ಸತ್ತಿಗೆಯುವೊಂದಿರೆ ಕಾಪಿನ ಬಂಟು ಸುತ್ತಲುಂ
ಬರೆ ಮುಸುಕಿಟ್ಟಪಟ್ಟಣಿಗೆಯುಂ ಪೊಱಪೊಣ್ಮುವ ಕಣ್ಣಬೆಳ್ಪುವೋ ।
ಪರ ಮನದೊಳ್ ತೆಱಂಬೊಳೆವ ಬಾಳೆಗಳಂತಿರೆ ನಾಣ್ವಿಳಾಸದೊಳ್
ಪೊರೆದಿರೆ ಬಂದುದಂದೊಡನೆ ಸಜ್ಜನವೆಂಡಿರ ತಂಡವೋಳಗದೊಳ್ ॥ ೪೬

ಪಡೆಗಡ್ಡಮಿರ್ದ ಬೆಟ್ಟ
ಟ್ಟಿಡೆ ಮಟ್ಟಮಿಱುಂಬವೆಂಬಿವಂ ಸಣ್ಣಿಸಿ ಸಾ ।
ರ್ವಿಡೆ ನಡೆವ ದಂಡರತ್ನಂ
ಪಡೆವಳ್ಳನ ಮುಂದೆ ನಡೆಯೆ ನಡೆದಂ ಭರತಂ ॥ ೪೭

ವ॥ ಅಪ್ರಸ್ತಾವದೊಳ್,

ಅಂತು ನೃಪಂ ನಡೆಯೆ ಲಲಾ
ಟಂತಪತಪನಾಂಶುವಿಂ ಸರೋವರಜಲವೋ ।
ರಂತಿರೆ ಕಾಯ್ಗೊಂಡದ ನೀ
ರಂತಿರೆ ಕುದಿದತ್ತು ಪೊಳೆಯೆ ಜಲಚರನಿಕರಂ ॥ ೪೮

ಬಾಳಕಳಹಂಸಜಾಳ ಮೃ
ಣಾಳಂಗಳ ನಡುವೆ ಶಿಶಿರಕರಕರಶತದಿಂ ।
ದೋಳದೊಳಿರ್ಪಂತಿರ್ದುದು
ಲೀಳೆಯಿನೇಂ ಲೀಲೆ ರಾಜಹಂಸಂಗರಿದೇ ॥ ೪೯

ತಪನಕರಂ ತನುಗಳನು
ರ್ಚೆ ಪೋಗೆ ಸಾರ್ದತ್ತು ಚಕ್ರವಕ್ಕಿಯು ಪೊಣರುಂ ।
ಗ್ಲಪಿತಮನವಾಗಳುದ್ದಂ
ಡಪುಂಡರೀಕೋಜ್ಜ್ವಳಾತಪತ್ರದ ನೆೞಲಂ ॥ ೫೦

ಪೊಳೆವಿನಕಿರಣಂ ಮೆಯ್ಗಳ
ನಳುರೆ ಕನಲ್ದಗಿದು ಸೋಗೆಯುಂ ಪರಪಿ ನೆೞ ।

ಳ್ಗಳನಾಸೆವಡೆ ಶಿಖಾವಳಿ
ಕುಳತಾಂಡವಮೆಸೆದುದಾಶರತ್ಸಮಯದೊಳಂ ೩೧

ಕರಿಣೀಗಣಕರಶೀಕರ
ಪರಿಕರದೊಳಮಲೆವ ಚಮರರುಹಪವನಪರಂ ।
ಪರೆಯೊಳಮಾಱದೆ ನೃಪಸಾಂ
ದರೀ ಶ್ರಮಾಂಭಃಕಣಂಗಳಂಕ್ಕಿದುವಾಗಳ್ ॥ ೩೨

ಲಾವಣ್ಯರಸದ ಬಿಂದುಗ
ಳಾವರಿಸಿದುವೆನಿಸಿ ಪೊಳೆದುವವನೀಶ್ವರಕಾಂ ।
ತಾವದನಂಗಳ್ ಸ್ವೇದಜ
ಲಾವಳಿಯಿಂ ಸಜಲಲವಸರೋಜಂಗಳವೋಲ್ ॥ ೩೩

ಕಡುವೆಂಕೆಯಿಂ ಕಟಾಕ್ಷಂ
ಬಿಡಿದಿೞಿವ ಲಲಾಟಕುಂಕುಮಸ್ವೇದಜಳಂ ।
ಕಿಡಿಸಿದುದು ಕದಪಿನೊಳ್ ಪೊ
ೞ್ತಿಡೆ ಬರೆದರಸಿಯರ ಪತ್ರಲೇಖಾವಳಿಯುಮಂ ॥ ೩೪

ಶರತ್ತಪನತಾಪದಿಂ ಕೊರಗಿ ಕೂಡೆ ಕೋರೈಸಿದಾ
ನರೇಶ್ವರವಧೂಕದಂಬಕಮನಾಱಿಸಲ್ಕಾಗಳ ।
ಬ್ಜರೇಣುಗಳನೆತ್ತಿ ಬಂದುದಿದಿರ್ವರ್ಪರ್ವೋಲ್ ನಂದನೋ
ತ್ಕರಂಬಿಡಿದು ಮಾರುತಂ ಚಳತರಂಗೆಯಿಂ ಗಂಗೆಯಿಂ ೩೫

ವ॥ ಅಂತು ಮಳಯಜರಸಶಿಶಿರಶೀಕರಾಸಾರಚಾರಿಯಾಗಿ ಬಂದ ನಂ
ದಾನಿಳನ ಬೞಿಯನೆ ಬಂದು,

ಹಿಮಶೈಲಾಗ್ರಸರಸ್ಸರೋರುಹರಜಃಪಿಂಗಾಂಗೆಯಂ ಕ್ಷೀರಸಾ
ರಮಹೀಜಪ್ರಸವಪ್ರಭೂತಮಕರಂದಾಮೋದಸಂಸಂಗೆಯುಂ ।
ಭ್ರಮರೀಗೀತಸಮೇತಹೇಮನಳಿನೀ ಶ್ರೀಸಂಗೆಯುಂ ನೋಡಿ ನಾ
ಡೆ ಮನಂಗೊಂಡನಿಳೇಶ್ವರಂ ಉುಳಿತಮತ್ಸ್ಯಾಪಾಂಗೆಯುಂ ಗಂಗೆಯಂ ॥ ೩೬

ಆರಮ್ಯನದಿಯ ಚೆಲ್ವನಿ
ಳಾರಾಮಾರಮಣನತ್ತಿಯಿಂ ನೋಡುವಿನಂ ।
ಸಾರಥಿ ಕಣ್ಣಱಿದೊಮ್ಯನೆ
ತೀರಂ ಕೊಸೆಗೊಂಡು ಚಕ್ರಿಯಂ ಬಿನ್ನವಿಸಂ ॥ ೫೭

ದಿವಿಜಜನಸೇವಿತಂ ಭುವ
ನವಂದ್ಯಮಾಹ್ಲಾದಿತತ್ರಿಲೋಕಂ ನೋಡೀ ।
ದಿವಿಜನದಿ ನಿನ್ನ ಗುರುವಿನ
ಧವಳಯಶಶ್ರೀಯನಿನಿಸನನುಕರಿಸಿರ್ಕುಂ ॥ ೫೮

ನಿನ್ನಾಜ್ಞೆಯಂತೆ ಗಗನಮ
ನುನ್ನತಿಯಿಂ ದಾಂಟಿ ಪೆಱರ್ಗೆ ಲಂಘಿಸಲರಿದೆಂ ।
ಬನ್ನಿಗಮೊಪ್ಪಿರ್ದುದು ಲೋ
ಕೋನ್ನತ ನೋಡಿದಱ ಕನಕವೇದಿಕೆಯಿರವಂ ॥ ೫೯

ತ್ರಿದಶಸ್ತುತ ನೋಡ ಪೊದ
ಪೊದ್ದವಿದ ತಾಳೀತಮಾಳ ಸೀಳದ ಕರ್ಪಿಂ ।
ಪ್ಪಿದಿದು ಪರಭಾಗಮಂ ಪಡೆ
ದಿದಱೆರಡುಂ ಕೆಲದೊಳೆಸೆವ ವನರಾಜಿಗಳಂ ॥ ೬೦

ಎರಡು ತಟವನದ ಪಸುರೆಸೆ
ದಿರೆ ತನ್ನೊಳ್ ತನ್ನ ಬಣ್ಣಮೆಸೆದಿರೆಯುಂ ವಿ ।
ಸ್ಫುರಿತತರಕನಕವೇದಿಕೆ
ಮರಕತವೇದಿಕೆಯ ಚೆಲ್ವ ನಿರ್ಕುಟಿಗೊಳ್ಗುಂ ೬೧

ವನಕುಸುಮಸ್ತಬಕದ ನೆಱ
ಲಿನಿಸಚ್ಛಾಂಬುವಿನೊಳೆಸೆಯೆ ಮಧುಕರಮದು ಭೋಂ ।
ಕೆನೆ ಪಾಯ್ದುಱಂಗೆ ನಾಂದೊಡೆ
ಜೇನುಂಗಿ ನೆಲಸಿದುದು ವಿಕಚಕನಕಾಬ್ಜಿನಿಯೊಳ್ ॥ ೬೨

ಕೊಡೆಯೆಲೆಗಳ್ ತಿಂತಿಣಿಯಿ
ಟ್ಟೆಡೆಗಳ ಕಟ್ಟಲೆಯನಿರುಳೆಗೆತ್ತಾತ್ಮೀಶಂ ।

ತಡೆದೊಡೆ ನರೇಂದ್ರ ನೋಡೀ
ನಡುವಗಲೊಳ್ ಚಕ್ರವಾಕವಧು ವಿರಹಿಸುವಳ್ ॥ ೬೩

ಮದಗಂಧವೊಂದೆ ಸಪ್ತ
ಚ್ಛದಗಂಧಮನೀವನೇಭವಾಘ್ರಾಣಿಸಿ ಪೆ ।
ರ್ಚಿದ ಮಸಕದಿಂದೆ ಪಾಯು
ಲ್ಕದಿರ್ಪುಗೆಯ್ದಪುದು ನೋಡ ವನವೇದಿಕೆಯಂ ॥ ೬೪

ಮದಕಳಹಂಸೆಯು ಪಿಂಡಿದೆ
ಪೊವಟ್ಟ ಚವರೀಜವಾಗೆ ಜಳದೇವತೆಗೆ ।
ತ್ತಿದ ಪಚ್ಚೆಯ ಸತ್ತಿಗೆಗಳ
ಪುದುವೆನಿಪುದು ವನಜವನದ ಕೊಡೆಯೆಲೆ ಪಲವುಂ ॥ ೬೫

ಮಲಯಸಮೀರಣೇರಣಚಲತ್ತರುಶಾಖೆಗಳೊರ್ವರ್ಗೊರ್ವರ್ ನೀ
ರೊಳಗೆ ಬಟಲ್ದ ಹೇಮಸರಸೀಜರಜಾರುಣವಾರಿಯಂ ಪುದಂ ।
ಗೊಳಿಸಿ ನಭಂಬರಂ ಮಿಳಿರ್ದಲಂಪಿನ ದಂಪತಿಯಿರ್ಪ ಜೊಂಪವಂ
ತಳಿ ತಳಿವಲ್ಲಿ ತಣ್ಪುವೆಸಕೆಯ್ವುವು ತೀರವನಾಂತರಾಳದೊಳ್ ॥ ೬೬

ಬಳ್ಳಿಗವುಂಗಂ ತಳ್ತಲೆ
ವಳ್ಳಿಯ ಕಟ್ಟಲೆಯನಲೆವ ಸೊಡಗರ್ಡಿಗಳನೀ ।
ಯಳ್ಳಿಱಿದಲೆವುವು ಬನದೊಳ್
ಗುಳ್ಳಲರ್ದುಜ್ಜ್ವಳಿಪ ಚಂಪಕಪ್ರಸವಂಗಳ್ ॥ ೬೭

ಗೊಲೆಯೊಳ್ಪಣ್ತುದು ವ್ಯೆಂದವಾಪೆ ಪಥಿಕರ್ಬರ್ಕೆಂದು ಭೃಂಗಂಗಳಿಂ
ದುಲಿವಂತಿರ್ದುದು ಪಣ್ತ ಬಕ್ಕೆ ತನಿವಣ್ಣಾಗಿರ್ದುದಿವ್ಮಾವು ಕ ।
ಟ್ಟಲಿಸಿರ್ದತ್ತೆಲೆವಳ್ಳಿ ಕಾಯ್ತು ಕರೆವಂತಿರ್ದತ್ತು ಚೆಂದೆಂಗು ಸಾ
ಱಲೆವಂತಿರ್ದುದು ಬಂದ ಕರ್ಬಿನೆ ವನಶ್ರೀಬಣ್ಣಿಸಲ್ಬರ್ಕುವೋ ॥ ೬೮

ಕಡುಪಗಲಾದುದು ಬೀಡಂ
ಬಿಡಿಸುವುದೀಪುಣ್ಯನದಿಯ ತಡಿಯೊಳ್ ದೇವರ್ ।
ನಡೆವುದು ವನಜಳಕೇಳಿಗೆ
ಕಡುರಯ್ಯಂ ಬನದ ತೊಱೆಯ ಸಿರಿ ಧರಣಿಪತೀ ೬೯

ಎಂದೊಡೆ ಭರತೇಶ್ವರನಾ
ನಂದದೆ ಬೀಡಂ ಬಿಡಲ್ಕೆ ವೇೞ್ದೊಡೆದು ಜಯ ।
ಸ್ಯಂದನದಿಂದಂ ಜನಿತಾ
ನಂದದೆ ಬನಮಂ ವಿಳಾಸದಿಂ ಪುಗುತಂದಂ ॥ ೩೦

ವ॥ ಆಗಳ್ ಶರದದ ಬಿಸಲಳುರೆ ಪೊಣ್ಮಿದ ಘರ್ಮಬಿಂದುಗಳಿಂ ನಾಂದು ಪೊಕ್ಕೞಿದರೆವೂರೆಕನಾದ ಕುಂಕುಮಪತ್ರಭಂಗದ ಕೊಱಗಿದ ನಗೆಮೊಗಗಳುಂ ಪಯಣದೊಳಳ್ಳೆವಿಳ್ಳೆಯಾಗಿ ಬಂಬಲಬಾಡಿದ ತನುಲತೆಗಳುಂ ಎಱಿವಿಱನಾದ ತಲೆದುಡುಗೆಗಳುಂ ಬಾಡಿದ ಪೂಮಾಲೆಯೊಡನೆ ಬೞಲ್ದ ಸೋರ್ಮುಡಿಯುಂ ಅಡಿಗಡಿಗೆ ತಡತಡವಪ್ಪ ನಡೆಗಳುಂ ಬೆರಸು,

ವನದೇವತೆಗಳ್ ನಂದನ
ವನಮಂ ಪುಗುವಂತೆ ತಳರ ಕಳಿಕೆಯ ಪೊಸಪೂ ।
ವಿನ ಮೇಗೆ ದಿಟ್ಟಿಯಾಗಿರೆ
ವನಜಾನನೆಯರ್ ವಿಳಾಸವನಮಂ ಪೊಕ್ಕರ್ ॥ ೩೧

ಪುಗೆ ನಡೆವ ಪರಿಶ್ರಮದಿಂ
ದೊಗೆವ ಲತಾಂಗಿಯರ ಸುಯ್ಯ ಕಂಪಿಂಗಳಿಗಳ್ ।
ನೆಗೆಸಿ ಮುಸುಱಿದುವು ಪೊಸಗಂ
ಪುಗೆಂಡು ಸೈರಿಸುವ ಮಧುಕರಂಗಳುಮೊಳವೇ ॥ ೩೨

ಕತ್ತುರಿಯ ಕಂಪುಮಂ ಬೆಮ
ರೊತ್ತರಿಸಿ ಪೊದೞ್ದೆ ಕಂಪನೀಯುತ್ತಿರೆ ಮ್ರೈ ।
ತ್ತೊತ್ತುಂಗಸ್ತನೆಯರ್ ಶ್ರಮ
ಮುತ್ತಮದೇಂ ಸುರಭಿಗಂಧಮಂ ಬೀಱಿದರೋ ॥ ೩೩

ವ॥ ಆಗಳ್ ಭರತೇಶ್ವರಂ ಸಮಸ್ತಾಂತಃಪುರದೊಡನಿಡಿದಡರೆ ಸಲೆ ಪೂತ ಜಾತಲತೆಯನೊಳಗುಮಾಡಿ ಬಳಸಿದ ಮಾಧವೀಲತೆಯ ಬಳ್ಳಿವಳ್ಳಿಯ ಬಳ್ಳಿಗಾವಣದ ಮುಂದೆ ಬಳ್ವಳ ಬಳೆದೆಳೆದಳಿಸುವ ಪೊಸಗೆಂದಳಿರ ಗೊಂದಳದೊಳ್ ಸಂದಣಿಸಿದಶೋಕಲತೆಯೋಲಗಶಾಲೆಯೊಳಗಣ ಕಪ್ಪುರ ಮಳಲಿನ ಜಗುಲಿಯ ಮೇಗಣ ಕುಸುಮದೆಸಳ ಮಿಸುಗುವ ಪೊಸದಳಿಂಬ

ದ ಮೇಗೆ ಕಿಱಿದು ಬೇಗಂ ವಿಶ್ರಮಿಸಿ ಮೇಳದಾಕೆಗಳ್ ವೆರಸು ಬಂದು ಕಾವಣಮಂ ಪುಗಲೊಡಂ,

ತಳಿರ ಪೊಸದಳಿರ ಕಾವಣ
ದೊಳಗೆ ನೃಪೇಶ್ವರನ ಘರ್ಮಜಳಕಣಗಣಮಂ ।
ಕಳೆದುದು ಚಂದನಹಿಮಕರ
ವಿಳುಳಿತಜಳಪರಿಚಿತಂ ಜಳಾದ್ರ್ರಸಮೀರಂ ॥ ೭೪

ವ॥ ಅನ್ತು ಭರತರಾಜಂ ಸಕಳತರ್ಕರಾಜನಪ್ಪ ಮನೋಜರಾಜಂಗೆ ಮಾಡಿದುದೆನಿಸುವ ವಿರಾಜಮಾನರಕ್ತಾಶೋಕಪಲ್ಲವೋಲ್ಲಸಿತಕಾಯಮಾನದೊಳ್ ಕಿನ್ನರಕರಕಿಸಲಯಚಳನಸಮುತ್ಪನ್ನಕಾಕಳೀಕಳರವಮಿಳಿತಮಧುಕರತಂತ್ರೀಸಮಂಚಿತವಿಪಂಚೀಮಂದ್ರತಾರಮಧುರಮೂರ್ಚ್ಛನಾಸನಾಥಪ್ರಯೋಗಂಗಳುಮಂ ಅಂತಃಪುರಪರಿವಾರವಾರಾಂಗನಾಸಂಗೀತಗೀತಂಗಳುಮಂ ನವಪ್ರಸವಪರಾಗಾಸವಾಸಕ್ತಭೃಂಗಾಂಗನಾಗೀತಂಗಳುಮಂ ಆಲಿಸಿ ಕೇಳುತ್ತಿರ್ಪನ್ನೆಗಂ, ಅತನಂತಃಪುರಸ್ತ್ರೀಯರಿಮ್ಮಾವಿನ ಸೋನೆಯ ಸೋನೆಯೊಳ್ ತಳಿದೆಳದಳಿರ ಜೊಂಪಂಗಳೊಳಂ ಕುಳಿರ್ವ ಪುಳಿನಂಗಳೊಳಂ ಕೋಡುವ ಧಾರಾಗೃಹಂಗಳೊಳಂ ವಿಶ್ರಮಿಸಿ ಶಾರದಾತಪಪರಿಶ್ರಮಮಂ ಕಳೆಯೆ,

ನವನಖಪದರೇಖೆಗಳಂ
ಸವತಿಯರಿದಿರೊಳ್ ವಿಳಾಸವತಿಯರ್ ಮೆಱೆಯಲ್ ।
ಅವಯವದಿಂ ಕುಪ್ಪಸಮಂ
ಸವಂಗಮಂ ಕಳೆದು ಕಳೆದರಲ್ಲಿಂದವರಂ ॥ ೭೫

ಪೊಳೆವಲರ ಪಸೆಯೊಳಿರ್ದುಂ
ಪುಳಿನದ ಲೋಹಾಸನಂಗಳೊಳ್ ನೆಮ್ಮಿರ್ದುಂ ।
ಚೆಳದಳಕೆಯರರೆಬರದೇಂ
ಕಳೆದರೊ ಶರದಾತಪಪ್ರಭೂತಶ್ರಮಮಂ ॥ ೭೬

ಪೊಸತಳಿರ್ಗಳ ಬಿಜ್ಜಣಿಗೆಯಿ
ನೆಸೆವೆಲರ್ಗಳನೊಗೆವ ಘರ್ಮಜಲಮಂ ಪೀರ್ದಾ ।

ಱಿಸದುವು ಕುಸುಮರಜಂಗಳ್
ಪೊಸಯಿಸಿದುವು ಬಣ್ಣವಂ ಲತಾಂಗಿಯರ್ಗಗಳ್ ॥ ೭೭

ಅಲರ ಮುಸುರಿಗೆಯೊಳುಸಿರ್ದರ್
ಳ್ಳಲರ್ದಡ್ಡಂ ನಿಮಿರ್ದ ಲತೆಯ ಮೇಲೆ ವಿಳಾಸಂ ।
ನಿಲೆ ನೀಡಿ ಕಾಲನರೆಬರ್
ಮಲಂಗಿದರ್ ಪೊಳೆವ ತಳಿರ ಬೊಂದರಿಗೆಗಳೊಳ್ ॥ ೭೮

ತಳಿರ್ಗಳಕಂಡವಡಂಗಳ್
ತಳಿರ್ಗಳ ಪಾಸುಗಳ್ ತಳಿರ್ಗಳೋವರಿಗಳ್ ಕೆಂ ।
ದಳಿರ್ಗಳೆಳಸಿಪ್ಪೊಳೆವಿಱಿಲ್ಗಳ್
ವಿಳಾಸಮಂ ಮೆಱೆದರಲ್ಲಿ ಕೆಲರಬಲೆಯರೊಳ್ ॥ ೭೯

ಪೊಳೆವೆಳದಳಿರೊಳ್ ಪುದಿದೆಳ
ದಳಿಸಿ ಕುಳಿಕೊರ್ಟ್ಪ ಸೊನೆಯ ಸೋನೆಯನೆ ಪುದುಂ ।
ಗೊಳಿಸಿದೆಳವಳ್ಳಿಮಾವಿನ
ಕುಳಿರ್ವೋವರಿಯಲರ ಪಸೆಯೊಳುಸಿರ್ದರ್ ಕೆಲಬರ್ ॥ ೮೦

ಪನಸಾಮ್ರಕದಳಿನಾರಂ
ಗನಾಳಿಕೇರೀಫಳಾಮೃತಾಸ್ವಾದದೆ ತ ।
ಣ್ಣನೆ ತಣಿದು ಕಿವಿಯೊಳಮರ್ದಿನ
ಪನಿಪನಿವಿನಮೆಸೆದರರೆಬರಳಿಕುಳರುತಿಯಿಂ ॥ ೮೧

ಗಿಳಿಗಳೊಳ್ ಗಳಪಿ ಮೊಱೆವಳಿ
ಕುಳದೊಡನಾಳ್ಕೈಸಿ ಪುರುಳಿಯೊಡನೆಳಸಿ ನವಿ ॥
ಲ್ಗಳ ಬಳಗದೊಡನೆ ನರ್ತಿಸಿ
ವಿಳಾಸಿನೀನಿವಹಮಾಗಳೇಂ ದಳ್ಕಿಸಿತೋ ॥ ೮೨

ಅಂತು ಭರತೇಶ್ವರಂ ಸಕ
ಳಾಂತಃಪುರಸಹಿತಮಲ್ಲಿ ವಿಶ್ರಮಿಸಿ ವನಾ ।

ಭ್ಯಂತರಮಂ ತೋಱಲೆ ಮನ
ಕ್ಕಂತಿಲ್ಲದಮುದಮನುಂಟು ಮಾಡಿದುದು ಬನಂ ೮೩

ಕೊಳಗಳ ಮರಗಳ ಲತೆಗಳ
ಫಳಪ್ರಸೂನಂಗಳೊದವಿನೊಳ್ ಪಕ್ಷಿಗಣಂ ।
ಗಳ ಪ್ರಮವಿನೊಳಾಱುಂ ಋತು
ಗಳ ಚೆಲ್ವಂ ಕಾಣಲಾದುದಾನಂದನದೊಳ್ ೮೪

ಪೊಸತಲರ್ದ ಕೊಸಗು ತಳಿರ್ವೋ
ದಸುಗೆ ಪಸುರ್ಗನೆಯೊಳಿಡಿದ ಮಲ್ಲಿಗೆ ನನೆಯಿಂ ।
ಮುಸುಕಿದ ತಳಿರಂ ಪೇಱುವ
ಪೊಸಮಾವುಗಳಿಂ ಬಸಂತಮೆಸೆದಪುದಿದಱೊಳ್ ॥ ೮೫

ನವಚೂತಾಂಕುರಸುರಭಿ
ದ್ರವಮಂ ಸವಿದನಿತಱಿಂದ ಮದನಧನುರ್ಜ್ಯಾ ।
ರವಸನ್ನಿಕಾಶಮಾಗೆ
ಕಿವಿಯಂ ಮುಟ್ಟಿದುದು ಪಿಕದ ಪಂಚಮನಿನದಂ ॥ ೮೬

ಪೊದರಿ ಪೂತುವು ತೋಱಿದು
ವಾದುವು ಮಲ್ಲಿಗೆಗಳೆಯ್ದೆ ಪಣ್ತುವು ಮಾವಿಂ ।
ಬಾದುದು ನಿದಾಘಮಧುವಿನ
ಭೇದಮದೀಬನದೊಳಾತಪಕ್ಕೆಡೆಯುಂಟೇ ॥ ೮೭

ಮಾರಾಕದಂಬಸುರಭಿಸ
ಮೀರಂ ಪರಿಪಕ್ವರಾಜಜಂಬೂದ್ರುಮವಿ ।
ಸ್ತಾರಂ ಶಿಖಂಡಿತಾಂಡವ
ಸಾರಂ ನವಜಳದಸಮಯಮೇನೆಸೆದಪುದೋ ॥ ೮೮

ಸೋಂಕುವೆಲರ್ ಜಾದಿಯ ಕಂ
ಪಂ ಕರಮುಗ್ಗಲಿಸಿ ಸೋಂಕಿದಪ್ಪುದಿದೆಂತೋ ।

ಭೋಂಕೆನೆ ಪಯಣದೊಳೆಮ್ಮಂ
ಸೋಂಕಿದ ಶರದೃತುವೆ ಬನದೊಳವತರಿಸಿದುದೋ ॥ ೮೯

ಅಲರ್ದ ಪೊಸಸಿಂದುರಂಗಳ
ನೆಲೆವಳಿಕುಳವುಂ ತಳರ್ಚಿ ತಣ್ಮಲೆವೆಲರೀ ।
ಯೆಲೆದಪುವೆಮ್ಮಂತಃಪುರ
ಲಲನೆಯರಂ ಕೋಡುಸೇಡುಗೊಳ್ವನವಿಾಗಳ್ ॥ ೯೦

ವನತರುಪತ್ರಂಗಳನೊಯ್ಯ
ನೆ ನೆಲೆಯಿಂ ಪತ್ತುವಿಡಿಸಿ ಕಳಿಕೆಗೆವುತ್ಪ ।
ತ್ತಿನಿಮಿತ್ತವಾಗಿ ಶಿಶಿರಮು
ವಿನಿಸಿನಿಸನೆ ತನ್ನ ನೆಲನನಱಿಪಿದುದೀಗಳ್ ೯೧

ವ॥ ಅಂತು ದಿವ್ಯಪ್ರಭಾವದಿಂ ಸಕಳರ್ತುಕಸೌಂದರ್ಯಮುಮಂ ಬೇಱೆ ಬೇಱೆ ತೋಱುವ ರಾಜ್ಯಲಕ್ಷ್ಮೀವಲ್ಲಭಂ ವನಲಕ್ಷ್ಮಿಯಂ ನೋಡುವಾಗಳ್,

ನೋಡುತ್ತಿರ್ಪಿನಮಿಾಬಂದತಿಥಿಗತಿಥಿಸತ್ಕಾರಮಂ ನಾಮುಮೋಘಂ
ಮಾಡಲ್ವೇಱ್ಕುಂ ಯಥಾಶಕ್ತಿಯಿನೆನುತೆ ಮಹಾಶ್ಚರ್ಯಮಂ ಕಣ್ಗಳುಂಬಂ ।
ಮಾಡುತ್ತುಂ ದಿವ್ಯವಸ್ತ್ರಾಭರಣಕುಸುಮಗಂಧಂಗಳಂ ಚಕ್ರಿಗಾಗಳ್
ನೀಡಿತ್ತತ್ಯಂತರಾಗೋತ್ಥಿತಕರತಳದಿಂ ತದ್ವನಸ್ತ್ರೀಸಮೂಹಂ ॥ ೯೨

ವ॥ ಆಗಳಾವನದೇವತಾಪ್ರೇರಣೆಯೊಳ್ ಚಕ್ರವರ್ತಿಗೆ ಸಂಗೀತಮಂ ತೋಱುವಂತೆ,

ಅಳಿನಿನದದ ಮದಕೋಕಿಳ
ಕಳನಿನದದ ಜತಿಯೊಳಭಿನಯಂ ನೆಗೞ್ವಿನೆಗಂ ।
ಲಳಿತಮನೇನಾಡಿಸಿದನೊ
ಮಳಯಾನಿಳನರ್ತಕಂ ಲತಾನರ್ತಕಿಯಂ ॥ ೯೩

ಅಂಕುರಪಲ್ಲವಕುಸುಮಾ
ಳಂಕಾರದ ಚೂತಲತಿಕೆ ನರ್ತಕಿವೋಲ್ ತ ।
ನ್ನಂಕುರದಿಂ ಶಾಖೆಯಿನೇ
ನಂಕುರಶಾಖಾಭಿನಯಮನಭಿನಯಿಸಿದುದೋ ॥ ೯೪

ಮುಂಜುಕದ ಮೊಲ್ಪಿನ ಭಂಗಿಯು
ನೆಱವಿನೊಳವೆ ಮಿಗಿಲವರ್ಕಮೆನೆ ಭರತನ ಕ
ಕ್ಕೆಱಕಮನೆ ಪಡೆದು ಚೆಲ್ವಿಂ
ಮೆಱೆಸಿದುವುದ್ಯಾನಲತೆಗಳಂ ವನಲತೆಗಳ್ ೯೪

ವ॥ ಅನ್ನೆಗಂ ಅಲ್ಲಿ ನವಮಾಳಿಕಾಕುಸುಮಸುಕುಮಾರಿಯರ್ ನವಮಾಳಿಕಾಲತೆಗಳುಮಂ, ರಂಭಾಸ್ತಂಭೋಪಮಾನೋರುಯುಗಳೆಯರ್ ಶಾತಕುಂಭರಂಭಾವನಂಗಳುಮಂ, ಲಸಿತಪತ್ತ್ರಗಮನವಿಶೇಷವಿಳಸಿತಲಲಾಟೆಯರ್ ಉತ್ಪಳತಿಳಕತರುಗಳುಮಂ, ಚಂಪಕಮುಕುಳನಾಸಿಕಾನಾಸಾವಂಶೆಯರ್ ಕನಕಕಿಂಕಿಣೀಕಮನೀಯಕುಸುಮಚಂಪಕಮಹೀರುಹಂಗಳುಮಂ, ರಕ್ತಾಶೋಕಪಲ್ಲವಾಧರೆಯರ್ ಅತಿರಕ್ತಪಲ್ಲವಾಶೋಕಾನೋಕಹಂಗಳುಮಂ, ವಿನಿರ್ಜಿತಾಳಿಮಾಲಾವಿಳಾಸಸಾಳಕಾನನೆಯರ್ ಸಾಲಕಾನನಂಗಳುಮಂ, ಕಾಮುಕಾರ್ಮುಕೋಪಮಾನಭ್ರೂಲತಿಕೆಯರ್ ಪ್ರಿಯಂಗುಲತಿಕೆಗಳುಮಂ ನೋಡುತ್ತುಂ, ಕುಸುಮಾಪಚಯಕ್ರೀಡಾವಿಳಾಸದಿಂ ತೊೞಲ್ವಲ್ಲಿ,

ತಳಿರೊಳ್ಗೊಂಬಿನೊಳೊಳ್ಪುಕೋಕಿಳಕುಳಂ ಪೂಗೊಂಬಿನೊಳ್ಪಾಡುತಿ
ರ್ಪಳಿವೃಂದಂ ತುಱುಗಿರ್ದಬಳ್ಳಿಡಿಯ ತೂಗುಂಗೊಂಬಿನೊಳ್ಪಾಯ್ದು ಬಂ
ಡುಳಿಸುತ್ತಿರ್ಪ ಶುಕಾಳಿ ತಮ್ಮ ಬೆಸದಿಂ ತಂತಮ್ಮ ಕಾಲಾಂತರಂ
ಗಳೊಳಿರ್ದಂಗಜತಂತ್ರದಂತೆಸೆವಿನಂ ಚೆಲ್ವಾದುವಿಮ್ಮಾವುಗಳ್ ೯೫

ತೀವಿರ್ದತ್ತು ಮೊದಲ್ಗೊಂಡಲ್ಗೆ ಪಣೆಯುಂ ಮೂಗಯ್ಯ ಮೂಗಯ್ಯೊ ನಿ
ತ್ತಾವಕ್ಕೆಯ್ದೆ ಕವಲ್ಕವಲ್ತು ಪಲವುಂ ಕೊಂಬಾದುವೊಳ್ಗೊಂಬುಗಳ್ ।
ತೀವಿರ್ದತ್ತು ತಳಿರ್ಮೊದಲ್ಪಣೆಕವಲ್ಗೊಂಬೆಂಬುವೀಕೆಂದಳಿ
ರ್ಮಾವಿಂಗಲ್ಲದೆ ಮಾವುಗಳ್ಗೆ ಪೆಱವಕ್ಕಿಂ ತೇಂ ಬೆಡಂಗಕ್ಕುಮೇ ೯೬

ವ॥ ಎಂದು ಆದಂ ಮೆಚ್ಚಿ ಮತ್ತೊಂದು ಪಲ್ಲವಿತಕೋರಕಿತಕುಸುಮಿತಫಲಿತಪರಿಣತಫಲಲಲಿತಸಹಕಾರಭೂರುಹಮನತಿನಿಬಿಡಾಲಿಂಗನಂಗೆಯ್ದು,

ತಳಿರೊಳ್ ನೀನೆ ಬೆಡಂಗನೈ ನನೆಗಳೊಳ್ ನೀಂ ಸೀಱಸ್ನೈ ಪುಷ್ಪಸಂ
ಕುಳದೊಳ್ ನೀನೆ ವಿಳಾಸಿಯೈ ಮಿಡಿಗಳೊಳ್ ನೀಂ ಚೆಲ್ವನೈ ಪಣ್ತಪಂ ।

ಣ್ಗಳನೋವ್ರೋಪೆಱತೇನೊ ನೀನೆ ಭುವನಕ್ಕಾರಾಧ್ಯನೈ ಭೃಂಗಕೋ
ಕಿಳಕೀರಪ್ರಿಯ ಚೂತರಾಜ ತರುಗಳ್ ನಿನ್ನಂತೆ ಚೆನ್ನಂಗಳೇ ॥ ೯೮

ವ॥ ಎಂದದಂ ಪೊಗೞ್ದು,

ರತದೊಳಗಗ್ಗಳಂ ಮುಖರತಂ ಸುರತೋತ್ಸವಕೆಂದು ಕಾಮಿನೀ
ಪ್ರತತಿಗೆ ತೋರ್ಪವೋಲ್ ಮಧುರಸೀತ್ಕೃತನಾದದೊಳುಣ್ಮಿ ಪೊಣ್ಮಿ ಭೂ ।
ಷಿತನಯನೌಪರಿಷ್ಟ ಕರತಂಗಳ ಭೇದದೊಳೊಂದಿದಾಮ್ರಭೂ
ಷಿತಕಮನಾಮ್ರಪಕ್ವಫಳದೊಳ್ ಶುಕಕಾಮಿನಿ ಚೆಲ್ವದೋಱಿದಳ್ ॥ ೯೯

ವ॥ ಎಂದದಂ ಮೆಚ್ಚುತ್ತುಂ,

ವಿರಹಿಗಳಂ ತೆರಳ್ಚಿ ತುಱಿವಲ್ಲಿಗೆ ನೀಂ ನೆರವಾಯ್ತೆಳಕ್ಕೆ ನೀಂ
ಬಿರೆ ಭುವನಂಗಳೊಳ್ ನೆಗೞ್ದಿದೀಮಧುಮಾಸಮುಮಾಬನಕ್ಕೆ ನೀ ।
ನರಸನೆ ಎನ್ನ ರಾಜ್ಯವಿಭವಕ್ಕೆಲೆ ನೀನೆದಲೆಂದು ಬಂದ ಮಾ
ಮರನನೆ ಮೂಱುಸೂೞ್ ಪಿರಿದುಮಟ್ಟಿಱಿನಿಂ ಬಲವಂದನಂಗಜಂ ॥ ೧೦೦

ಪೊಸಮಾವಿನ ಮಿಡಿಯೊಳ್ ಪ
ಚ್ಚೆಸರಮಂ ಮಾಡುವರ್ತಿಯಿಂ ಮತ್ತೊರ್ವಳ್ ।
ಪೊಸದನದ ಬಸನಿ ನಿಜಕರ
ಕಿಸಲಯರುಚಿ ಪಸುರೆಳಸೆಯೆ ಮಿಡಿಯಂ ಕೊಯ್ದಳ್ ॥ ೧೦೧

ಸಿರಿಸದ ಬಾಸಿಗಮಂ ಮಾಂ
ಕರಿಸುವ ನಳತೋಳ್ ಪಿಂಡುಗಂಕಣದ ಸರಂ ।
ಮೊರೆವಳಗಳ ಸರಮುಂ ಚೆ
ಪ್ಪರಿಸುವಿನಂ ಚೆನ್ನೆ ಪೊನ್ನೆಯರಲಂ ಕೊಯ್ದಳ್ ॥ ೧೦೨

ಪೊಸಮುತ್ತಿನ ಲಂಬಣದೊಳ್
ಮುಸುಂಕಿದಂತಿಡಿಯೆ ಪೂತ ಸುರಯಿಯ ಮುಗುಳಂ ।
ಪಸವಟ್ಟಂತೊರ್ವಳ್ ತನ
ಗೆ ಸರಿಗೆಗಂ ಲಂಬಣಕ್ಕಮರ್ತಿಯೆ ಕೊಯ್ದಳ್ ॥ ೧೦೩

ಬಿದಿದ ಮೃದುತಳದ ಕೆಂಪೇಂ
ಪುದಿದುದೊ ಕೆಂದಳಿರನದಱ ನೂಪುರನಿನದಂ ।
ಪುದಿದುದೊ ಮೊರೆವಳಿಗಳನಿನಿ
ಸಿದಶೋಕೆಯ ತಳಿರನೊರ್ವಳಟ್ಟಿಯೆ ತ್ರಿಜುದಳ್ ॥ ೧೦೪

ಎಳಮಾವನದೊಂದೆಳಲತೆ
ಬಳಸಲ್ ಬಗೆದಪ್ಪುದೆಂಬಿನಂ ನಳತೋಳಂ ।
ಸೆಳೆಗೊಂಬಂ ತೆಗೆದೊರ್ವಳ್
ವಿಳಾಸವತಿ ತಿಱಿದಳಾಮ್ರನವಕಿಸಲಯಮಂ ॥ ೧೦೫

ಪೊಗಡದ ಪೊಸಪೂವಿನ ತುಡು
ಗೆಗಳ್ಗಮಧರದ ಪೊದಟ್ಟಿ ತಣ್ಗಂಪಿಂಗಂ ।
ಮೃಗನಯನೆಯರನೆ ಬಿಡದೋ
ಲಗಿಸಿದುವಳಿನಿಕರಮವರನಾರೋಲಗಿಸರ್ ॥ ೧೦೬

ವ॥ ಮತ್ತಮೊರ್ವಳ್ ಮಲ್ಲಿಕಾವಲ್ಲರೀಸಮುಲ್ಲಸಿತಮುಕುಳಂಗಳನಲಂ
ಪಿನೊಳಾಯ್ದು ಕೊಯ್ದು ಮಲ್ಲಿಕಾಮಾಲಭಾರಿಣಿ,

ಮೊಗಮುಗಿಸಲ್ಕೆ ಮಂದಯಿಸಿ ದಿಕ್ತಟಮಂ ಬೞಸಲ್ಕೆ ಪೀರ್ವ ತುಂ
ಬಿಗೆ ತಣಿಪಲ್ಕೆ ನಮ್ಮ ಜಸಮಂ ಬೆಳಗಲ್ಕಿವೆ ಸಾಲ್ಗುಮೆಂದು ತ ।
ಳ್ತಗಲದ ಲಂಪಿನಿಂ ಮಧು ಮನೋಭವದಿರ್ವರುಮೆಟ್ಟಿ ಪಟ್ಟ ಮ
ಲ್ಲಿಗೆಗೆ ಬಸಂತದೊಳ್ ಬಯಸಿ ಮಾಡಿದರರೆಲ್ಲ ಪಟ್ಟಬಂಧಮಂ ೧೦೭

ಭುವನದೊಳಂತು ನಿನ್ನೆಸೆವ ಗೋಸನೆ ಸಂದುದು ಪಟ್ಟಬಂಧದು
ತ್ಸವಮಿದು ದೇವ ಮಲ್ಲಿಗೆ ಪಸುರ್ನೆನೆದೋಱಿದುದೆಂದು ನಾಡೆ ಬಿ ।
ನ್ನವಿಸಲೊಡಂ ವಸಂತಕನದೇಂ ಗುಡಿ ತೋರಣಶೋಭೆ ಪೊಯ್ವ ಬ
ದ್ದವಣಮಳುಂಬಮಾದುದೊ ನಿಕೇತನದಲ್ಲಿ ಮನೋಜರಾಜನಾ ॥ ೧೦೮

॥ ಅಕ್ಕರ ॥

ಸೊಡರ ಬೆಳಗಿನೊಳ್ ಕೊರಗುವ ಜಾಜೆಯಂ ತುಂಬಿಯೊಳ್ಪಗೆಗೊಂಡ
ಸಂಪಿಗೆಯಂ
ಮುಡಿಯೆ ಸೊಗೆಯಿಸಿದದಿಮುರ್ತ್ತಿಯಲರಂ ಮಸಿಯೊಳೆ ಸವನಾದಗೊ
ಜ್ಜಗೆಯಂ ।

ನಡಿಯಲಕ್ಕುಮೆ ಪೂಗಳಲೆಕ್ಕಮನೆಂದೆಯ್ದೆ ಕಾಮನೊಡೊಡ್ಡೋಲಗದೊಳ್
ಮುಡಿಗೆ ಯಿಕ್ಕಿಯುಮಂ ಕೈಯನೆತ್ತಿ ಪೊಗಳ್ದಂ ತಣಿಯನೆ ಮದನನಂ
ಮಲ್ಲಿಗೆಯಂ ‖ ೧೧೯

ಪರಿಯೆ ಪಸುರ್ಪು ಬೆಳ್ಪಡರೆ ಬಲ್ಮುಗುಳೊಳ್ ಪೊರೆದೋಱೆ ತಂಬೆಲ
ರ್ಪೊರೆವೊರೆಯಂ ಸಡಿಲ್ಚೆ ನಡುಪೊಂಗಿರೆ ಮಲ್ಲಿಗೆಗಳ್ ವಸಂತದೊಳ್ ।
ಬಿರಿದೊಡೆ ನಲ್ಲರಂ ನೆನೆದು ನಲ್ಲರ ಮೆಲ್ಲೆರ್ದೆಗಳ್ ನಿರಂತರಂ
ಬಿರಿವುವದೆಂತೊ ಮಲ್ಲಿಗೆಗೆ ನಲ್ಲರ ಮೆಲ್ಲೆರ್ದೆ ವೇಳೆಗೊಂಡುದೋ ೧೨೦

ವ॥ ಎನೆ ಮತ್ತೊರ್ವಳ್ ಮಾಳತೀನವಮಾಳಿಕಾಕುಸುಮಮುಕುಮಾರ
ರತಿಗೆ ಮುಡಿಯಲ್ಕೆ ಮದನಂ
ಗೆ ತುಱುಂಬಲ್ಕಿರ್ದುದೆಂದು ಮಧು ಸುಟಿವ ಮಧು ।
ವ್ರತಮುಮನಲೆದಪನೆಂಬೀ
ಪ್ರತೀತಿಗಿರುವಂತಿಯಂತೆ ನೋಂತಲರೊಳವೇ ‖ ೧೨೧

ವ॥ ಎನೆ ಮತ್ತೊರ್ವಳ್ ಮಾಳತೀಶ್ಯಾಮಳಾಂಗಿ,

ಇದಿರೊಳ್ ನನೆದೋಱೆ ವಸಂ
ತದೂತಿಯೆನೆ ನೆಗಲ್ದ ಮಾಧವೀಲತೆಯೆನೆ ಸಂ ।
ದದಿಮರ್ಗುತ್ತೆಯ ಪೂಗೊಂಚಲ
ಪುದುವಿನೊಳಱಗಿದ ಮದಾಳಿಗಳ್ ಮೆಱೆದಪುವೇ ‖ ೧೨೨

ವ॥ ಎನೆ ಮತ್ತೊರ್ವಳ್ ಮಾಳತೀಶ್ಯಾಮಳಕೋಮಳಾಂಗಿ,

ಪೊಸತಲರ್ದ ಪದದೊಳುಣ್ಮುವ
ಪೊಸಗಂಪಂ ಪಡೆದು ಪೊತ್ತುಱೊಳ್ ಜನಮಂ ಸೋ ।
ಲಿಸುಗುಮನಂಗಾಮೃತಸಾ
ಖ್ಯಸಾರಮಂ ಜಾದಿಯಲ್ಲದೇಂ ಪಡೆದಪುದೇ ‖ ೧೨೩

ವ॥ ಎನೆ ಮತ್ತೊರ್ವಳ್ ಕುಂದಕುಟ್ಮಲರದನೆ,

ಫುಲ್ಲಶರಂಗಿಸುವೆಡೆಗಿವೆ
ನಲ್ಲಂಬುಗಳೆನಿಸಿ ತುಱುಗಿ ಮಲರ್ದಲರ್ದೆಸೆವೀ ।

ನೊಳ್ಳೆಯುವೊಲಿಸಿದ ನಲ್ಲರ
ಲಳ್ಳೆಯುವೂರಾರ ಮನಮುಮಂ ಸೋಲಿಸವೇ ॥ ೧೧೪

ವ॥ ಎನೆ ಮತ್ತೊರ್ವಳ್ ಸುರಭಿಪಾಟಳೀಪಾಟಳವಕನವಸನೆ,

ಕಂಪುಗೊಳಲ್ಕಸಿರ್ದುಸಿಲಿಸಿ
ಸಂ ಪ್ರೊಱಮಟ್ಟಿಸಳ್ ತುಡಿಯುನೆಯ್ದಿಲೊಡಂ ಮು ।
ನ್ನಂ ಪಳಿಯುವಪ್ಪ ಪೂಗಳ್
ಕಂಪಿನೊಳೇಂ ಪೊಗೞ ಪಾಟಳೀ ಪರಿಮಳಮಂ ೧೧೫

ವ॥ ಎನೆ ಮತ್ತೊರ್ವಳ್ ಅಭಿನವಸುರಭಿಕುಸುಮಸಾರಭೆ,

ಎಸಳ್ಗಳನೆಯ್ದೆ ಕಂಡರಿಸಿ ಮುತ್ತಿನೊಳಲ್ಲಿ ಸುವರ್ಣಚೂರ್ಣಮಂ
ಪಸರಿಸಿ ಕೇಸರಾಕೃತಿಯೊಳಲ್ಲಿಗೆ ಕರ್ಣಿಕೆಯುಂದಮಾಗೆ ಕೀ।
ಲಿಸಿ ಪೊಸತಪ್ಪಮಾಣಿಕದ ನುಣ್ಬರಲಂ ಮಧು ಮನ್ಮಥಂಗೆ ಬ
ಣ್ಣಿಸಿ ಸಮೆದಂತೆ ತೋಱುವುದು ಪೂಗಳೊಳೇಂ ಸುರಹೊನ್ನೆ ಚೆನ್ನನೋ ॥

ವ॥ ಎನೆ ಮತ್ತೊರ್ವಳ್ ಕರ್ಣಿಕಾರಕುಸುಮಸುಕುಮಾರವರ್ಣೆ,

ಪರಿಣಯನೋತ್ಸವಂ ರತಿಗನಂಗನೊಳಾಗೆ ವಸಂತಕಂಚುಕಿಯಿರ್
ನೆರೆದು ದಿಗಂಗನಾ ಸಮಿತಿಗಳ್ಕಱನೊಳ್ ಕುಡುವಲ್ಲಿ ಕೇಸರಂ ।
ಬೆರಸಿದ ಪೊನ್ನಬಾಯಿನದ ಬಟ್ಟಲಿವೆಂಬಿನಮಾಪ್ರಕೇಸರಂ
ಬೆರಸಿದ ಚೆಲ್ವು ತಳ್ತಿಸಳದೇನೆಸೆದಿರ್ದುದೊ ಕರ್ಣಿಕಾರದಾ ೧೧೭

ವ॥ ಎನೆ ಮತ್ತೊರ್ವಳ್ ಚಂಪಕಕುಸುಮಗಂಧಿ,

ಪಡೆದೊಡೆ ಕಂಪಂ ಬಣ್ಣಂ
ಬಡೆಯುವು ಬಣ್ಣಮನೆ ಪಡೆದುವಪ್ಪೊಡೆ ಕಂಪಂ ।
ಪಡೆಯುವುಱಿದಲರ್ಗಳೆರಡುಮ
ನೊಡೆವೆಳೆದೀಚಂಪಕಕ್ಕೆ ಪೂಗಳ್ ದೊರೆಯೇ ॥ ೧೧೮

ಗಟ್ಟಿನೆ ಕೊಳೆ ಕಡುಗಂಪಿನೊ
ಳಟ್ಟಿಮೆ ಗೊಳಗಪ್ಪೆವೆಂದು ಮಧುಪಂಗಳ್ ತಂ ।

ಮೞ್ಕಿವೆಯಿ ಚೌತವಾಗಿರೆ
ನೀಟ್ಟಿರಿಸಿದುವುಂತೆ ಚಂಪಕಕ್ಕೆಬಿಗದುವೇ ॥ ೧೧೯

ವ॥ ಎನೆ ಮತ್ತೊರ್ವಳ್ ಕೇತಕೀದಳಧವಳಲೋಚನೆ, ಭುವನದೊಳೆಮ್ಮ ಮುಟ್ಟಿದಲರಾವುವೆಬಿಂಕೆಯು ಗಾಳಿ ಮುಟ್ಟಿ ಕಂದುವುವೆಸಳೊರ್ಮೆ ಪೀರಲೊಡಮಾಗಳೆ ನೋರ್ವ್ವು ಕಂಪು ಸೋಂಕೆ ಕಂದವು ದಳಮೆಯ್ದೆ ಪೀರೆ ತವದುಣ್ಮುವ ಸೌರಭವೆಂದು ಪೀರ್ದು ಪೀರ್ದವಚಲದೇಂ ತೆಱಂದಿರಿದು ಪೊಯ್ದವೊ ಕೇತಕಿಯೊಳ್ ಮದಾಳಿಗಳ್ ॥

ಎಸಳಂ ಮುಟ್ಟಲೊಡಂ ತ
ನ್ನ ಸೌರಭಂಗೆಟ್ಟು ನೆಗೆಟ್ಟ ಕತ್ತುರಿವಣ್ಣಂ ।
ಮುಸಿಗಮುಣೆಯುಪ್ಪದೆನೆ ಬ
ಣ್ಣಿಸುವಂ ಕೇದಗೆಯು ಕಂಪನೇವಣ್ಣಿಸುವಂ ॥ ೧೨೧

ವ॥ ಎನೆ ಮತ್ತೊರ್ವಳ್ ಸಿಂಧುವಾರಸುರಭಿನಿಶ್ವಾಸೆ,

ಅಲರ್ದರೆಗಳಗೆಯು ಜಾದಿಯು
ಮಲೆಪುಂ ಮಲ್ಲಿಗೆಯು ಪೊಂಕಮುಂ ಟಚಿಕವನಾ ।
ರ್ತಲೆಯೊಳ್ ತಾಳ್ದವರೆಂದೇ
ನಲೆದುದೊ ಸಿಂದುರವೆ ತವದ ತನಿಗಂಪಿಂದಂ ॥ ೧೨೨

ವ॥ ಎನೆ ಮತ್ತೊರ್ವಳ್ ನೀಲೋತ್ಪಳದಳನಯನೆ,

ಉನ್ನತವಾಗಿರೆ ನೋಕ್ಕಿ
ರ್ದುನ್ನತಕುಚೆಯರ ವಿಳೋಚನಾರುಣರುಚಿಯಂ ।
ತನ್ನೆಸಳ್ಗಳನನುಕರಿಸುವ
ಚೆನ್ನೈದಿಲ ಕಂಪನೆಯ್ದಲಾರ್ಪುವೆ ಪೂಗಳ್ ॥ ೧೨೩

ವ॥ ಎನೆ ಮತ್ತೊರ್ವಳ್ ವಕುಳಮುಕುಳಾಸವವದನಪರಿಮಳೆ,

ಮುಕ್ಕುಳಿಸಿಯುಗುಟ್ಟಿ ಮಧುವಿಂ
ಮಿಕ್ಕೆಸೆವಾಮೋದಮಿದಱ ತಣ್ಗಂಪಿನೊಳೊಳ ।

ಪೊಕ್ಕುದೆನೆ ಮಧುವ ಕಂಪಂ
ಮುಕ್ಕುಳಿಸಿದ ವಕುಳಮೊರುವಮಂ ನೋಕ್ಕಿಸದೇ ೧೩೪

ವ॥ ಎನೆ ಮತ್ತೊರ್ವಳ್ ಶತಪತ್ರಕುಬ್ಜಕುಸುಮಮಾಲಾಕೋಮಳೆ,

ಮಗಮಗಿಸುವ ಕಂಪೆಸಳೊಳ್
ತಗುಳ್ದಂ ಮೆಲ್ಪೆಸೆಯೆ ಮನಮುನಳಿಗಳ ಬಳಗಂ।
ಜಗದ ಮನದೊಡನೆ ಸೇವಂ
ತಿಗೆಗಂ ಗೊಜ್ಜಗೆಗಮಲ್ಲದೇನೆಱಗುಗುಮೋ॥ ೧೩೫

ವ॥ ಅಂತುಮಲ್ಲದೆ,

ಉದಿರ್ದೊಪ್ಪುವುದೆಯ್ದೆ ತುಱುಂ
ಬಿದೊಡೊಪ್ಪುವುದೆಸಳ ಮೆಲ್ಪಿನಿಂ ದೊಪ್ಪುವುದು।
ಣ್ಮಿದ ತಣ್ಗಂಪಿಂದೊಪ್ಪುವು
ದದಱಿಂದಲರೊಳಗೆ ಗೊಜ್ಜ ಗೊಜ್ಜಗೆಯೆ ಪೊಲಂ॥ ೧೩೬

ವ॥ ಎನೆ ಮತ್ತೊರ್ವಳ್ ಕಸ್ತೂರಿಕಾಕದಂಬಚುಂಬಿತಕಬರೀಭಾರೆ,

ಪರಿಮಳತಸೌಂದರಂ ಬಂ
ಧುರಗಂಧಂ ಮದನರಾಗವರ್ಧನಕರಮಿಾ।
ಮರುವಂ ಕರ್ಬೂಳಮುಮಿರೆ
ಮರುಳಲ್ಲವೆ ಕುಸುಮನಿಚಯದೊಳ್ ಪಾಯ್ವಳಿಗಳ್॥ ೧೩೭

ವ॥ ಎಂದು ಭಿನ್ನರುಚಿಗಳಾಗಿ ತಂತಮ್ಮ ಮೆಚ್ಚಿದಿಚ್ಚೆಯ ಪೂಗಳನೆ ಪೊಗಪೆ ಮತ್ತೊರ್ವಳ್ ಕುಂಕುಮಪಂಕಾಂಕಿತಕದಂಬಚುಂಬಿತಮೃಗಾಂಕವಕ್ತ್ರೆ,

ಲಲನಾಮುಖೇಂದುಲಾವ
ಣ್ಯಾಲೀಲೆಯಂ ಪಡೆವ ಬಣ್ಣದಿಂ ಕಂಪಿಂದೇ।
ನಲೆದುದೊ ಬಯ್ತುಗದಂತಿರೆ
ಲೆತಗೇಱುವ ಕುಸುಮನಿಚಯಮಂ ಕಾಶ್ಮೀರಂ॥ ೧೩೮

ವ॥ ಎಂದು ಬಗೆಗೆವಂದ ಪೂಗಳೊಳ್ ಪೂದುಡುಗೆಯುಂ ಮಾಡಿ ವಸಂತಕಾಂತೆಯುರಂತೆ ನೆಱೆಯೆ ಕಯ್ಗೆಯ್ದಾಗಳ್,

ಬನದ ತಳಿರ್ ಕಳಿಕೆ ಮುಗುಳ್
ನನೆ ಬಿರಿಮುಗುಳಲರ ಗೊಂಚಲೆಂಬಿವು ವನಜಾ ।
ನನೆಯರ ಪೂದುಡುಗೆಗೆ ಮು
ಟ್ಟನಾದುವೇಂ ಪೆಂಪೊ ಭರತನಂತಃಪುರದಾ ॥ ೧೨೯

ವ॥ ಆಗಳಂತಃಪುರಕಾಂತಾಪ್ರಸಾಧನಕುಸುಮಾಮೋದಮತಿಪ್ರಮೋದಮಂ ಪಡೆಯೆ,

ಅವಚಱದೊಂದೆ ಪದ್ಮದೊಳೆ ನೇಲ್ದೊಳಗಾದಳಿಗೆಮ್ಮ ವೃತ್ತಿ ಸಂ
ಭವಿಸದು ಕಲ್ಪುದಲ್ತೆ ವಿಟರಿಂ ವಿಟವೃತ್ತಮನೆಮ್ಮೊಳಲ್ಲಿ ಗಾ ।
ಮೊವಜರೆಮೆಂಬವೋಲ್ಮೊರೆವ ಮೆಲ್ಪೆಸೆಯುತ್ತಿರೆ ಸೂಱಸೂಱದೇಂ
ಸವಿದುವೊ ಬಣ್ಣವಣ್ಣಿಗೆಯ ಪೂಗಳ ಸಾರಭಮಂ ಮದಾಳಿಗಳ್ ॥ ೧೩೦

ವ॥ ಆಗಳಾಕೆಗಳಲಕ್ತಾರಕ್ತಮಣಿನೂಪುರಕ್ವಣಿತಸುಭಗವಾಮಪಾದಪ್ರಹರಣದೊಳಶೋಕತರುಗಳಂ ಕುಸುಮಿಸಿಯುಂ, ವದನಸರಸಿಜಾಸವಸೇಕದೊಳ್ ವಕುಳಕುಜಂಗಳನಲರ್ಚಿಯುಂ, ಉನ್ನತಕುಚತಟಾಘಾತದೊಳ್ ಕುರವಕಂಗಳಂ ಪುಷ್ಪಿತಂಗಳಂ ಮಾಡಿಯುಂ, ಕ್ಷೀರಗಂಡೂಷಸೇಚನದೊಳ್ ಚಂಪಕವಿಟಪಿಗಳನಲರ್ಚಿಯುಂ, ಆಯತಧವಳಾಪಾಂಗಸಂಗದೊಳ್ ತಿಳಕಭೂರುಹಂಗಳನಭಿನವಲತಾಂತಂಗಳ್ ಮಾಡಿಯುಂ ಇಂತು ನಾನಾವಿಧಕ್ರೀಡೆಯಿಂದುಪವನಕ್ರೀಡೆಯಂ ನಿರ್ವರ್ತಿಸಿ,

ಇದು ಕಡುನಾಣ ಪುತ್ತುವಲಮಿಂ ನೆನೆಯುತ್ತಿರಿಮೆಮ್ಮನೆಂಬುದಾ
ವುದು ಗುಣಮೆಮ್ಮೊಳಾಗೆ ನೆನೆದಪ್ಪಿರಶೋಕಮೆ ವಾಮಪಾದದಿಂ ।
ದೊದೆದುದೊ ಕೇಸರದ್ರುಮಮೆ ನಿನ್ನ ಮನಾನನಸಿಂಧುವಿಂದೆ ಪೂ
ಬ್ದಿದೊ ಕೃತಮಾವುದಿಂ ಮಱೆವುದೆಮ್ಮ ಮದೋತ್ಕಟಚೇಷ್ಟಿತಂಗಳಂ ॥

ವ॥ ಎಂದಶೋಕವಕುಳಪಾದಪಂಗಳಂ ಬೀೞ್ಕೊಂಡು,

ನನೆಗಳ ಗೊಂಚಲಂ ತಳಿರ ತೊಂಗಲನಾಡುವ ಬೆಳ್ಪಳಪ್ಪ ಕೊಂ
ಬಿನ ಮಿಡಿಯುಂ ತೆರಳ್ ತೆಗೆದೋವದೆ ಕಾಯದೆ ಕೂರಕರ್ಮದಿಂ ।

ಸೊನೆಸುರಿವನ್ನೆಗಂ ಪೞಿಯಿದು ನೋಯಿಸಿ ಕಾಡಿದೆನಿನ್ನದೊಂದುಮಂ
ನೆನೆಯದೆ ನೀನುಮಾಮುಮೊಡನಿರ್ದಿರವಂ ನೆನೆ ಬಾಳಚೂತಮೇ ೧೩೨

ವ॥ ಎಂದು ಮಾಕಂದಮಹೀರುಹಮನಪ್ಪೈಸಿಯುಂ,

ಭಂಗಿಗಳೊಳಮ್ಮೊಳಾದೀ
ಸಂಗಡಮಂ ನೀಮೆ ಮನದೆಗೊಂಡೆಮ್ಮ ಕಿಸುರ್ ।
ಪಿಂಗುಗಗಲ್ವೆಡೆಯೊಳ್ ಕೆಳೆ
ಸಂಗಳಿಸುಗೆ ನಿಮಗಮೆಮಗಮಿಂ ಲತೆಗಳಿರಾ ॥ ೧೩೩

ವ॥ ಎಂದು ವನಲತೆಗಳನನುನಯಿಸಿ,

ಪದೆದುತ್ತಂಸವತಂಸಶೋಭೆಗೆ ಭವತ್ಪಾಳಪ್ರವಾಳೋಲ್ಲಸ
ನ್ಮೃದುಪುಷ್ಪಸ್ತಬಕಂಗಳಂ ಪೞಿದಿವಿನ್ನಾದೋಷಮಂ ಕೊಳ್ಳದಿ ।
ರ್ಪುದು ಕೇಳೀವನಪಾದಪಂಗಳಿರ ಚಿತ್ತಂಗೊಂಡು ಬೇಡ್ಕೊಂಡು ರಾ
ಗದೆ ನಿಮ್ಮಂ ಬಲಗೊಂಡು ಪೋಪಗುಣಮಂ ಕೊಳ್ಳಿಂ ಮನಃಪ್ರೀತಿಯಿಂ ॥

ವ॥ ಎಂದು ವನತರುಗಳನೊಡಂಬಡಿಸಿ,

ಬನದ ಪಡಿಯಱನನಂಗಂ
ನಿನಗಿತ್ತೊಡೆ ಪುಗಲಿಮೆಂಬುದೇಂ ದೋಷಮೆ ಚೀ ।
ನೆನೆಯೆಮದಂ ನಿನ್ನಿಂಚರ
ಮನೆ ಮನದೊಳ್ ನೆನೆವೆವಾಗಳುಂ ಪರಭೃತಮೇ ॥ ೧೩೫

ಇರು ಮೌನವ್ರತಮಂ ತಳೆ
ದರಣ್ಯದೊಳಗಾರ್ಗೆ ಮೆಱೆದಪೈ ನಿನ್ನೆಸೆವಿಂ ।
ಚರಮಂ ಕಳಕೋಕಿಳ ಕಿ
ನ್ನರವೀಣಾಕ್ವಣಿತದಿಂಪನನುಕರಿಸುವುದಂ ॥ ೧೩೬

ವ॥ ಎಂದು ಕೋಕಿಳಕುಳಮಂ ವಿಸರ್ಜಿಸಿ,

ಪೊಸತಲ್ತು ನಿನಗೆ ಪೂವಿನ
ಪೊಸಗಂಪೀಬನದೊಳೀಮೃಗೋದ್ಭವಗಂಧಂ ।

ಪೊಸತದನೋಲಗಿಸಿದಪಿರು
ಕುಸುಮಾಸವರಸದೆ ತಣಿಪು ಸೀಸಳಿಕುಳಮೇ ೧೩೭

ವ॥ ಎಂದು ಮಧುಕರನಿಕರಮಂ ಬೆಸಸಿ,

ಮನದ ಪೊಡಪ್ಪುಗುಂದದೆ ಲತಾಲಯದೊಳ್ ಸಿಹಾರದಲ್ಲಿ ನಂ
ದನವನವಿಭ್ರಮಭ್ರಮಣದಲ್ಲಿ ಸರೋವರದೀರ್ಘಿಕಾಂಬುವಿಂ।
ಜ್ಜನಯುತದೀರ್ಘಿಯಲ್ಲಿ ಬರ್ಪೊಂದುಗುವಿಾಗಳನಿಪ್ಪ ಪೊಂಗು ಗೆಂ
ಟನಿತೆಪೆಮಂ ತಗುಳ್ದು ಬರಲಾರ್ಪಿರೆ ನಿಮ್ಮ ವಿಳಾಸಯಾನದಿಂ ॥ ೧೩೮

ವ॥ ಎಂದತಿಲಲಿತಗಮನಸಮುಚ್ಚಲಿತರಶನಾಕಳಾಪನೂಪುರಕಿಂಕಿಣಿ
ಕ್ವಣಿತಾನುಸಾರಿಯಾಗಿ ಬರ್ಪ ರಾಜಹಂಸಮಂಡಳಮಂ ಮಗುಳ್ಚಿ ಬ
ರ್ಪಾಗಳ್,

ಪೊಳೆಯುತ್ತಿರ್ಪ ಕಟಾಕ್ಷವಿಕ್ಷೇಪದ ಪೊಳಪುಗಳಿಂದಾನನಶ್ರೀವಿಲಾಸಂ
ಗಳನಂಗೋಪಾಂಗದೊಳ್ ಸಂಗಳಿಸುವಪಲವುಂಭಂಗಿಯುಂಕೂಡೆನೀಲೋ।
ತ್ಪಲಷಂಡಂ ಪದ್ಮಷಂಡಂ ಲಲಿತವನಲತಾಷಂಡಮುಂ ತಂಡತಂಡಂ
ಗಳನೀಬಂದಪ್ಪುದೆಂಬಂತೆಸೆದುದು ಭರತಾಂತಃಪುರಸ್ತ್ರೀಸಮೂಹಂ ॥ ೧೩೯

ವ॥ ಅಂತು ವನವಿಹಾರಾನಂತರಂ ಭರತೇಶ್ವರ ಚಕ್ರವರ್ತಿ ವನಕುಸು
ಮಪಲ್ಲವೋಪಶೋಭಿತಲೀಲಾಪ್ರಸಾಧನಂ ಮದಾಂಧಸಿಂಧುರಲೀಲೆಯಿಂದ
ಮಂತಃಪುರಕರಿಣೀಗಣಂ ಬೆರಸು ಗಂಗಾಜಲಕ್ರೀಡಾಸಕ್ತಚಿತ್ತನಾಗಿ ತತ್ಪ
ರಿಸರಪ್ರದೇಶಮನೆಯ್ದೆವಂದು ಚೆಂಚತ್ಪಂಚರತ್ನಂಗಳೊಳಂ ಕೆದಱಿದ ಕಾ
ಳಾಗರುಕಾಶ್ಮೀರಕಸ್ತೂರಿಕರ್ಪೂರಯಕ್ಷಕರ್ದಮಕ್ಷೋದದೊಳಂ ನದೀತ
ರಂಗಂಗಳಂ ವಿಚಿತ್ರವರ್ಣಂಗಳಂ ಮಾಡಿ,

ಯುವತಿಜನಶಂಕೆಯುಂ ಮು
ನ್ನವಯದೊಳ್ ಪೊಕ್ಕು ಕಳೆದು ಸುರಸರಿದಂಭಃ।
ಪ್ಲವದೊಳ್ ಚಕ್ರಧರಂ ದು
ಗ್ಧವಾರ್ಧಿಯೊಳ್ ನಿಂದ ಕನಕಗಿರಿಯೆನೆ ಪೊಲ್ತಂ ॥ ೧೪೦

ವ॥ ಅಂತು ಚಕ್ರಧರನ ಕ್ರೀಡಾಪ್ರಾರಂಭಮಂ ಕಂಡು ನೀರಾಟಕ್ಕೆ ತ
ಕ್ಕ ಪಸದನಂ ಗೊಂಡು ತಂಡತಂಡದಿಂ ಪುಗುವಾಗಳ್,

ಕಳಹಂಸೀಲೀಲೆ ನೀಲೋತ್ಪಳರುಚಿ ಕನಕಾಂಭೋಜಿನೀಲಕ್ಷ್ಮಿ ಭೃಂಗೀ
ವಳಯಂ ಶ್ರೀಚಕ್ರವಾಕದ್ವಯವಿಳಸನಮಂತಃಪುರಸ್ತ್ರೀಸಹಸ್ರಂ ।
ಗಳ ಮೆಯ್ಯೊಳ್ ತಾನೆ ತಳ್ತೊಪ್ಪಿದುದು ಪೆಸರ್ಗೊಳ್ವೊಗ್ಗರಾರೆಂಬಿನಂ ನಿ
ರ್ಮಳಹಾರಂ ಸ್ವಚ್ಛನೀರಂ ಸೊಗಯಿಸಿತದು ಬೇಱೊಂದು ಗಂಗಾಪ್ರವಾಹಂ ॥

ಜಳಕೇಳಿಯೊಳಧಿಪನನೆರ್ದೆ
ಗೊಳಿಸಿದುವಂತಃಪುರೀಜನಂಗಳ ಲೀಲಾ ।
ಕಿಳಕಿಂಚಿತಲಲಿತವಿಹೃ
ದ್ವಿಳಾಸವಿಚ್ಛಿತ್ತಿ ವಿಭ್ರಮಾದಿ ಗುಣಂಗಳ್ ॥ ೧೪೦

ಸರಸಿಜನೀಲೋತ್ಪಲಕರಿ
ಕರಹಂಸೀವದನರೂಪದಿಂ ನೆಱೆದಂತಃ ।
ಪುರಕಾಂತಾಕರತಳದೊಳ್
ಕರಮೆಸೆದುವು ಕನಕಶೃಂಗಕಂಗಳ್ ಪಲವುಂ ॥ ೧೪೧

ಜಳಕೇಳಿ ನಿಮಿರ್ಗೆ ಭರತನ
ಲಳಿತಾಂತಃಪುರದೊಳೆಂಬ ತನ್ನೞ್ಕಱೊಳಾ ।
ಜಳದೇವಿ ಬೆಸಸೆ ಗಂಗಾ
ಜಳಮಾಯ್ತು ನಿತಂಬಿನೀ ನಿತಂಬದ್ವಯಸಂ ॥ ೧೪೪

ನೆವವಧುವ ಶಂಕೆಯಂ ಕಳೆ
ವ ವಿದಗ್ಧವಿಟಂಬೊಲಲೆವ ತೆರೆಗಳ್ ಮೆಲ್ಲಂ ।
ಬವರಿಸಿ ಸೋಂಕುತ್ತುಂ ಕಳೆ
ದುವು ಘನಕುಚಕಳಶಕುಂಕುಮಸ್ಥಾಸಕಮಂ ॥ ೧೪೫

ಅಲಘುನಿತಂಬದ ಪೊಯ್ಲೊಳ್
ನೆಲೆಮೊಲೆಯುಳ್ಳೇಱಿನೊಳ್ ತರಂಗಂಗಳ್ ತೂ ।
ಳ್ದಲಱುಗುಮವೞಳ್ಳೇಱಿನೊ
ಳಲಱುಗುಮೆರ್ದೆ ತೆರೆಗಳಳೞಿ ತೊಳ್ವುದು ಪಿಱಿದೇ ॥ ೧೪೬

ಮಂದರ ಪರ್ವತಮಂ ಸುರ
ಸೌಂದರಿಯರ್ ದುಗ್ಧಜಳದೆ ತಳ್ವಂತೆವೊಲಾ ।

ನಂದೋದಯದಂತಃಪುರ
ಸೌಂದರಿಯರ್ ತಳಿದರಾದಿದೇವಾತ್ಮಜನಂ ॥ ೧೪೭

ವ॥ ಆಗಳಮೃತಕಿರಣಮೃತಜಲಂಗಳಿಂ ಕುಮುದಿನಿಗಳಂ ತಳಿವಂತೆ,

ಕಳಿಕಾಸಂದೋಹಮಂ ಪೊಣ್ಮುವ ಪುಳಕಚಯಮಂ ಪಲ್ಲವೋಲ್ಲಾಸಮಂ ಕೆಂ
ದಳಮೆತ್ತಂ ಪೊದಳ್ದಿರ್ಪಲರ್ಗಳನಲರ್ಗಣ್ಬೋಲ್ತು ಕೈಮಿಕ್ಕು ಚೆಲ್ವಿಂ ।
ಪೊಳೆಯುತ್ತಿರ್ಪನ್ನೆಗಂ ಕುಂಕುಮದ ಕದಡಿನೊಳ್ ಕೆಂಕಮಾಗಿರ್ದ ನೀರಂ
ತಳಿದಂ ಶುದ್ಧಾಂತಕಾಂತಾಲತಿಕೆಗಳನತಿಪ್ರೀತಿಯಿಂ ರಾಜರಾಜಂ ॥ ೧೪೮

ಸುರ್ಕುಳಿದುರುಳಿಗುರುಳ್ ನಸು
ಸುರ್ಕಿದ ಕುಚಚೂಚುಕಂ ಬೆಳರ್ತಧರಂ ನೀರ್ ।
ಪೊರ್ಕುಟಿಯೊಳ್ ಜೋಲ್ದುಳ್ಳುಡೆ
ಸೌರ್ಕೆಯೊಳೇಂ ನೃಪನಮನಮನಳವಡಿಸಿದುದೋ ॥ ೧೪೯

ಕಳೆದುದು ಪತ್ರಭಂಗದ ಬೆಡಂಗುಗಳಂ ಕುಟಿಲಾಲಕಂಗಳಂ
ಬಳೆಯಿಸಿದತ್ತು ಕಣ್ಗೆಸೆವ ರಾಗಮನೆಯ್ದಿಸಿ ಕೇಶಹಸ್ತಮಂ ।
ಚಳಯಿಸಿದತ್ತು ಮೆಯ್ಗೆ ಪುಳಕೋದಯಮಂ ಪಡೆದತ್ತು ತಲ್ಲತಾ
ಲಳಿತೆಯರ್ಗಿತ್ತುದಿಂತು ಜಲಕೇಳಿ ಮನೋಭವಕೇಳಿಲೀಲೆಯಂ ॥ ೧೫೦

ಅಂತು ಬೆಳರ್ತಧರಂ ಕ
ಣ್ಣಿಂ ತುಳ್ಕುವ ಕೆಂಪು ಸರದ ನಡುಕಂ ಮಿಗೆ ತ ।
ನ್ನಂತಃಪುರಲಲನೆಯರ್ಗೆ ಲ
ತಾಂತದ ವಿಭವಮನೆ ಮಾಡಿ ತಾಂ ಪೊಱಮಟ್ಟಂ ॥ ೧೫೧

ಮನಸಿಜನೃಪಲೀಲಾಲಾಂಛನಂ ಸ್ವಸ್ತಿಕಂ ಸ್ತ್ರೀ
ಜನದೊಳೆಸೆದು ನಿಂದತ್ತುತ್ತರೀಯಾಂತರೀಯಂ ।
ತೊನೆಯೆ ತೊಲಗಿ ನಿಂದಿರ್ದಲ್ಲಿ ತಂದಿತ್ತುದುಚ್ಚ
ಸ್ತನದೊಳಮರ್ದಹಸ್ತಸ್ವಸ್ತಿಕಂಗಳ್ ಬೆಡಂಗಂ ॥ ೧೫೨

ಮುಱಿಸಿರ್ದಂಬರಮೆಯ್ದೆ ನಾಂದ ತನುವಂ ಪತ್ತಿರ್ದ ಕಣ್ಗೊಲ್ಲಿಯುಂ
ತೆಱಪಂ ಮಾಡಿ ಮನೋಜಚಕ್ರಿಯ ಜಯಶ್ರೀರಾಜ್ಯಚಿಹ್ನಂಗಳಂ ।

ಮೊಱೆದೊಂದಂದದಿನೀಕ್ಷಣಕ್ಕೆ ಪರಮಾನಂದಾಮೃತಂ ಸಾರ್ವಿನಂ
ಮೊಱೆವರ್ ಚಕ್ರಿಯ ಮುಂದೆ ತಕ್ಕೃತವಿಚಿತ್ರಾನಂಗಚಿಹ್ನಂಗಳಂ ॥ ೧೫೩

ವ॥ ಅಂತು ಜಲಕ್ರೀಡಾವಿನೋದಂಗಳಂ ನಿರ್ವರ್ತಿಸಿದಾಗಳ್,

ಉದಿರ್ದಲ್ಲೋಕ್ಕ ವಿಚಿತ್ರಪುಷ್ಪಚಯದಿಂ ತದ್ಗಂಧಸಂಸಕ್ತಷ
ಟ್ಪದದಿಂ ಸ್ತ್ರೀಕುಚಕುಂಭಕುಂಕುಮರಜಃಕಲ್ಲೋಳದಿಂ ಬಣ್ಣವ ।
ಣ್ಣದ ಚೆಲ್ವಂ ಗೆಡೆಗೊಂಡು ಚಿತ್ರಿತಪತಾಕಾಲೀಲೆಯಂ ತಾಳ್ದಿ ನಿಂ
ದುದು ಗಂಗಾನದಿ ಚಕ್ರವರ್ತಿಯ ಸಮಸ್ತಾಂತಃಪುರಕ್ರೀಡೆಯೊಳ್ ॥ ೧೫೪

ಧರೆಯೊಳ್ ಸಂದಿರ್ದ ಗಂಗಾನದಿಗೆ ಜಯಸಮಾರಂಭನಿಶ್ಶೇಷದಿಕ್ಸಂ
ಚರಣಾಕ್ಷುಣ್ಣಾವಗಾಹಾಗತಕರಟಿಶಿರಃಪೀಠಸಿಂದೂರಪಾಂಸೂ ।
ತ್ಕರದಿಂ ಸೀಮಂತಸಿಂದೂರದವಿರಚನೆಯಂ ಕೂಡೆ ಮಾಡುತ್ತುಮಿರ್ದಂ
ಭರತೇಶಂ ತತ್ತಟೀನಂದನವಿಟಪಿ ತಟಚ್ಛಾಯವಿಶ್ರಾಂತಸೈನ್ಯಂ ॥ ೧೫೫

ವನಲಕ್ಷ್ಮೀಲೀಲೆಯಂ ತದ್ವನಕುಸುಮದಳಂಕಾರದಿಂ ತಾಳ್ದುತುಂ ಯೌ
ವನಲಕ್ಷ್ಮೀಲೀಲೆಯಂ ತನ್ನೊಡನೆ ಮೊಱೆಯುತುಂ ತನ್ನ ಶುದ್ಧಾಂತಕಾಂತಾ।
ಜನವೊಪ್ಪಿರ್ದಲ್ಲಿ ನಾನಾವನಕುಸುಮಲತೋತ್ತಂಸಕರ್ಣಾವತಂಸಂ
ಮನುವಂಶಂ ಶೋಭೆವೆತ್ತಂ ಸುಕವಿಜನಮನೋಮಾನಸೋತ್ತಂಸಹಂಸಂ।

ವನಕೇಳೀವಿಭವಂ ಸಲೀಲಸಲಿಲಕ್ರೀಡಾವಿಳಾಸಂ ಸಮ
ಸ್ತನಿಜಾಂತಃಪುರದೊಳ್ ಪೊದಪ್ಪೆಸೆದು ಕಣ್ಗೊಂಡುಂ ಮನಂಗೊಂಡು ಮಿಂ।
ದ್ರನೆ ಭೋಗೀಂದ್ರನೆ ಖೇಚರೇಂದ್ರನೆ ದಲೀ ಭೂಪೇಂದ್ರನೆಂಬನ್ನೆಗಂ
ಮನುವಂಶಪ್ರಭು ಬೀಡಿನತ್ತ ತಳರ್ದಂ ಸಂಸಾರಸಾರೋದಯಂ ॥ ೧೫೬

ಗ॥ ಇದು ದೇವೇಂದ್ರಮುನೀಂದ್ರವಂದ್ಯಪರಮಜಿನೇಂದ್ರಮುಖ
ಚಂದ್ರವಾಕ್ಚಂದ್ರಿಕಾಪ್ರಸರಪ್ರಸಾದೋದೀರ್ಣಸೂಕ್ತಿ
ಕಲ್ಲೋಲಮಾಲಾಕೀರ್ಣಕವಿತಾಗುಣಾರ್ಣವ
ಪ್ರಣೀತಮಪ್ಪಾದಿಪುರಾಣದೊಳ್
ದಿಗ್ವಿಜಯಪ್ರಾರಂಭನಿರೂಪಣಂ
ಏಕಾದಶಾಶ್ವಾಸಂ
ಸಂಪೂರ್ಣಂ.

---

ಶ್ರೀವರನೊಡನೆಯೆ ವನಜಳ
ದೇವತೆಗಳ್ ಬರ್ಪುವೆನಿಸಿ ತನ್ನೊಡವರೆ ಮಾ ।
ದೇವಿಯರಿನೆಸೆದನೋ ಧೃತ
ಲಾವಣ್ಯರಸಂ ಸರಸ್ವತೀಮಣಿಹಾರಂ ೧

ವ॥ ಅಂತು ಭರತೇಶ್ವರಚಕ್ರವರ್ತಿ ನಿಜಸ್ಥಪತಿರತ್ನವಿರಚಿತಮಣಿಮಯರಾಜಮಂದಿರಮಂ ಪುಗುವುದುಂ, ಆಪ್ರಸ್ತಾವದೊಳಂತಃಪುರದ ಪೂಸಿದ ಕಾಶ್ಮೀರರಾಗಮುಂ ಉಟ್ಟ ಕೌಸುಂಭಾಂಬರರುಚಿಯುಂ ತೊಟ್ಟ ಪದ್ಮರಾಗಾಭರಣಕಿರಣಂಗಳುಂ ಸಂಕ್ರಮಿಸಿದಂತೆ,

ಬಳಕೊಂಡ ಕೆಂಪಿನಿಂ ದಿನ
ವಳಯಂ ಪೋಲ್ತಿರ್ದುದಪರದಿಗ್ವಧು ಭೂಭೃ ।
ತ್ತಿಳಕಂಗೆ ಪಿಡಿವ ಬಗೆ ಕೈ
ಕೊಳೆ ಬೆಳಗಿದ ಪದ್ಮರಾಗಮಣಿದರ್ಪಣಮಂ ॥ ೨

ವ॥ ಆಗಳ್ ವೃಷಭೇಶ್ವರನಂದನಂ ಸಂಧ್ಯಾಸಮಯೋಚಿತಜಿನೇಂದ್ರವಂದನಾಕುತೂಹಲಿತಾಂತಃಕರಣನಾಗಿ,

ಬೆಳಗುವ ಕೈದೀವಿಗೆಗಳ
ಬೆಳಗುಂ ತರತರದಿನೊಗೆವ ತಾರಗೆಗಳ ಗೊಂ ।
ದಳಮುಮಿಳಾತಳದ ವಿಯ
ತ್ತಳದ ವಿಳಾಸಮನದೇನೊಡಂಬಡಿಸಿದುದೋ ॥ ೩

ಭರತನನೋಲಗಿಸಲ್ಬಂ
ದರಸುಗಳ ಕಿರೀಟಪದ್ಮರಾಗಪ್ರಭೆಗಳ್ ।
ಪರೆವಂತೆ ಪರೆದು ಕೌಸುಂ
ಭರಾಗರಮಣೀಯಮಾಯ್ತು ಸಂಧ್ಯಾರಾಗಂ ॥ ೪

ವ॥ ತದನಂತರದೊಳ್ ತದಾಸ್ಥಾನಮಂಟಪದೊಳ್ ಬೆಳಗುವ ಕೈದೀವಿಗೆಗಳ ಬೆಳಗುಗಳೊಳಂ ಬಳ್ವಳಬಳೆದು ನಿಮಿರ್ವ ಕಾಡಿಗೆಗುಡಿಗಳ ಮ

ಹೇಂದ್ರನೀಲಮರಕತಮಣಿಭವನಂಗಳ್ ವಿಜಯಕಟಕಸಮದಗಜಸಾಮ
ಜಂಗಳ್ ಕರ್ಪೂರಗಳೆಲ್ಲಮಂ ನೆರಂಬಡೆದು,

ಬೆಳೆದ ತಮೋಮದೇಭಘಟೆಬಿಡೆ ಡೊಳ್ಗುತೆ ಸನ್ನೆಗಮುನ್ನತೋದಯಾ
ಚಳಗುಹೆಯಿಂ ಲಸತ್ಕಿರಣಕೇಸರಮಂ ಪರಿಸ್ಫುರತ್ಕರಾಗಳಾ |
ಗ್ರುಳಿಸುವ ಬಾಯ ಕೆಂಪನುದಯಂಗೆಯೆ ಪೂರ್ವ್ವದ ಕೆಂಪು ಪೊರ್ಲ್ವಿನಂ
ತಳರೆ ಬೆಸೆಂಗಿಸೊಳ್ ಪ್ರವಿಮದೆತ್ತಿರಮುದ್ಗತಚಂದ್ರಸಿಂಹದಾ || ೫

ನೆರೆದೈ ಸಂಜೆಯೊಳಿಂದು ಕಾಂಚ್ಛೊಡೆದೊಡೇನಾತ್ತಾಂಗದೊಳ್ ರೋಹಿಣೀ
ಚರಣಾಲಕ್ತಕರಾಗಮುಚ್ಚರಿದುದೋ ಪೋಣ್ ಕಾಮಿಗಳ್ಗೀವ ರಾ |
ಗರಸಂ ಪೂರ್ಣ್ಣಿದುದೋ ತಮೋಗಜದ ಕೋಡೇಂಬಿಂದಮೇಂನೊಂದುದೋ
ಹರಿಣಂ ಪೋಗೆನಿಸಿತ್ತು ರಕ್ತರುಚಿಯಿಂ ಬಿಂಬಂ ಸುಧಾಸೂತಿಯಾ || ೬

ಅನೊಂದಿನಿಸುಬೇಗದಿಂ ನವಜಪಾಪಸೂನಾಭಮಾ
ಯ್ತದೊಂದಿನಿಸುಬೇಗದಿಂ ಕನಕಕುಂಭದಂತಾಯ್ತು ಮ |
ತ್ತದೊಂದಿನಿಸುಬೇಗದಿಂ ಮೃದುಮೃಣಾಳಸಂಕಾಶಮಾ
ಯ್ತದೇಂ ಬಟಿಕೆ ಬಿಂಬದುಜ್ಜ್ವಳಿಕೆಯೋ ಸುಧಾಸೂತಿಯಾ || ೭

ವ|| ಅಂತು ಪುರಂದರದಿಗ್ವಧೂವದನಮಂಗಳಮಣಿದರ್ಪಣಮುಮನೀಂ
ದ್ರಗಜೇಂದ್ರಧವಳಕರ್ಣಚಾಮರಮುಮನನುಕರಿಸಿ,

ತ್ರಿಜಗತ್ಕಾಕ್ಷ್ಯದಂಡಸ್ಥಪತಿಗೃಹಪತಿಚ್ಛತ್ರಯೋಷಿತ್ಪುರೋಧೋ
ಗಜನಿಸ್ತ್ರಿಂಶಾಶ್ವಕಾಕಿಣ್ಯಜಿನಮಣಿಚಮೂನಾಥಚಕ್ರಾಧಿನಾಥಂ |
ಗೆ ಜಯಪ್ರಾರಂಭಗಚ್ಚ ಸ್ಫಟಿಕಕಳಶಮಂ ತೀವಿ ದಿವ್ಯಾಂಬುವಿಂ ನಾ
ಕಜನಾಥಂ ಮಜ್ಜನಕ್ಕೆತ್ತಿದ ತೆಱದೆ ಸುಧಾಸೂತಿ ಕಣ್ಗೊಡ್ಡಮಾದಂ ೮

ಪಗಲಂತಿರ್ದಚ್ಚವೆಳ್ದಿಂಗಳೊಳನಕಿರಣದ್ಯೋತಿಗೆತ್ತಾಗಳಾಗಳ್
ಮುಗಿದಿರ್ದಂಭೋಜಮೋರೊಂದಲರ್ದುದು ಬಿಸುಸುಯ್ದೆತ್ತಗಲ್ದಿರ್ದ ನೀರ್ವ
ಕ್ಕಿಗಳಾಗಳ್ ಕೂಡಿ ತೋಡಾದುವು ಕುವಲಯಷಂಡಂಗಳಾಶಂಕೆಯಿಂದಂ
ಮುಗಿಯಲ್ಕೆಂದಿರ್ದವೇನುಜ್ಜ್ವಳಿಸಿದುದೊ ಜಗಚ್ಚಕ್ರಮಂ ಚಂದ್ರಬಿಂಬಂ ||

ವ॥ ಅಂತು ಪುರಂದರಕರೋದ್ಧೃತಗಗನತಳಸ್ಪರ್ಧಿ ಗಗನಸ್ಫಟಿಕಕಳಶಮುಖವಿಗಳಿತಸುಧಾಧಾರಾಪಸರಮನನುಕರಿಸಿ,

ಭರತೇಶ್ವರನಂತಃಪುರ
ದರಸಿಯರ ವಿಲೋಚನೋತ್ಪಳಾಕರಮನಳಂ ।
ಕರಸಿ ದೆಸೆದೆಸೆಗೆ ಪಸರಿಸಿ
ಶರದದ ಬೆಳ್ದಿಂಗಳೀಂ ಮನಂಗೊಳಿಸಿದುದೋ ॥ ೧೦

ಬಸದಱಪುದಮರ್ದಿನ ಪಾಲ್ಮಳೆ
ಪಸರಿಸಿತೆನೆ ಜಗಮನೊಡನೆ ಕಪ್ಪುರದ ರಜಂ ।
ಮುಸುಕಿದುದೆನೆ ಪುದಿದೇನಾ
ಱುಸಿದುದೊ ಪೊಳೆವಮೃತಕಿರಣನಮೃತಕರಂಗಳ್ ॥ ೧೧

ವ॥ ಅಂತು ಕಾಮರಾಗರಸಸಾಗರಮಂ ನೆಲೆವೆರ್ಚಿಸುವ ಶರಚ್ಚಂದ್ರಾತಪದೊಳ್ ಪಗಲಿನ ಶರದಾತಪಪರಿಶ್ರಮಮನಾಱಸಿ ನಿಜವಿಜಯಕಟಕದ ನಾಗರಿಕರಮಣರಮಣೀಜನಂಗಳ್ ಕೌಮುದೀಮಹೋತ್ಸವೋತ್ಸುಕರಾಗಿ ನೆರೆದಲ್ಲಿ,

ಮೃಗಮದದಣ್ಪು ಜಾಜಿಯ ಬಟಲ್ಮುಡಿ ನೆಯ್ದಿಲ ಕರ್ಣಪೂರಮು
ಟ್ಟುಗಲದೆ ಕಟ್ಟಿದೈಸರಮದೊಂದುಬೆಡಂಗಿನ ಸೇತವಾಲೆ ಪ ।
ಟ್ಟುಗೆ ಕಟಿಸೂತ್ರಮೆಂಬಿವು ಮನಂಗೊಳೆ ಮನ್ಮಥಚಕ್ರವರ್ತಿಗೀ
ಕೆಗಳೆ ವಿನೋದದಾಕೆಗಳೆನಲ್ ಮೆಱೆದತ್ತು ವಿಳಾಸಿನೀಜನಂ ॥ ೧೨

ವ॥ ಆಗಳಾಸ್ತ್ರೀಸಮೂಹಂ ನೆಱೆದಿರಲಲ್ಲಿ ವಿಳಾಸಿನೀವಾಟದೊಳೊಂದೆಡೆಯೊಳೊಂದು ಕಮನೀಯಕಾಯಮಾನಾಭ್ಯಂತರಚಂಚತ್ಕಾಂಚನಮಂಚೋಪಶೋಭಿತಮೃದುತಳ್ಪದೊಳೆರಡಱಯದೆ ಕೂರ್ತ ನಲ್ಲಳ್ಗೆ,

ಮುಳಿದು ಮನಃಪ್ರಿಯಂ ಪೆಱಗುಗೆಯ್ದಿರೆ ಬೆಂಬಿಡದಪ್ಪಿಕೊಂಡ ನ
ಲ್ಲಳ ಮೊಲೆಯೊತ್ತಿನೊಳ್ ತೊಡರ್ದದಾಕೆಯದೂಱಸಿಸುಯ್ದು ಸುಯ್ಯೊಳ
ಚ್ಚಳಿಸಿದುದಾಸರೋಜದಳನೇತ್ರೆಯ ನಲ್ಮೆಯೊಳತ್ತು ಕಣ್ಣ ನೀ
ರ್ಗಳ ಪೊನಲಿಂದೆ ಕರ್ಚಿ ಕಳೆದಂತಿರೆ ಪೋದುದು ಕೋಪಮೋಪನಾ ॥

ವ॥ ಮತ್ತೊಂದು ವಿಚಿತಕಾಂಡಪಟಪರಿವೃತಪಟಕುಟೀಪ್ರದೇಶದೊಳ್,

ಪೊದಳ್ದ ಕಬರೀಭರಂ ಪರೆದು ಪರ್ವ ತುಂಗಸ್ತನಂ
ಕದಕ್ಕದಿಸೆ ಕಣ್ಮಲರ್ ಪೊಳೆಯೆ ಕಾಂತನಂ ಮುಟ್ಟಿಸಲ್ ।
ವಿದಗ್ಧೆ ಪುರುಷಾಯಿತಂ ತಗುಳೆ ನರ್ತಕೀಲೀಲೆಯಿಂ
ಮದಮೊಂದು ಶೃಂಗಾರಯೋಗಿನೀವಿಲಾಸಮಂ ತೋಱಿದಳ್ ॥ ೧೪

ವ॥ ಮತ್ತೊಂದಡೆಯೊಳ್ ಬರ್ಪಂ ತನ್ನ ಪ್ರಾಣೇಶ್ವರಿಯ ಮೊಗಮಂ ನೋಡಿ ತಲೆಯಂ ತೂಗಿದೊಡೆ ಆಕೆ ಶಂಕಾಕುಳಿತೆಯಾಗಿ ತನ್ನ ಕೆಳದಿಗಿಂತೆಂದಳ್,

ತುಂಗಘನಸ್ತನಂ ಬೆಮರೆ ಮೇಲುದನಾಂ ತೆಱೆದಿರ್ದೊಡತ್ತಲಿ
ರ್ದಂಗಜಸನ್ನಿಭಂ ತಲೆಯನೇಕೆಗೆ ತೂಗಿದನೆಂದೊಡಕ್ಕ ಕೇ ।
ಳಂಗನೆ ನಿನ್ನ ಬೀಗಿ ಬಿಗಿದಿರ್ದ ಕುಚದ್ವಯಮಧ್ಯದಲ್ಲಿ ತಾಂ
ಪಿಂಗದೆ ನಟ್ಟ ದಿಟ್ಟಿಯನವಂ ಕಿಱಲೊಂದನುಗಿಯ್ದು ತೂಗಿದಂ ॥ ೧೫

ವ॥ ಮತ್ತಮೊಂದೆಡೆಯೊಳ್,

ಮಿಳಿರ್ವಸಿಯ ಪಸಿಯ ಪೊಸಬಾ
ಸುಳ ಕರರುಹರೇಖೆ ತುಱುಗಿ ರತನಾಟ್ಯಪರಿ ।
ಸ್ಫುಳಿತಕ್ಕೆ ಮುಳಿದು ದಂಪತಿ
ಗಳನಂಗಜನಟನ ಸೆಳೆಯ ಬಾಸುಳವೆನಿಕುಂ ॥ ೧೬

ವ॥ ಎನೆ ಮತ್ತೊರ್ವನಿಂತೆಂದಂ,

ಬಳ್ಳಿಗಳವ್ಮಾವಿನ ಮರ
ನುಳ್ಳೆಡೆಗಳನಱಸ ಪೋಪುವಲ್ಲವು ಕೆಲದೊಳ್ ।
ಕಳ್ಳಿಯುಮಿಡಲಡವುರ್ವಬಳೆಯು
ರಳ್ಳಿವರ್ಗಗಳ್ ಪುರುಷಗುಣಮನಱಿವೆಱಗುಗುವೋ ॥ ೧೭

ವ॥ ಮತ್ತಮೊಂದೆಡೆಯೊಳ್ ಪಲಬರ್ ವಿದಗ್ಧವಿಟರ್ ನೆರೆದಿರ್ದಲ್ಲಿಯೊರ್ವಂ,

ಬಸನಿಯೆ ಗೆಲ್ಲಕಾಱನ ನೆಗಪ್ತೆಗೆ ಕೇಳಗೆ ನಾಡೆ ಗೆಂಟದಂ
ಬೆಸಗೊಳವೇಡ ನೆಟ್ಟನೆ ಚದುರ್ ತನಗುಳ್ಳೊಡೆ ಮೆಲ್ಪನೋಳವಂ ।

ಪೊಸಯಿಸಿ ತನ್ನ ಮುನ್ನಿಳಿವು ಬೇಟದ ಲಲ್ಲಿಯು ಬಳ್ಕೆ ಪತ್ತಿಸು
ತ್ತಿಸೆ ಪುರುಡಿಂಬುಕ್ಕೆಸೆ ಬಿಯಮಾಱಿಸಿ ಪೊಂದದವಂ ಬೊಜಂಗನೇ॥ ೧೮

ನೆಲನಂ ಪರ್ವುವ ಬಳ್ಳಿಗಂ ಚದುರನೊಳ್ ಮೈಮೈಯೊಡಂಬಟ್ಟು ತ
ಳ್ತಲರ್ವಾಕೋಮಳೆಗಂ ತಗುಳ್ಪ ಪೆಱಪೊಂದೆಂದಕ್ಕುಮಾಬಳ್ಳಿಗೆ।
ಯ್ದಲಳ್ಳುಂಬಂ ನೆಲನಾಕೆಗಂ ಬಳಸಿಯುಂ ಲಲ್ಲೈಸಿಯುಂ ನೋಡಿ ಕಾ
ಣಲಳ್ಳುಂಬಂ ಮನಮೆಂಬಿದಂ ಚದುರರೊಳ್ ಮುಂ ಕೇಳದಿಂ ಕೇಳ್ವನೇ ।೧೯

ವ॥ ಎಂದು ಮತ್ತೊರ್ವನಿಂತೆಂದಂ,

ನಿಧಿ ದೊರೆಕೊಳ್ವೊಡಂ ಕುಲಧನಂ ದೊರೆಕೊಳ್ವೊಡಮೆಲ್ಲಿಯಾನುಮ
ಲ್ಲದೆ ದೊರೆಕೊಳ್ಳದಂತೊಲವು ಗಳ್ದೊರೆ ಕೊಳ್ವೊಡಮೆಲ್ಲಿಯಾನುಮ।
ಲ್ಲದೆ ದೊರೆಕೊಳ್ಳವಂತಱಿದರಿಂ ದೊರೆಕೊಂಡುವನೇವಮಾಗಲೀ
ಯದೆ ಕಿಡಲೀಯದಿರ್ಪಿರವಿದೊಂದೆ ಚದುರ್ ಚದುರೆಂಬುದಾವುದೋ ॥ ೨೦

ಬಳಸುವ ಬೇಟದೊಳ್ ಮೊಳೆದ ಗೊಟ್ಟಿಯೊಳೇಱಲೊಪ್ಪೋದಲುಂದಿನೊಳ್
ಬಳೆದ ವಿಯೋಗದೊಳ್ ಪೊಱೆದ ಚಿಂತೆಯೊಳೇ ಮಡಲ್ತು ತಳ್ತ ಮೆ।
ಯ್ಗಳೊಳಡರ್ದೊರ್ತುಪೂತ ವಚನಾಮೃತದೊಳ್ ಗೊಲೆಗೊಂಡ ಬೇಟವೆಂ
ಬೆಳಲತೆ ಕೂಟದೊಳ್ ಪದೆದು ಪಣ್ತೊರ್ದೆಗಿಂಪಿನಲಂಪನೀಯದೇ ॥ ೨೧

ದಿವಸಂಗಳ್ ವಿಧುಬಿಂಬಚುಂಬಿತನಭೋಭಾಗಂಗಳಾದಂದುಮಾ
ಮ್ರವನಂಗಳ್ ಕಳಿಕಾಪ್ರವಾಳಕುಸುಮಾಕ್ರಾಂತಂಗಳಾದಂದುಮಾ।
ದವಿನೋದಂಗಳನಂಗರಾಗರಸ ಸಂಕೀರ್ಣಂಗಳಾದಂದುಮಾ
ಱುವ ಪಾಂಗಾವುದು ಕೊಂಡುಪೋಗಗಲಲಾನಾಱೆಂ ಮನೋವಲ್ಲಭಾ ॥ ೨೨

ಬದವಿದ ಚಿಂತೆ ಪೆರ್ಚೆ ಪಸಿವಿಲ್ಲದೆ ಮರ್ಚೆರ್ದೆಯುರ್ಬೆ ನಿದ್ರೆಯಿ
ಲ್ಲದೆ ಬಗೆ ಬೆರ್ಚೆ ಬುದ್ಧಿಯುಮಿಲ್ಲದೆ ನಲ್ಲಳಗಲ್ಕೆಯಿಂದಮಾ।
ದದವಳಲಚ್ಚಿಗಂ ಮುಱುಕವೆಂಬಿವಱಿಂದೆ ಕನಲ್ದು ಮುನ್ನೆ ಬೇ
ಟದ ಸವಿಗಂಡನಲ್ಲದಱಿಯಂ ಶ್ರಮವಂ ಕಡುವೇಟಕಾಱರಾ ॥ ೨೩

ವ॥ ಎಂದು ಬೇಟಮನೆ ವಸ್ತುಮಾಡಿಯೆ ಕವಿತ್ವ ವರ್ಣಕವಿತ್ವಕಾಮತ
ತ್ತ್ವವಿದನೆನಿಸಿದತಿವಿದಗ್ಧನೊರ್ವನಿಂತೆಂದಂ,

ಅಲೆದುಂ ನೋಡುವೊಱಲ್ದುವಿಟ್ಟಪದಮುಂ ಪೊಲ್ದುಂ ಕಳಲ್ದುಂ ಪೞಂ
ಚಲೆದುಂ ಪುಟ್ಟಿದ ಸೀಯನಪ್ಪ ದನಿಯುಂ ಪೋಲ್ವಾಯ್ದು ಪೇಳ್ವೆಸಿಯುಂ।
ಪಿಱಿದುಂ ಲುಂಪುವ ಪೇಟದೊಂದು ಸುಸಿಲುಂ ನೋಯಿಕ್ಕುವಾಱಿಕ್ಕುವ
ಗ್ಗಳಿಕುಂ ಕಬ್ಬದ ಗೇಯದೊಂದು ಸುಸಿಲೊಂದಿಂಪೆಂಬುದೇಗೆಯ್ವುದೋ ॥

ವ॥ ಎಂದು ಪಱಿದ,

ಬಡಸಿರಲಿತ್ತುದಿಲ್ಲ ವಿಧಿ ನಮ್ಮನೆಳಲ್ದಳವೇಡ ನೀಂ ಮನಂ
ಬಿಡೆ ನಡೆಯೆಂದು ಪೇೞ್ದನಿಸನಾಂ ಮಗುಳ್ದಾಗಳೆ ಸೂಸಿ ಕಣ್ಣನೀ ।
ರೊಡನೊಡನುಣ್ಮೆ ಕುಂಕುಮದೊಳರ್ದಿದ ಬಾಳೆಗಳನ್ನವಾಗಿ ಕೆಂ
ಪಡರ್ದಲರ್ಗಣ್ಗಳಿಂದುಗುಱ್ದು ನೋಡಿದುದಂ ನೆನೆವೇಂ ಮೃಗಾಕ್ಷಿಯಾ ॥

ವ॥ ಎಂದೆರ್ದೆಯಾಱದೆ,

ಬದವಿ ತಗುಳ್ದು ಗಗ್ಗರಿಕೆ ಸೂಸುವ ಕಣ್ಬನಿ ಕಣ್ಗಳೊಳ್ ಕಲಂ
ಕಿದ ಬೆಳರ್ಗೆಂಪು ಕಣ್ಗವರೆ ಸಾರ್ಚಿದಗಲ್ಕೆಯೊಳಿಂತು ಪೇೞ್ದುದು ।
ಬ್ಬದಿಗವುನಾಂತ ನಲ್ಲಳ ಮುಖಾಂಬುಜಮಂ ನಡೆನೋಡಿ ನೋಡಿ ಸಾ
ಯದೆ ಬರ್ದುಕಾಡಿದಂ ಜವನ ಬಾರಿಯೊಳಂ ಬರ್ದುಕಾಡದಿರ್ಕುಮೋ॥ ೭೬

ವ॥ ಎಂದುಮವಧರಿಸದೆ,

ನಡುಕಮುಮಳ್ಕಱುಂ ಬೆರಸಗಲ್ಕೆಯೊಳಿಂದಿನಿತೆಂಬವೊಲೊತ್ತಿ ಡಂ
ತೊಡರೆ ರಸಾಂತದೊಳ್ ಬಗೆದು ಭೋಂಕೆನೆ ಪೋದಪನೋಪನೀಸಲುಂ ।
ಕೆಡೆಯಸುವಿಲ್ಲದೆಂದಱಿವಳಲ್ದಱದೊಂದಿದಲುಂದುಗಳ್ಗೆ ನೀ
ಗುರ್ಡಿದವೊಲಾದುದುಚ್ಚಳಿಸಿ ಸೂಸುವ ಕಣ್ಬನಿ ಕಂಜಪತ್ರಯಾ ॥ ೭೭

ವ॥ ಎಂದು ಸೈರಿಸದೆ

ಆವುರ್ದಿನ ದೋರೆಯಂತೆ ನುಡಿಯಿಂಪವುರ್ದಂ ತಳಿದಂತೆ ಸೋಂಕಿನಿಂ
ಪವುರ್ದಿನ ಪೂರದಂತೆ ಪದೆದಿಂಪವುರ್ದಂ ಕುಡಿವಂತೆ ಲುಂದಿನಿಂ ।
ಪವುರ್ದೊಡವೇನಗಲ್ಕೆ ಮುಳಿಸೆಂಬೆರಡುಂ ಗಡ ಕಾಳಕೂಟಮಾ
ಗವುರ್ದಿನ ಕಾಳಕೂಟದೊಡವುಟ್ಟಿದಳೆಂದಪೆನೆನ್ನ ನಲ್ಲಳಂ ॥ ೭೮

ವ॥ ಮತ್ತಮೊಂದೆಡೆಯೊಳಂದೆ ಪೊಸಯಿಸಿದ ಪೊಸವೇಟಕಾಱರಪ್ಪ ಕ
ಡುನಲ್ಲರುಮಿರ್ವರುಮಿರೆ,

ಕುಱುಗುರುಳೆಂಬ ತಂಬೆಲರ ಬೆಂಬಿಡಿದಿಂ ಪ್ರಸವೇಟವೆಂಬ ಚೆ
ಲ್ವಿಡಿದೆಳಮಾಮರಂ ಪುಳಕವೆಂಬ ನವಾಂಕುರದಿಂ ವಿಳಾಸಮಂ ।
ಪಡೆದನುರಾಗವೆಂಬ ತಳಿರಿಂದೆಸೆದಳ್ಕಱನಾಳ್ದ ನೋಟಮೆಂ
ಬಿಡಿದಲರಿಂ ಮುಸುಂಕಿ ಸುಸಿಲೆಂಬ ಬಸಂತದೊಳೇಂ ಪೊದಳ್ದುವೋ ॥೨೯

ವ॥ ಮತ್ತಮೊಂದೆಡೆಯೊಳ್* ಪಳಿಕೆಯಿಂದ್ದು ಬಂದು ನಲ್ಲಳ ಮುಳಿಸನೊಳಕೊಂಡು ಮುಖಮಂ ಮುಗುಳ್ನಗೆವೆರಸು ನುಡಿದು ಗೆಂಟಾದಂ. ಮತ್ತಮೊಂದೆಡೆಯೊಳ್ ಪಳವಳಿಯ ಬೇಟದ ತೋಟಿಯಂ ತೊಡರ್ದಟ್ಟುಪೆತ್ತ ಪೊಲೆವುಲ್ಲೆಯಳ್ಕೆವಿಳ್ಕೆಯಾದ ಮಾತಂ ತನ್ನ ಸೂಳೆಯ ಬೇಸಱಿಂ ಕೆಳೆಯಂಗಿಂತೆಂದಂ,

ಮಱುಗುವೆನಾನಿವಳ್ಗೆವಳವಂಗೆರಡಿಲ್ಲದೆ ನಲ್ಲಳಾತನುಂ
ಮಱುಗುವನಾಕೆಗಾಕೆಯುಮವಂನಗವಿನೋದದೊಳಿನ್ನು ಪಂಬಲೊಳ್ ।
ಮಱುಗುವಳೆಂದೊಡೇಂ ತಿಳಿವನಾತನನಾಕೆಯನಿನ್ನು ನೋಡು ಕಾ
ಯ್ದಿಱಿಯೆ ವಿಧಾತ್ರನೇಂ ಪಡೆದನೋ ಬಿಸವಂದಮನೊಂದಮಿಂದಮಂ ॥೩೦

ವ॥ ಎಂದು ನುಡಿದಂ. ಮತ್ತೊರ್ವನಿಂತೆಂದಂ,

ಲಲಿತಲತಾಂಗಿ ನೂತವಿಪರೀತರತಕ್ಕಡಿಯಿಟ್ಟಳಿನ್ನು ಕ
ಣ್ಗಳ ಪಸವ್ರೋಡೆ ನೋಡಲಣಮಾಯದೆ ನೀಳ್ದ ಕುರುಳ್ ಮದೀಯಕೋ।
ಮಳೆಯ ಮುಖೇಂದುವಂ ಮಱಸಿದಂದಿನದೊಂದೊಳಲಿಂದಮಾಗಳಂ
ತೆಳಸಿತಳಲ್ ಮುಗಿಲ್ ಮಱಸಿ ಭೋಂಕನೆ ಕಂಡಮೃತಾಂಶುಬಿಂಬಮಂ ॥

ವ॥ ಅಂತು ಕಂಡು ವಿಹಾಱಲಾರದಿಂತೆಂದಂ,

ಬನಮಂ ಕೋಗಿಲೆ ಜಕ್ಕವಕ್ಕಿ ಪಗಲಂ ಪೂಗೊಂಚಲಂ ತುಂಬಿ ಚಂ
ದ್ರನನಂಭೋನಿಧಿ ಬಂದ ದೂವೆ ಮಲೆಯಂ ಕಾರ್ಗಾಲಮಂ ಸೋಗೆ ಮುಂ
ಬನಿಯಂ ಜಾಪಗೆವಕ್ಕಿ ಹಂಸೆ ಕೊಳನಂ ಪದ್ಮಂಗಳಾದಿತ್ಯನಂ
ನೆನೆವಂತಾಂ ನೆನೆವೆಂ ಸರೋಜಮುಖಿಯಂ ಶ್ಯಾಮಾಂಗಿಯಂ ನಲ್ಲಳಂ ॥೩೨

ನುಡಿವೊಡೆ ಲಲ್ಲೆಯೆಂಗುಮೆರ್ದೆವೇಱ್ದೊಡೆ ಕೈತವಮೆಂಗುಮಾಸೆಯಿಂ
ಪಿಡಿದೊಡೆ ಸೇದೆಯೆಂಗುಮಿರಿಮೆಂದೊಡೆ ಕೈತವಮೆಂಗುಮೆಂದುನಾಂ ।

*ಇದು ಒಂದು ಪದ್ಯಭಾಗದಂತೆ ತೋರುತ್ತದೆ.

ಮಿಡುಕದೆ ಪೋದಗಲ್ಕೆಡೆಯೊಳಿನ್ನಿರೆನೆಂದೊಡೆ ಕಣ್ಣನೀರ್ಗಳೋ
ಗಡಿಸದೆ ಸೂಸ ಗದ್ಗದಿಕೆಗೊಂಡುಪದಂಗನೆಸಂ ಲತಾಂಗಿಯುಂ ೩೩

ವ॥ ಎಂಬ ಮತ್ತೊಂದೆಡೆಯೊಳ್ ಒರ್ವಳ್ ವಿರಹಪರಿತಾಪದೊಳ್ ಸೈರಿಸ
ಲಾಱದ ಮದನನಂ ಬಯ್ದು ಬೆಚ್ಚನೆ ಸುಯ್ದು ತನ್ನ ಕೆಳೆಯಂಗಿಂತೆಂದಂ,

ಪಗಲಿರುಳೆನ್ನದೆನ್ನೊಳೆ ಕಡಂಗುವನೆನ್ನೊಳೆ ಬಲ್ಪದೋರ್ಪನಾ
ನಗಿಪಱಿವಿರ್ದೊಡಂ ಚಲದಿನೆನ್ನೊಳೆ ಪೊಂಗಿ ಪೊಡರ್ಪುದೋರ್ಪನೋ।
ಲಗವುರುಡಿಲ್ಲ ಮೆಚ್ಚುವಣಿಗಿಲ್ಲ ಕರಂ ಮುಳಿಸಿಲ್ಲ ಕಾಯ್ದು ಕೆಂ
ಪುಗೆಬಳಸಂದು ಕಾಂಚನಕಾರಣದಿಂ ಮೊಱೆಯೋ ಮನೋಭವಾ ॥ ೩೪

ವ॥ ಮತ್ತಮೊಂದೆಡೆಯೊಳಿರಡಱಿಯದೆ ಕೂರ್ತ ನಲ್ಲಳ್ಗೆ,

ಮುಳಿದು ಮನಃಪ್ರಿಯಂ ಪೆಱಗುಗೆಯ್ದಿರೆ ಪಂಬಲಿಪಪ್ಪಿಕೊಂಡ ನ
ಲ್ಲಳ್ ಮೊಲೆಯೊತ್ತಿನೊಳ್ ತಳರ್ದಪಾಕೆಯ ಮೂರಿಸಿ ಸುಯ್ದುಸುಯ್ದ್ಲು
ಚ್ಚಳಿಸಿದುದಾ ಸರೋಜದಳನೇತ್ರೆಯ ನಕ್ಕೆಯೊಳತ್ತ ಕಣ್ಣನೀ
ರ್ಗಳ ಪೊನಲಿಂದೆ ಕರ್ಚಿಕಳೆದಂತಿರೆ ಪೋದುದು ಕೋಪಮೋಪನಾ॥೩೫

ವ॥ ಮತ್ತೊಂದೆಡೆಯೊಳ್ ಒರ್ವಳ್ ಆತ್ಮೀಯಪ್ರಾಣನಾಥನಗಲ್ಕೆಯಂ
ಸೈರಿಸಲಾಱದೆ,

ಪ್ರಾಣದಗಲ್ಕೆಯೊಳ್ ಮಱುಕಮೋದೊರೆತಕ್ಕುದೊಡಲ್ಗಳಂ ಕೆಲಂ
ಕಾಣದು ಕಾಣ್ಬುದಾವುದೊಡಲತ್ತಿದು ಕಾರಿಪಮೆನ್ನೊಡಲ್ಗೆ ನೀಂ।
ಪ್ರಾಣಮಮೋಘಮಪ್ಪುದಱಿನೋಪನೆ ನಿನ್ನನಗಲ್ಪಗಲ್ಕೆಯುಂ
ಪ್ರಾಣದಗಲ್ಕೆಯುಂ ಸಮನದಕ್ಕೆ ವಿಯೋಗಮನೆಂತು ಸೈರಿಪೆಂ ॥ ೩೬

ವ॥ ಎಂದು ತನ್ನ ನಿರ್ಭರಪ್ರಣಯಸಿಗಳದೊಳೆತೊಡರ್ಚಿತಾಗಿದಳ್
ಮತ್ತೊರ್ವಳ್ ನಿಜಪ್ರಾಣೇಶ್ವರನನಂತುಂ ತನ್ನೊಳಳವಡಿಸಲಾಱದೆ ನಿಜ
ಪ್ರಿಯಸಖಿಗಿಂತೆಂದಳ್,

ಅನುಮಂಗೈಯ್ದುಳಿಯೆಂಬ ತಾಯ ನುಡಿಯಂ ಕೈಕೊಂಡೆನೇ ನಂಟರೀ
ತನ ನಣ್ಪಂ ಬಿಸುಡೆಂದೊಡಾನುಡಿಯನಾನೇಗೊಂಡೆನೇ ನಾಣನೆ।
ಕ್ಷನಿತುಂ ಕಾದೆನೆ ಪೇಡಿದೊಂದು ಪುರುಳಂ ಮಾರ್ಕೊಂಡೆನೇ ಬೇಡಿ ವೇ
ದನೆ ಗೊಂಡಾನೆಱೆದಟ್ಟೆಯುಂ ಬಗೆಯನೇಗಂಡಂ ಮನಂಗಂಡನೋ ॥ ೩೭

ವ॥ ಎಂದು ನುಡಿಯುತ್ತುಮಿರ್ದಳ್. ಮತ್ತೊಂದೆಡೆಯೊಳ್ ತೋಳ ಪಲ್ಲಟದೊಳ್ ಬೆದಱಿದ ಬಗೆವೆರಸು ಲಲ್ಲಗೆಯ್ವಾಳನೊರ್ವನತಿಚತುರ ವಿಟಂ,

ಬಿಗಿದಮರ್ದಪ್ಪುವಪ್ಪುಗಳಮರ್ಕೆಗಳೊಯ್ಯನೆ ಸುಯ್ವುಸುಯ್ಯು ಗಾ
ಳಿಗಳೊಳಮರ್ಕೆಗೆಟ್ಟೊಡಲಪ್ರೋಡಿದುದೆಂದಗಿವೆನ್ನ ನಿನ್ನ ಪ।
ತ್ತುಗೆಯು ತೊಡರ್ಪದಿಂದು ಪಱಿದತ್ತು ಮನಂ ಬಟಿಕ್ಕೈಯ್ದೆ ಸೊರ್ಕಿದಾ
ನೆಗೆ ಪಱಿವಂತಿರಿಂದು ಪಱಿದತ್ತೆನಗಂ ನಿನಗಂ ತಳೋದರೀ ॥ ೩೮

ವ॥ ಎಂದು ಪಱಿಪಡೆ ನುಡಿದು ಗೆಂಟಾದಂ. ಮತ್ತಮೊಂದೆಡೆಯೊಳ್ ಒರ್ಬನಗಲ್ದ ತನ್ನ ಮನೋನಯನವಲ್ಲಭೆಯಂ ನೆನೆದು,

ಮಿಸುಗುವ ತನ್ನ ಬಾಯ್ದೆಱೆಯೊಳಾಲದ ಪಣ್ಣನೆ ಮೆಯ್ಯ ಬಣ್ಣದೊಳ್
ಕೊಸಗನೆ ತನ್ನ ಬಳ್ವಳಿಕೆಯೊಳ್ ಸೆಳೆಗೊಂಬನೆ ಪೋಲ್ತು ನೋಡಮಾ।
ನಸೆಯುಣಮಲ್ಲಳಿಂತು ಮರವಾನಸಿಯಾಗಿಯುಮಾದುದೊಂದು ಮಾ
ನಸಿಕೆ ಮನಂಗೊಳಲ್ಕೆನಗಮತ್ತಳಗಂ ತರಳಾಯತಾಕ್ಷಿಯಾ ॥ ೩೯

ವ॥ ಎಂದುಮವಧರಿಸದೆ,

ನಳಿತೋಳೊಳ್ ತೊಡರ್ದೊಂದುತೋಳಮಣಿವೋಲ್ ತುಂಗಸ್ತನದ್ವಂದ ದೊಳ್
ಪೊಳೆಯುತ್ತಾರದವೋಲ್ ಸಮುನ್ನತನಿತಂಬೋದ್ದೇಶದೊಳ್ ಪರ್ವಿ ಪ।
ಜ್ಜಳಿಸಿತ್ತುಜ್ಜ್ವಳಕಾಂಚಿವೋಲಿನಿಯಳಂ ಪತ್ತಿರ್ಪ ಸ್ವೈಪೇಕೆ ಸಂ
ಗಳಿಕುಂ ಮಾನದೆ ಮುನ್ನಮಾನವಱನೋಂತಾನೋಂಪಿಯುಂ ನೋಂತೆನೇ
ವ॥ ಎಂದು ಪಂಬಲಿಸುತ್ತಿರ್ದಂ. ಮತ್ತೊಂದೆಡೆಯೊಳ್ ಒರ್ವಳ್ ತನ್ನ ಅಭಿನವವಿರಹಪರಿತಾಪದೊಳಿಂತೆಂದಳ್,

ಬಿಡಲುರಿಗುಂ ಮನಂ ಮಱುಗುಗುಂ ಕಿವಿ ಗಿಬ್ರನೆ ಪೋಕುಮತ್ತೆ ಕ
ಣ್ಬಿಡಗುಗುಮೆಯ್ದೆ ಬಾಯ್ಬಿಡದೆ ಒತ್ತುಗುಮಳ್ಕಿರ್ದ ನೊಂದು ಕುಂದುಗುಂ
ನುಡಿ ತಡವಕ್ಕುಮಿಚ್ಚೆ ಮಿಡುಗುಂ ಗಡ ನಲ್ಲರಗಲ್ಕೆಗೆಂಬ ನಾ
ಟ್ನುಡಿಯನೆ ಕೇಳ್ದೆನಿನ್ನೆ ಮರವೋವೊಲವೆಂಬುದದಿಂತುಟಾಗದೇ ॥ ೪೧

ವ॥ ಎಂದು ಪಂಬಲಿಸುತ್ತಿರ್ದಳ್. ಮತ್ತೊಂದೆಡೆಯೊಳ್ ಒರ್ವಳ್ ನಿಜ ಮನೋವಲ್ಲಭಪರಿತಾಪತಾಪಿತತನುಲತಿಕೆ ಗಗನತಳತಿಳಕನೆನಮೃತಕಿರಣನಂ ನೋಡಿ,

ಇನಿಯನಗಲ್ದು ಪೋಗಿ ಪರದೇಶದೊಳಿರ್ದಪನಾನುಮಿಲ್ಲಿ ಮಾ
ಪಿನ ತಳರ್ವಾಸಿನೊಳ್ ಪೊರಳುತಿರ್ದಪೆನಾಗಳುಮಿಂತೆ ನೀನುಮೆ ।
ನ್ನನೆ ನಡೆನೋಡುತುಂ ನಭದೊಳಿರ್ದಪೆಯುಪ್ಪದಱಿಂದೆ ನಿನ್ನ ನಾ
ನನುವಿಪೆನೆನ್ನ ಮೆಯ್ಬಡವೊ ನಲ್ಲನ ಮೆಯ್ಬಡವೋ ನಿಶಾಕರಾ ೪೨

ವ॥ ಎಂದು ಪಂಬಲಿಸುತಿರ್ದಳ್. ಮತ್ತವೊಂದೆಡೆಯೊಳ್ ಒರ್ಬಳ್,

ಅವಧಿಯನೊಂದುತಿಂಗಳೆಡೆಯಿಟ್ಟಿನಿಯಂ ತಡೆದಿರ್ಪನಲ್ಲನೆಂ
ಬವಸರದೊಳ್ ನಿಜಾಂಘ್ರಿನಖದರ್ಪಣಚುಂಬಿತಮುಗ್ನಜಾನನೆಂ ।
ದವನವಳೋಕಿಸುತ್ತವಧಿತಪ್ಪಿದುದಾಱನೆ ಪತ್ತುತಿಂಗಳಾ
ದುವು ಬರಲಾತನಾಱದೊಡೆ ಸಾಯಲುಮಾಱನೆ ಸತ್ತುನೀಗೆನೇ ೪೩

ವ॥ ಎಂದು ಪಂಬಲಿಸುತ್ತಿರ್ದಳ್. ಮತ್ತೊಂದೆಡೆಯೊಳ್ ಒರ್ವಳ್ ತನ್ನ ಪ್ರಾಣವಲ್ಲಭಂ ಬಂದುದರ್ಕೆ ರಾಗಿಸಿ ಇಂತೆಂದಳ್,

ಎನಗೆನ್ನೋಪನ ಬಂದುದರ್ಕಿದುವೆ ದಲ್ ತೆಲ್ಲಂಟೆ ನೀಂ ನಿನ್ನ ಕಂ
ಪನುಗುಳ್ ಮಲ್ಲಿಗೆ ಚಂದ್ರ ನಿನ್ನ ಪೊಳೆಪಂ ನೀಂ ತೋಱು ನೀಂ ಮೆಲ್ಲಮೆ ।
ಲ್ಲನೆ ಮಂದಾನಿಳ ತೀಡು ಕೋಗಿಲೆ ಸರಂದೋಱೊಂದು ಮೆಯ್ವೆರ್ಚೆ ತ
ನ್ನಿನಿಯಂ ಬಂದೊಡೆ ನಲ್ಲಳೇಂ ನಲಿವಳೋ ನಾನಾವಿಳಾಸಂಗಳಿಂ ॥ ೪೪

ವ॥ ಎನೆ, ಮತ್ತೊಂದೆಡೆಯೊಳ್,

ವಿದ್ರುಮದಶನಚ್ಛದೆ ಕೋ
ಪೋದ್ರೇಕದಿನೆರ್ದು ಪೋಗೆ ತೆಗೆದಪ್ಪಿದೊಡು ।
ನ್ನಿದ್ರಾಂಭೋಜಾಸ್ಯೆಗೆ ಮುದ
ನದ್ರವಮುಂ ಕಣ್ಣ ನೀರುಮುಣ್ಮಿದುವಾಗಳ್ ॥ ೪೫

ವ॥ ಎಂದು ನುಡಿಯುತ್ತುಮಿರ್ದಳ್. ಮತ್ತವೊಂದೆದೆಯೊಳ್ ಒರ್ಬಂ ಚದುರವಿಟಂ,

ಒದವಿದ ಕೂರ್ಮೆಯಿಲ್ಲದೞಿಪಾರಯುಮಿಲ್ಲದ ಪಾೞಿ ರಾಗಮಿ
ಲ್ಲದ ಸುಸಿಲ್ಕುಮಿಲ್ಲದ ಪದಂ ನೆವಮಿಲ್ಲದ ಕಾಯ್ಪು ಬೇಟಮಿ ।
ಲ್ಲದ ಪುರುಡೇವಮಿಲ್ಲದೞಲುಬ್ಬೆಗಮಿಲ್ಲದ ಕಣ್ಣ ನೀರ್ ಕರಂ
ಚದುರರುಮಂ ಮನಂಗೊಳಿಪುದೇಂ ಕಡುಜಾಣೆಯರೋ ಲತಾಂಗಿಯರ್

ವ॥ ಎಂದು ನುಡಿದಂತನೇಕಪ್ರಕಾರದ ಕಟಕದ ನಾಗರಿಕನರನಾರೀಜನಂಗಳಂಗಜರಾಗರಂಜಿತವಿನೋದಂಗಳೊಳಿರೆ,

ಭರತೇಶ್ವರಂ ನಿಜಾಂತಃ
ಪುರಕುಮುದವನಂಗಳಲರೆ ತನ್ನಿಂ ತಾನುಂ ।
ಶರದದ ಚಂದ್ರಮನೋಳ್ ಮ
ಚ್ಚರಿಪಂತಿರೆ ಚಂದ್ರಚರಿತಮಂ ಕೈಕೊಂಡಂ ॥ ೪೭

ಅವತಂಸೋತ್ಪಲತಾಡನಂ ಕನಕಕಾಂಚೀಬಂಧನಂ ನೂಪುರಾ
ರವಝುಂಕಾರಿತಚಾರುವಾಮಚರಣಾಘಾತಂ ಚಳದ್ಭ್ರೂಲತಾ ।
ಗ್ರವಿಭಾಗೋತ್ಕಟತರ್ಜನಂ ತರಳಿತಾತಾಮ್ರಾಧರಂ ಚಕ್ರಿಗಿ
ತ್ತುವಲಂಪಂ ಪ್ರಣಯಪ್ರಕೋಪಸುರತಪ್ರಾರಂಭದೊಳ್ ಕಾಂತೆಯಾ ॥೪೮

ವ॥ ಅಂತು ಸುರತಾಂಬುರಾಶಿಯನೀಸಿ ನಿದ್ರಾಂಗನಾಲಿಂಗಿತನಾಗಿರ್ದನ್ನೆಗಂ,

ಕಮಳೋದ್ದಾಮಕಷಾಯಸೌರಭಮಿಳನ್ಮತ್ತಾಳಿನೀಗೀತಮಂ
ಚಮಹಾಶಬ್ದವಿಜೃಂಭಿತಧ್ವನಿ ಲಸದ್ಗಾಂಧಾರನಾದಂಪ್ರಭಾ ।
ತಮರುತ್ಸ್ಪಂದರಮಂದಮಂದಗಮನಂ ಶಂಖಸ್ವನಂ ಪೂರ್ವದಿ
ಗ್ರಮಣೀವಕ್ತ್ರಸರೋಜರಾಗಮಯಮಾಯ್ತುತ್ತಂ ತ್ರಿಯಾಮಾಂತ್ಯದೊಳ್

ಮಂಗಳಗೀತಿಗಳೊಳ್ಪಿಗೆ
ಮಂಗಳಪಾಠಕರವಂಗಳಿಂದೆಸೆದಿರೆ ರಾ ।
ಜಾಂಗಣದೊಳ್ ಭರತನನಿ
ದ್ರಾಂಗನೆಯುಂ ಪತ್ತುವಿಡಿಸುವಂತೆವೊಲಾಗಳ್ ॥ ೫೦

ನಿನಗೋಗಂಬಾಡುವ ಯುವ
ತಿನಿಕಾಯದ ದನಿಗೆ ಸೆಣಸುವಂತೆವೊಲಲರ್ವೀ ।

ಪನಜವನಂಗಳ ತೊವರ್ಗಂ
ಪನಾಪ ಬಗೆ ಬಳೆಯೆ ಮೊರೆವುವಳಿಗಳ ಬಳಗಂ ॥ ೫೦

ಸರಸಿಜವನಂಗಳಲರ್ವಿನ
ವಿರಲಾಜಿದೆ ಜೇಗವೊಱಗುವಳಿನಿವಹದ ಝುಂ ।
ಕರಣಕ್ಕೆ ಕಾಯ್ಪುಗೊಂಡೆ
ಱ್ದಿರಸ ತೊಳಲ್ದಪ್ಪುವು ನಿನ್ನ ವಿಜಯಗಜಂಗಳ್ ॥ ೫೧

ಹಿಮಕರಮಂಡಳವಿದು ಪ
ತ್ರ್ರಮಂಡಳಾಭಂ ನೃಪೇಂದ್ರ ಮಸುಳ್ದುದು ಜೇಗಂ ।
ನಿಮಿರಲ್ ಬಗೆದಪ್ಪುದೀಮಿ
ತ್ರಮಂಡಲಂ ಮಿತ್ರಮಂಡಳಾಭಂ ನಿನ್ನಾ ॥ ೫೨

ಪುರುಪರಮೇಶ್ವರನಂಜನ
ದೊರೆಕೊಳಿಸುಗೆ ನಿನಗೆ ತಡೆಯದಾಪ್ರರುಪರಮೇ ।
ಶ್ವರನ ನಿರತಿಶಯಗುಣಪರಿ
ಕರಮುಂ ತತ್ಪ್ರಾತಿಹಾರ್ಯಮುಂ ಮಂಗಳಮುಂ ॥ ೫೩

ವ॥ ಎಂಬ ಮಂಗಳಪಾಠಕರವಂಗಳೊಡನೆ ಭರತೇಶ್ವರನುನ್ನಿದ್ರನಾದನನ್ನೆಗಂ,

ದೆಸೆಗಳ ಸಂದಂ ಪಱಿಪಾ
ಗಸದಿಂದಂ ಪತ್ತು ವಿಡಿಸುವಂತೆವೊಲಿಳೆಯುಂ ।
ಮಸಕದೊಳ್ ಪೊತ್ತು ನೆಗೆದಪ್ಪೊ
ಲೆಸೆದುದು ದಿಗ್ವಿಜಯಭೂರಿಭೇರೀನಿನದಂ ॥ ೫೪

ವ॥ ಅಂತು ಭೇರಿಯಂ ಪೊಯ್ಸಿದನನ್ನೆಗಂ,

ಚಕ್ರರತ್ನಮೊಂದೆಯಲ್ತು ಚಕ್ರಿಗಾನುಮಲ್ತೆ ದೋ
ಶ್ಚಕ್ರಮೆಂದು ಬಂದು ಮುಂದೆ ನಿಲ್ವ ಮಾಳ್ಕೆಯಿಂ ಪ್ರಭಾ ।
ಚಕ್ರಮೆಸೆಯೆ ಚೆಲ್ವುವೆತ್ತುದುದಯಮೆಂದು ಪದ್ಮಿನೀ
ಚಕ್ರವಾಳಚಕ್ರವಾಕಚಕ್ರ ಚಕ್ರವರ್ತಿಯಾ ೫೫

ಆಗಳ್ ಪ್ರಭಾತಕಾಲನಿ
ಯೋಗಮನಾಚಕ್ರವರ್ತಿ ನಿರ್ವರ್ತಿಸಿ ಪೋ ।
ಪೋಗಲ್ವೇಟ್ ಪಯಣಮನೆಂ
ದಾಗಳ್ ತರವೇಱಿದ್ದು ವಿಜಯಪರ್ವತಗಜಮಂ ॥ ೫೬

ವ॥ ಅಂತು ಸುರೂಪತರನುಂ ಸುರಭಿನಿಶ್ವಾಸನುಂ ಶಂಖಚಕ್ರನಂದ್ಯಾವರ್ತಸ್ವಸ್ತಿಕಧ್ವಜಾವರ್ತರಕ್ತಬಿಂದುಚಿತನುಂ ಮೃಗದೀರ್ಘವಿಸ್ತೃತಾಂಗುಳಿಯುಂ ಮಾನಪೂರ್ವಪೀಡವೃತ್ತಮೃದುತಿರ್ಯಗ್ವಿಲೋಲಮೃದುಶಿರೋರುಹನುಂ ಸುಸ್ನಿಗ್ಧಸಮಪೂರ್ವವೃತ್ತ ಸಮನಾಹಪರಿಪೂರ್ಣವೃತ್ತದಂಡಪರಿವೇಷ್ಟಿತನುಂ ಆಯತಪೃಥುಪಿಬಸ್ತನುಪದಿಗ್ಧಂದಪೂರ್ವಪುನರಕ್ತಾರೋಮಾಶ್ಲಿಷ್ಟಸಮಸಮಾಸಗದಾನುತ್ಕೃಷ್ಟಪರಿಪೂರ್ಣಮುಖನುಂ ಮಾನೋನ್ನತಾವನತಕುಂಭನುಂ ಸ್ಥಿರಪ್ರಸನ್ನದೃಷ್ಟಿರಕ್ತಾಪಾಂಗಮಧುಪಿಂಗಳವ್ಯಕ್ತಶುಕ್ಲಕೃಷ್ಣಭಾಗಸ್ನಿಗ್ಧಮೃದುಸೂಕ್ಷ್ಮನೀಳದೀರ್ಘಬಾಹುಳಾಂಚಿತಪಕ್ಷ್ಮನೇತ್ರನುಂ ಮೃದುಸುಪಿತ್ರಬಹಳಪ್ರಳಂಬಶಿವಾತರಮಹಾಶ್ರೋತ್ರೊಪತಿಭಿನ್ನಾತನುತ್ಕೃಷ್ಟಾ ವಿಪುಳಚೂಳಿಕಾದುಂದುಭಿನಿರ್ಘೋಷಕರ್ಣನುಂ ಸ್ನಿಗ್ಧಕೃಷ್ಣಬಹುಳದೀರ್ಘಕೇಶನುಂ ಉತ್ಪನ್ನಸಮ್ಯಸ್ಯದುಗತವ್ರೋತಮಸ್ತಕಲಂಡನಿರ್ಮನಿರ್ವ್ಯಾಣೋನ್ನತೋವಗ್ರಾಹವಿಭಕ್ತವಿದುವಿಧಾನಶರೀರನುಂ ಅಲ್ಪಘೋಟನುಮನುನ್ನತಶಿಖನುಂ ಪೀನಮಾಂಸಕಟಶ್ಲಿಷ್ಟನುಂ ಅತಿದೀರ್ಘಸ್ನಿಗ್ಧಕೃಷ್ಣಮದನುಂ ಅನುಪೂರ್ವದೀರ್ಘವಾಳಧಿಯುಂ ಮಾನುಷದುಗ್ಧವಿಳಾಸನೋಪೇತಪೇಚಕನುಂ ಸಮಸಂಕ್ಷಿಪ್ತಪ್ರಚ್ಛನ್ನವಪ್ರಾಯಮಪಿಂಜೋತ್ಪನ್ನಾಂಡಕೋಶನುಂ ಅಪರಿಭಿನ್ನಾಂತಶ್ಲಕ್ಷ್ಣಶ್ಲಿಷ್ಟಸಂನಿಕಾಂತರಸುಸನ್ನಿವಿಷ್ಟಸುಸಂವೃತ್ತಾಂತರರ್ಧಚಂದ್ರಾಕಾರವಿಂಶತಿನಖನುಂಮನುಪೂರ್ವೋಚಿತಮಾಂಸಸ್ಥಿರನೋಪದಿಗ್ಧಗಾತ್ರಪರನುಂಪೀನೋಪಚಿತಮಾಂಸವಕ್ಷೋನಾಭಿಕಪೋಳೋರೋಮಣಿಯುಂ ಪೀನಾಯತಾಮ್ರಪಲ್ಲವಕೋಶಸುಕೋಶ್ವಮೋಹನನುಂ ವಿಪುಳಾಸನನುಂ ಅನುಪೂರ್ವಧರನಾಕಾರವಂಶನುಂ ಭೇಜುಪರಿಪೂರ್ಣಹ್ರಸ್ವಗ್ರೀವನುಂ ಮಹಾವ್ಯೂಢೋರಸ್ಕನುಂ ವಿಪುಳೋಪಚಿತಾಂಸನುಂ ಸಮಪಾರ್ಶ್ವನುಂ ಅಜಕುಕ್ಷಿಯುಂ ಗೋಧೋತ್ರಿಷ್ಟನುಂ ಮೋಹಜಘನಾಪರನುಂ ಅನಿಮ್ನನಾಭಿಯುಂ ಹ್ರಸ್ವಚೂಚುಕ

ನುಂ ಸುವೃತ್ತಪಸ್ಥರನುಂ ಸುಸಂಚಿತಪೂರ್ವಾಪರಘಳೀಹಸ್ತಗಾತ್ರನುಂ ಪರಿಪೂರ್ಣಶ್ಲಿಷ್ಟಪಾರ್ಷ್ಣಿಯುಂ ಆಂಸಳಕಾಳಭಾಗನುಂ ಮೃದುಸ್ನಿಗ್ಧಪ್ರಭೂತಸೂಕ್ಷ್ಮೈಕಜಾತರೋಮನುಂ ಅಪ್ರಣಾಕಭಾವಿಳಶ್ಲಿಸ್ಥಿತಚಳನುಂ ಶ್ಲಕ್ಷ್ಣಸ್ನಿಗ್ಧಮೃದುಬಹಳಚ್ಛವಿಯುಂ ಬಂಧುಜೀವಶಾಕಪ್ರಸ್ತಾಸಪದ್ಮಪಾರಜತಪಂಚಾಸತಳವೆಂಬ ಸಪ್ತಧಾಸ್ಥಿತಸುಮಸ್ಪ ವಿಜಯಾಪರ್ವತಗಜೇಂದ್ರಂ ಬಂದು ಮುಂದೆ ನಿಲ್ವುದುಂ, ?

ಇದನಾನೆ ಮಾಡುವಾಗಳ್

ಬಿದಿ ಗಿರಿಗಳ್ ನೆರೆದ ರೂಪಪರಮಾಣುಗಳಿಂ ।
ವದಿನಿರ್ಮವಕ್ಕುಮೆನೆ ತನ
ಗೊದವಿದಗುರ್ವಿನೆಯು ಮುಂದೆ ನಿಂದತ್ತು ಗಜಂ ॥ ೫೭

ವ॥ ಅಂತು ದಿಗ್ಗಜೇಂದ್ರ ದೇವಾಂಶದೊಳ್ ನಿರ್ಮಿಸಿದಂತಿರ್ದ ವಿಜಯಪರ್ವತಗಜಮಂ ನೋಡಲೊಡಂ,

ಪರಿಪೂರ್ಣೋತ್ಕಟದಾನಧಾರೆ ಕಟದಿಂ ಪಾಯ್ತಿರ್ಪುದುಂ ಪೆರ್ಚಿ ಪುಷ್ಕರದಿಂ ಶೀಕರನಿರ್ಝರಂ ಸುರಿವುದುಂ ನೇತ್ರಂಗಳೊಳ್ ಬಿಂದು ಬೆ ।
ಳ್ದೊರೆಯುಂ ಪೋಲ್ತುದುಮುರ್ಬಿ ಕಾರ್ಮುಗಿಲ ನೀರ್ವೋಲ್ ಕೋಶದಿಂ ವಂ ಮದಂ
ಸುರಿಯುತ್ತಿರ್ಪುದುಮೊಪ್ಪೆ ಚಕ್ರಿಯ ಮನಂಗೊಂಡತ್ತು ಮತ್ತದ್ವಿಪಂ ॥ ೫೮

ದಕ್ಷಿಣಕಟಮೆನೆ ಸಿವುಱುವ
ದಕ್ಷಿಣರದನದೊಳೆ ಹಸ್ತಮಂ ಪೇಱುವ ಚೆ ।
ಲ್ವೀಕ್ಷಣಹರಮೆನೆ ಜಯಮನ
ನಕ್ಷರಮಱಿಪಿದುದು ಭರತರಾಜಮದೇಭಂ ॥ ೫೯

ದಂತೋತ್ಸಂಗಸ್ಥಿತಜಯ
ಕಾಂತೆಗೆ ಚೆಲ್ವಾಗೆ ಪಿಡಿದ ಸೀಗುರಿದಪೆಯಿಂ ।
ಬಂತೆವೊಲೆಸೆದುವು ಮದಜಳ
ಮಂ ತಣಿಯುಣಲೆಱಗಿ ಸುಳಿವ ಮದಮಧುಪಂಗಳ್ ॥ ೬೦

ಇದು ವಿದ್ವಿಷ್ಟಪ್ರತಾಪೋದಯಮದವದಹನೋದ್ರೇಕವಿಧ್ವಂಸಿನೀಳಾಂಬುದಧಾರಾಸಾರವೆಂಬಂತೊದವಿದ ಮದಧಾರಾಜಳಾಸಾರದಿಂದು ।

ಬೆರ್ಚಿದಗುರ್ಬಿಂ ತಾಳ್ದಿನಿಂದೂರ್ಜಿತಜಯಗಜಮಂ ರಾಗದಿಂದೇಱಿದಂ ನೀ
ರದಗರ್ಜದ್ಭೂರಿಭೇರೀರವಬಧಿರಿತದಿಙ್ಮಂಡಲಂ ಸಾರ್ವಭೌಮಂ ‖ ೬೧

ವ॥ ಅಂತಧರೀಕೃತಸಪ್ತಚ್ಛದಾಮೋದಗಜಮದಗಂಧಾಂಬುಕುಲ್ಯಾಪ್ರವಾಹದೊಳಂ ಅಪಹಸಿತಶರದಿಂದುಕುಂದಸ್ತಬಕಕರ್ಣಚಾಮರರಾಜಹಂಸಸಲೀಲೋತ್ತಂಸದೊಳಂ ವಿಜಯಶ್ರೀಕೇಶಹಸ್ತಶಂಕಾಕಾರಿಶಂಖಕೇಳೀಮಯೂರಶೋಭೆಯೊಳಂ ಗಗನಗಂಗಾತರಂಗಾಯಮಾನಕದಳಿಕಾಕಾನನಕಮನೀಯದೊಳಂ ವಿಕ್ರಮಕ್ರೀಡಾಪರ್ವತವಿಪರ್ಯಾಸಿರ್ದ ವಿಜಯಪರ್ವತಗಜೇಂದ್ರಮನೇಱಿ ದಂಡಚಕ್ರರತ್ನಂಗಳ್ ಮುಂದೆ ನಡೆವಿನಂ ಅನುಕೂಲಾನಿಲಾಂದೋಳಾಯಮಾನರಾಜಕುಂಜರವಿಜಯಕದಳಿಕಾತರಂಗಿತಗಗನಾಂಗಣನುಂ ಉದಾತ್ತಹೇಷಾರವಮುಖರಿತಬಹುಭಂಗಿರಂಗತ್ತರಂಗಿತಧರಣೀತಳಾಂಗಣನುಂ ಅನೇಕಸೇವಕಕ್ಷತ್ರಿಯಾತಪತ್ರಮಂಡಲಪಿಹಿತದಿನಕರನುಂ ಉಚ್ಛಳಿತಬಹಳಧೂಳೀಪಟಲಪಿಹಿತರಿಪುನೃಪತಿನಗರನುಂ ಅತಿಪ್ರಚುರಚಳದವನಿಪಾಳಸಂಚಳಚ್ಚಾಮರಮರುತ್ಪ್ರೇಂಖೋಳಿತಾಭರಣವಿಚಿತ್ರನೇತ್ರವೈಜಯಂತಿಕಾಂಚಳನುಂ ಅತಿಚಕಿತಾರಾತಿಶುದ್ಧಾಂತಕಾಂತಾತ್ಯಂತಚಿಂತಾಶ್ವಾಸಾನಿಲಾಂದೋಳಿತಕುಚಸಿಚಯಾಂಚಳನುಂ ಉದ್ದಾಮಪದಾತಿಪದಕ್ಷೋಭಸಂಚಳಿತಧರಾಚಕ್ರನುಂ ಅಖಿಳದಿಗ್ವಿಜೃಂಭಣಪ್ರಯಾಣಮಂಗಳಾನಕಾನೇಕರವಶ್ರವಣಕಂಪಿತಪರಚಕ್ರನುಮಪ್ಪಾಗಿ ನಡೆಯೆ,

ಅಡಿಯಿಡಲೀಧರಾವಳಯಮಿಟ್ಟೆಡೆಯೆಂಬಿನಮಭ್ರಮಂಡಲಂ
ಕಡುನಳಿದಾದುದೀಬಲದ ಧೂಳಿಯೊಳೆಂಬಿನ ಮೊಂದನೊಂದು ತ ।
ಳ್ತಡೆಗಿಱಿದೆತ್ತಲುಂ ನಡೆವ ದಂತಿಘಟಾಳಿಯಿನೆತ್ತಮೋದುದಾ
ಮೆಡೆಯದು ಪೇೞ್ ದಿಶಾವಳಯಮೆಂಬಿನಮಾದುದದೊಂದು ವಿಸ್ಮಯಂ ‖

ತಡೆವಂ ಗಂಗಾದ್ವಾರದಿ
ನೆಡೆಯೊಳ್ ಬೇಡಿಲ್ಲ ಭರತರಾಜಂಗೆಂದೇಂ ।
ನಡೆದುದೊ ಪೆರ್ಬಡೆ ಗಂಗೆಯ
ತಡಿವಿಡಿದೆರಡನೆಯ ಗಂಗೆ ನಡೆವಂತಾಗಳ್ ‖ ೬೩

ಸಾಗರದೊಳಗಿರ್ದಂಕದ
ಮಾಗಧನಂ ಕಟ್ಟಿದಲ್ಲದಿರನರಸನೆನು ।

ತ್ರೋಗಡಿಸದೆ ನಡೆದುದು ಬಲ
ಸಾಗರಮಾಸಾಗರಾಂಬರಂ ತರತರದಿಂ ॥ ೬೪

ವ॥ ಆಗಳ್,

ಚತುರಂಗಬಲಸಮನ್ವಿತ
ರತರ್ಕ್ಯವಿಕ್ರಮರನೇಕಕರಿತುರಗಮಣಿ ।
ಪ್ರತತಿಗಳಂ ಮುಂದಿಟ್ಟಿವ
ನತರಾದರ್ ಚಕ್ರಿಗಳ್ಕಿ ದಂಡೋಪನತರ್ ॥ ೬೫

ಅತಿಭಯಮುಂ ತಮಗೆ ಜಮಾ
ಪತಿಮಾಡಿದೊಡಳ್ಕಿಕುಪ್ಯಸಾರಾದಿಧನ ।
ಪ್ರತತಿಯನಿತ್ತೆತ್ತಂ ಪ್ರತಿ
ಹತಭುಜವಿಕ್ರಾಂತರಂತಪಾಳರ್ ಕಂಡರ್ ॥ ೬೬

ಕಸ್ತೂರಿಕಾಂಡಕಂ ವನ
ಹಸ್ತಿರದಂ ಹಸ್ತಿಮಸ್ತಕೋದ್ಭವಮುಕ್ತಾ ।
ವಿಸ್ತಾರಮೆಂದು ತಂದು ಸ
ಮಸ್ತವನಾಧೀಶರವನಿಪತಿಯಂ ಕಂಡರ್ ॥ ೬೭

ವ॥ ಮತ್ತಂ ಪ್ರಾಚ್ಯಾರ್ಣವತಟನಿಕಟವರ್ತಿಗಳಪ್ಪತಿಪ್ರಚಂಡಮಂಡ
ಳಿಕರ್ ಭರತೇಶ್ವರಚಕ್ರವರ್ತಿಯ ಬರವಂ ಕೇಳ್ದು,

ಕರಿಸಂಘಾತಮುಮಂ ಹಯವ್ರಜಮುಮಂ ಪಿಂತಿಕ್ಕಿ ತೂರ್ಯಸ್ವನೋ
ತ್ಕರಮಂ ಮಾಣಿಸಿ ಹೇತಿಮುಕ್ತಭಟದೋರ್ದಂಡಾಗ್ರಶುಂಭದ್ಧ್ವಜೋ ।
ತ್ಕರಸಂದೋಹಮುಮಂ ಬಿಸುಟ್ಟುಪುಗಿ ಪಿಂಛಚ್ಛತ್ರಮಂ ಪ್ರಶ್ರಯಾ
ಕರವೇಷೋಚಿತರರ್ಘ್ಯಹಸ್ತರಿದಿರಂ ಬಂದರ್ ಭಯಭ್ರಾಂತಿಯಿಂ ॥ ೬೮

ವ॥ ಅಂತು ತನ್ನ ಬಲಂ ಬೆರಸೆಲ್ಲಿಯುಂ ನಿಲ್ಲದೆ ಬಂದು ಕಾಲಾನುಭಾವ
ದಿಂ ಯುಗಾರಂಭದ ವರ್ಷಾರಂಭದೊಳಂ ತಗುಳ್ದೀಪ್ವೀಪದೊಳಗಣ
ನದೀನದಂಗಳ ಜಲಂಗಳನೊಳಕೊಂಡಲಘ್ಯತ್ವದೊಳಂ ದ್ವೀಪಪರ್ಯಂತವೇ
ಷ್ಟನದೊಳಂ ನೆಱೆದು ವಜ್ರವೇದಿಕೆಯಿಂ ಪೊಱಪೊಣ್ಮದ ಲವಣಸಮುದ್ರ
ದೊಳಗನೆ ಪೊಲ್ತಿರ್ದುಪಸಮುದ್ರದ ತಡಿವಿಡಿದು ಅದಂ ನೋಡುತ್ತಂತೆ

ಬಂದು ಗಂಗಾದ್ವಾರದ ವಜ್ರವೇದಿಕೋತ್ತುಂಗತೋರಣದ್ವಾರದಂತರ್ವಣ ತುಂಗಕುಜಂಗಳ ನೆೞಲ್ಗಳೊಳ್ ನಾಲ್ವತ್ತೆಣ್ಗಾವುದದ ನೀಳದ ಮೂವತ್ತಾಱು ಗಾವುದದಗಲದ ಬೀಡಿಂಗೆ ವಾಸ್ತುವಿಭಾಗಕ್ಕೆಡೆಯಿಲ್ಲದೆ ಕುಱುಂಬಗಳೊಳ್ ಬೀಡಂ ಬಿಡಿಸಿದಾಗಳ್,

ಗಂಗಾದ್ವಾರಾಂತರ್ವಣ
ತುಂಗಕುಜಂಗಳ ನೆೞಲ್ಗಳುಂ ತೀಡುವ ತೆ ।
ಙ್ಗಂಗಾತರಂಗವುರುದಾ
ಸಂಗಮುಮೇಂ ಪಡೆಯ ಸೇದೆಯಂ ಪಿಂಗಿಸಿತೋ ॥ ೬೯

ವ॥ ಆಗಳ್,

ಭುವನಸ್ತುತ್ಯಾದಿಚಕ್ರೇಶ್ವರಬಲರಜದಿಂ ಪೂತಮಾಗಿರ್ದನೆಂಬು
ತ್ಸವದೊಳ್ ವೇಳಾತರಂಗೋತ್ಕರಕರಚಯದಿಂದಾಡುವಂತಿರ್ದ ಪೂರ್ವಾ ।
ರ್ಣವಮಂ ಬಾಹಾಬಳೋಪಾರ್ಜಿತವಿಜಯಯಶೋದುಂದುಭಿಧ್ವಾನಧೀರಾ
ರವಮುಂ ಕೈಕೊಂಡುದಂ ಕ್ಷತ್ರಿಯಕುಲತಿಲಕಂ ನೋಡಿದಂ ಚಕ್ರನಾಥಂ ॥

ವ॥ ಅಂತು ಗಗನತಳಮಂ ತಱುಂಬುವಂತೆ ನೆಗೆದ ವಜ್ರವೇದಿಕೆಯುಮಂ ಅಂಬುದಪಥಕ್ಕಾಲಂಬಮಿರ್ಪಂತಿರ್ದ ಲವಣಾಂಬುರಾಶಿಯಂ ನೋಡಿ,

ಎನಗೆ ಪೊಸಂತಿಲೀನೆಗೆಟ್ದ ವಜ್ರದ ವೇದಿಕೆ ಗೋಷ್ಪದಂ ದಲೀ
ವನನಿಧಿ ಪಾಯ್ದು ಮಾಗಧನನೀಗಳೆ ಕಟ್ಟುವೆನಿಲ್ಲಿ ಪೂಣ್ದು ನಿ ।
ಲ್ವನಿತುವರಂ ಸುರಂ ಗಹನಮೇ ಪುದಿದವ್ವಳಿಪೆನ್ನ ಕಾಯ್ಪು ಪೋ
ಪಿನಮಿರದೀಗಳೇಂ ಟುವೆನೊ ದಾಂಟುವೆನೋ ಲವಣಾಂಬುರಾಶಿಯಂ ॥ ೭೧

ಚಕ್ರದೊಳೇಂ ಮತ್ತೆ ಜಗ
ಚ್ಚಕ್ರಮೆ ಮುಂದಕ್ಕೆ ದಂಡರತ್ನಂಬರಮಾ ।
ಚಕ್ರಮೆನಗಖಿಳಧರಣೀ
ಚಕ್ರದೊಳೆನ್ನೆನ್ನ ಬಾಹುದಂಡಮೆ ಸಾಲ್ಗುಂ ॥ ೭೨

ವ॥ ಎಂದು ನಿಜಭುಜಬಳಾವಲೇಪಮನೆ ಮುಂದಿಟ್ಟು ನುಡಿದ ಚಕ್ರವರ್ತಿಯಂ ಪುರೋಹಿತಪ್ರಮುಖಕುಲವೃದ್ಧರ್,

ದೇವರ ಭುಜಗರ್ವಕ್ಕೇ
ನಾವುದುಮೞಿದುಂಟೆ ಸಂದ ಚಕ್ರಿಗಳೆಸಕಂ ।

ದೇವ ನಿನಗೆಸಕಮುದಱೊಳ್
ದೇವರ್ ನೆಗೞ್ಕೆವೇೞ್ಕುಮೆಂಬುದುಮಾಗಳ್ ‖ ೨೩

ಅಧಿವಾಸಿತಜೈತ್ರಾಸ್ತ್ರಂ
ವಿಧುವಿಶದದುಕೂಲವಸನಶೋಭಂ ನಾನಾ ।
ವಿಧಮಂತ್ರಾನುಷ್ಠಾನಂ
ಪ್ರಧಾನನುಪವಾಸದಿಂ ತ್ರಿರಾತ್ರಮನಿರ್ದಂ ‖ ೨೪

ವ॥ ಅಂತು ದರ್ಭಶಯನತಳಗತನಾಗಿರ್ದು ಪಂಚಪರಮೇಷ್ಠಿಗಳ್ಗೆ ಪೂಜೆಯುಂ ಪುರೋಹಿತಂ ಮಾಡಿ ಶಾಂತಿಕಪೌಷ್ಟಿಕಕ್ರಿಯೆಯುಂ ನಿರ್ವರ್ತಿಸಿ ಮಱುದಿವಸಂ ನೇಸಮೂಡೆ ಮಂಗಳಾಳಂಕರಣಾಳಂಕೃತನಾಗಿ ಪಡೆವಳ್ಳನಂ ಪಡೆಗೆ ಕಾಪುವೇೞ್ದು ದಿವ್ಯಾಸ್ತ್ರಂಗಳಂ ತೆಕ್ಕನೆ ತೀವಿ ಜಳಸ್ಥಳಾವಿಳಂಬಿಗಳಪ್ಪ ಗಿಳಿಯ ಬಣ್ಣದ ಕುದುರೆಗಳೊಳ್ ಪೂಡಿದಜಿತಂಜಯಮೆಂಬ ರಥಮನೇಱಿ ತನ್ನ ಮನದನ್ನನಪ್ಪ ಸಾರಥಿಯಂ ಚೋದಿಸಲ್ವೇೞ್ದು ವೇದ್ಯಾರೋಹಣಂ ತನಗೆ ವಿಜಯಶ್ರೀವಿವಾಹವೇದ್ಯಾರೋಹಣಮನೆ ಪೋಲೆ,

ವೇದಿಯನಾತ್ಮಗೃಹಾಂಗಣ
ವೇದಿಯೊಳೆಣೆಯಾಗೆ ಬಗೆದು ಜಳಧಿಯುಮಂ ಲ ।
ಕ್ಷ್ಮೀದಯಿತಂ ನೀರ್ವರಿಯಿಂ
ದಾದಮೆ ಕಿಱಿದೆಂದು ಬಗೆದು ನೋಡಿದನಾಗಳ್ ‖ ೨೫

ವ॥ ಅಂತು ತನಗೆ ವಿಜಯಕಾರ್ಯಸಿದ್ಧಿದ್ವಾರಮಿರ್ಪಂತಿರ್ದ ಗಂಗಾದ್ವಾರದೊಳಗನೆ ಲವಣಜಳಧಿಯಂ ಪೊಕ್ಕಾಗಳ್,

ನೆಗಪ್ದೆನ್ನ ಗುಣಮಲಂಘ್ಯಂ
ಜಗದೊಳದಂ ಕಿಡಿಸಿದಪ್ಪನೀನೃಪನೆಂದ ।
ಚ್ಚಗದೊಳೆ ಪುಯ್ಯಲಿಪಂತೆವೊ
ಲೊಗೆದುದು ಚಳದನಿಲಹತಪಯೋನಿಧಿನಾದಂ ‖ ೨೬

ಪ್ರೋದ್ವೃತ್ತತರಂಗಬಾಹು ಸ
ಮುದ್ಯಚ್ಛೀಕರವಿಮಿಶ್ರಮುಕ್ತಾಕ್ಷತದಿಂ ।
ದಾದ್ಯಮಹೀಪತಿಗೆತ್ತಿದ
ಪಾದ್ಯಮನನುಕರಿಪುದಾಯ್ತು ವಾರ್ಧಿವಿಳಾಸಂ ‖ ೨೭

ತರಳತರಂಗತುರಂಗಂ
ಕರಿಮಕರಕರೀಂದ್ರಮಖಿಳಶಫರಪದಾತ್ಯ್ಯ ।
ತ್ಕರಮುಗ್ರಗ್ರಾಹರಥಂ
ಭರತಂಗಿತ್ತುದು ಪಯೋಧಿ ಬಳವಿಳಸನಮಂ ॥ ೭೮

ಪುಗೆ ಪಲವುಂ ತೊಱೆಗಳ ನೀ
ರಗಾಧಜಳರಾಶಿ ಕುಡಿದು ತಣಿಯದೆ ಪಾತಾ ।
ಳಗಣಂಗಳವೆತ್ತಂ ತಾ
ಳ್ದುಗೆವರೆಗಂ ತೆಱೆದ ಬಾಯನನುಕರಿಸಿರ್ಕುಂ ॥ ೭೯

ವ॥ ಮತ್ತಮಂಬರಂಬರಂ ಬಗಿದು ನಿಮಿರ್ವ ತೆರೆಗಳೆಂಬ ಗಿರಿಗಳ ಮೇಗೆ ಕೃತಕಗಿರಿಗಳಿರ್ಪಂತಿರ್ದ ವೀಣಾಧರಕಿನ್ನರಪನ್ನಗಾಮರರುಮ ನೋಳ್ಪವಟ್ಟು ಬರ್ಪ ಶಂಖದ ಬಳ್ಳವಳ್ಳಿಗಳುಮನಲ್ಲವಿಳ್ಳಿಯಾಗಿ ಪೋಗ ಲೀಯದೆ ತಳ್ತು ಪರಭಾಗಂಬಡೆದ ವಿದ್ರುಮಲತೆಗಳುಮಂ ಕರಿಮಕರಂಗ ಳ ಕಯ್ವೋಱನೊಳ್ ಬಿಬ್ಬಿಱಿ ಬಿಱಿದೊಡೆದ ಮುಕ್ತಾಪುಟೋದರಂಗಳೊ ಳಗಣಿಂದಮುಚ್ಚಳಿಸಿದ ತಾರಾತರಳಮುಕ್ತಾಫಳಂಗಳುಮನಟ್ಟಿವಟ್ಟು ನೋಡುತ್ತುಂ ಪೋಗೆವೋಗೆ,

ರಥದಿಂದಂ ಮುಂಚೆ ಮನೋ
ರಥಂ ಮನೋರಥದಿನತ್ತಲದು ಮುಂಚೆ ಬೃಹ ।
ದ್ರಥಮಿಂತು ಭರತರಾಜನ
ರಥದ ಮನೋರಥದ ಬೇಗಮೊದವಿದುದಾಗಳ್ ॥ ೮೦

ಆಲವಣಜಳಧಿಯಂ ಪರಿ
ಕಾಲನೆ ಬಗೆವಂತೆ ಬಗೆದು ಸಾರಥಿ ರಥಮಂ ।
ಲೀಲೆಯೆ ಚೋದಿಸೆ ತೆರೆಗಳ
ಮಾಲೆಯನವಯವದೆ ದಾಂಟಿ ಪರಿದುವು ಹರಿಗಳ್ ॥ ೮೧

ಕದುರೆಯ ಖುರಂಗಳನಿಸಾ
ಱದೆಯುಂ ಚಕ್ರಂಗಳದ್ದ ಬಾರದೆಯುಂ ಚ ।
ಕ್ರದ ಚೀತ್ಕಾರರವಂ ಕುಂ
ದದೆಯುಂ ರಥಮಿಂತು ಪರಿದುದಂಭೋನಿಧಿಯೊಳ್ ॥ ೮೨

ಪತಿಯು ಜಯಸ್ತಂಭದ ಪರಿ
ಣತಿ ದಲಿದಲ್ಲದೊಡೆ ಜಳಪಥಂ ಸ್ಥಳಪಥದಂ ।
ತತಿಸುಗಮಮಾಗದೆನೆ ಪರಿ
ದು ತೋಯರಾಶಿಯೊಳದೇಂ ರಥಂ ಸೊಗಯಿಸಿತೋ ೮೩

ವ॥ ಅಂತು ಚಕ್ರವರ್ತಿಯ ಪುಣ್ಯಾತಿಶಯಮನಱಿಪಿ ಜಳಧಿಯೊಳ್ ಬೈತ್ರಂ ಪರಿವಂತೆ,

ಇನ್ನಪ್ಪ ಚಕ್ರವರ್ತಿಗ
ಳಿನ್ನೀಮಾರ್ಗದೊಳ್ ನಡೆಯಿಮೆಂದಱಿಪುವವೋಲ್ ।
ತನ್ನರಥಾಂಗಾಹತಿಯಿಂ
ಮುನ್ನಮೆ ನೀರ್ ತಳರೆ ಜೆಲ್ವುವರಿದತ್ತು ರಥಂ ॥ ೮೪

ವ॥ ಅಂತು ಶೂರಸಾರಥಿಚೋದಿತಪ್ಪ ರಥಮುಂ ಪುಣ್ಯಸಾರಥಿಚೋದಿತಮಪ್ಪ ಮನೋರಥಮುಂ ಉತ್ಸಾಹಮುಂ ಪಡೆಯೆ ಪನ್ನೆರಡುಯೋಜನಂಬರಂ ಪೋದಾಗಳ್,

ಮಿಡುಕಲ್ಕಲ್ಲಿಲ್ಲಿಂದೊಂ
ದಡಿಯುಂ ನಿನಗೆಂದು ಲವಣವಾರಾಶಿಯೆ ಬ ।
ಲ್ಪಿಡಿವಿಡಿದಂತೆ ವರೂಥಂ
ಮಿಡುಕದೆ ನಿಂದತ್ತು ಚೋದ್ಯಮಪ್ಪಿನಮಾಗಳ್ ೮೫

ವ॥ ಅಂತು ಬೀೞ್ಗುಂಡಿಕ್ಕಿದ ಬಹಿತ್ರದಂತೆ ಅಲ್ಲಿಂ ತಳರದೆ ನಿಂದ ತನ್ನ ರಥಮಂ ಕಂಡು,

ಕುಡಿವೆನೊ ಲವಣಾಬ್ಧಿಯನೀ
ಗಡೆ ತೋಳ್ಗೊಳ್ ತುಳ್ಕಿ ಬಱಿದುಮಾಪ್ಪೆನೊ ಪೇೞೆಂ ।
ದೊಡನೆಳರ್ವ ಕೋಪದಿಂ ಕಣ್
ಕಿಡಿಯಂ ಕೆಂಡಮುಮನುಗುೞೆ ಮುಳಿದಂ ಭರತಂ ॥ ೮೬

ವ॥ ಅಂತು ಮುಳಿದು,

ಕುಡಿತೆಯ ನೀರಂತೆಗೆಲುಂ
ಕುಡಿಯಲ್ಕುಂಟೆನಗೆ ಲವಣವಾರ್ಧಿಯ ನೀರಂ ।
ಕಡುಪಿದೞೊಳಪ್ಪೊಡೀಗಳ್
ಸುಡುವೆಂ ಬಾಣಾನಳಾರ್ಚಿಯಿಂ ಮಾಗಧನಂ ॥ ೮೭

ವ॥ ಎಂದು ವಜ್ರಕಾಂಡಮೆಂಬ ನಿಜವಿಜಯಕಾರ್ಮುಕಕ್ಕೆ ಸುರಕರಿಕರಾನುಕಾರಿಯಪ್ಪ ನಿಜಭುಜಾದಂಡಮಂ ನೀಡಿ ನೀಡಿಲ್ಲದೇಱಸಿ ನೀವಿ ಜೇವೊಡೆದಾಗಳ್,

ಲವಣಾಂಭೋರಾಶಿ ತೂಳ್ದುಚ್ಚಳಿಸಲೊಡರಿಸಿತ್ತೀಧರಾಭಾಗಮಂ ಪತ್ತುವಿಡಲ್ ಭೂಭೃತ್ಕುಳಂಗಳ್ ಬಗೆದುವು ಜಳಧಿದ್ವೀಪಮಧ್ಯಸ್ಥನಾನಾ ।
ದಿವಿಜಾವಾಸಂಗಳಭ್ರಕ್ಕೊಗೆದುವು ಭರದಿಂ ಕೂಡೆ ದಿಕ್ಪಾಲಲೀಲಾ
ಭವನಂಗಳ್ ಬಿರ್ದುವಿಂತಾಯ್ತಖಿಳಮಹಿತಳಕ್ಷೋಭಮಾ ಚಕ್ರಿಯಿಂದಂ ॥

ವ॥ ಅಂತಮೋಘಬಾಣಂ ಬಾಣಮನುರ್ಚಿಕೊಂಡು,

ಪುರುಪರಮೇಶ್ವರಪುತ್ರಂ
ಭರತೇಶ್ವರಚಕ್ರವರ್ತಿ ಬಂದಿರ್ದಂ ತ ।
ದ್ಧರಣಿನಿವಾಸಿಗಳುಂ ವ್ಯಂ
ತರಾಮರರ್ ಬಂದು ಕಾಣ್ಬುದವನತಮಕುಟರ್ ॥ ೮೯

ಎಂಬಕ್ಕರದಿಂದೆಸೆದುದ
ನಂಬರತಳಮೊಡನೆ ಬೆಳಗೆ ಬೆಳಪುದನಾಶಾ ।
ರ್ಯಾಂಬುಧಿ ತೊಟ್ಟಿಸಲೊಡಮಿರ
ದಂಬರದಿಂದುಳ್ಕುವುಳ್ಕುಮಂ ಪೋಲ್ತು ಶರಂ ॥ ೯೦

ಕಾಳಾಂತಪವನಹತಿಕ
ಲ್ಲೋಳಾವಿಳಜಳಧಿನಿನದಮೋ ನಿರ್ಘಾತಾ ।
ಭೀಳತರರಭಸಮೋ ಲಯ
ಕಾಳಾಂಬುದಘೋಷಮೋ ನೆಲಂ ಮೊಳಗಿದುದೋ ೯೧

ಎನೆ ಪುರಜನಮಂತಃಪುರ
ಜನಮುಂ ಪರಿಜನಮುಮಳ್ಕೆ ತದ್ರಾಜನಿಕೇ ।

ತನದಲ್ಲಿ ಬಿದ್ರ್ದ ಪಡೆದುದು
ಮನಕ್ಕೆ ಕಡುಮುಳಿಸಿನೆಸಕಮಂ ಮಾಗಧನಾ ॥ ೯೧

ವ॥ ಆಪ್ರಸ್ತಾವದೊಳಾತನ ಪರಿವಾರಾಮರರ್ ನಾನಾವಿಧಾಯುಧವ್ಯಗ್ರಪಾಣಿಗಳುಮುದಾರವೀರರಸರಭಸೋಗ್ರಪಾಣಿಗಳುಮಾಗಿ ಮಾಗಧನ ಮುಂದೆ ಬಂದು ನಿಂದು,

ಇದನಾವನೆೞ್ಚನಾತಂ
ತ್ರಿದಶಂ ಮೇಣಕ್ಕೆ ದಾನವಂ ಮೇಣಕ್ಕಾ ।
ವುದು ಗಹನಮಾತನಾತನ
ಪೊದಪುರ್ಗಮಾಪರ್ಗನಿಪ್ಪುವೆಮ್ಮೊಳೇಂ ಸಂದಪುವೇ ॥ ೯೨

ಬೆಸಸೆಮ್ಮನೀಗಳಿಂತೀ
ಬೆಸದೊಳ್ ಕಡೆಗಣಿಸಿ ಬೞಿಯುಮಾವೆಡೆಯೊಳ್ ನೀಂ ।
ಬೆಸಸುವೆಯೊ ನಿನ್ನ ಕಣ್ಣೊಳ್
ಪಸರಿಸೆ ಕಡುಗೆಂಪು ನೋಡಿಯುಂ ಸೈರಿಪೆವೇ ॥ ೯೩

ಎನೆ ಮಾಗಧನಿಂತುಱೆ ನಿ
ಮ್ಮನಿಬರ ವಿಕ್ರಾಂತಮಾದೊಡಂ ಸೈರಿಸಿಮಿ ।
ನ್ನಿನಿಸಂ ನೀಮಾಳ್ಗಳಿರಾ
ನೆ ನಿಮ್ಮ ಕುಲಪತಿಯೆನೆನಗೆ ಮಲೆವರುಮೊಳರೇ ॥ ೯೪

ಪರಿಭವದ ಪೊಱೆಯನಾಂತಿ
ರ್ದರಾತಿಗಳ್ಗಳ್ಕಿ ತನ್ನ ಕುಲಮುಂ ಚಲಮುಂ ।
ದೊರೆಯುಂ ಕಿಡೆ ಬಾೞ್ವಂ ಗಂ
ಡರೂಪಿನೊಳ್ ಗಂಡನಲ್ತು ಪೆಂಡತಿಯೆ ಪೊಲಂ ॥ ೯೫

ಅಧಟಂ ಕೊಂಡಾಡದೆ ಬೇ
ಡಿದರ್ಗೀಯದೆ ಮಱೆಗೆ ವಂದರಂ ಕಾಯದೆ ನೀ ।
ಳ್ದ್ದದವಿದ ಜಸಮನುಪಾರ್ಜಿಸ
ದಧಮನದೇತರ್ಕೆಬಾೞ್ಗೆ ಜೀವನ್ಮೃತಕಂ ॥ ೯೬

ಬಗೆಗೊಂಡ ಕುಲಧನಂ ಸಮ
ದಗಜಂ ಜಾತ್ಯಶ್ವಮೆಂಬಿವಂ ಮತ್ತೊರ್ಬಂ ।

ಪಗೆವಂಗೆ ಕೊಟ್ಟು ಚಿಃ ಕೆ
ಮ್ಮಗೆ ಬೆಸೆವವನರಸದೆಂತೊ ಪಗರಣದರಸಂ ೯೮
ಶರಶಃಳಿಯೆನೆಂಬುದನೀ
ಶರದಿಂದೆಮಗಱಿಪಲೆಳ್ಚ್ಚು ಕುಲಧನಚಯಮಂ ।
ತರಿಸಿ ಕೊಳಲ್ಬಗೆದಘಟನ
ಪುರುಳಂ ಪೂಣ್ದಾಗಳಱಿವೆನುಗ್ರಾಹವದೊಳ್ ೯೯
ಶರಚಾಪಚಕ್ರಭೀಕರ
ಕರವಾಳಾಯುಧವಿರಾಜಿ ಮತ್ಕರಯುಗಮಿಂ ।
ದೊರೆಗಿಡೆ ಪೆಱಂಗೆ ಮುಗಿವುದೆ
ಕಿರೀಟಮಿದು ಪೆಂಪುಗಿಡೆ ಪೆಱಂಗೆಱಗುವುದೇ ॥ ೧೦೦
ಕುಲದ ಚಲದಾಯದಱಿವಿನ
ಕಲಿತನದುನ್ನತಿಯನಲಸದೀಸುರಸಭೆಯೊಳ್ ।
ಪಲವಾಡುವೆನ್ನ ನಾಲಗೆ
ಬಲಸ್ಥನೊರ್ವಂಗೆ ಜೀಯದೇವೆಂದಪುದೇ। ೧೦೧
ಶರವಸಿದಂ ಕಡಿಕಡಿದುಡಿ
ದೆರಡೆರಡಪ್ಪಂತು ತಱಿದು ರಿಪುಬಲಗಹನಾಂ ।
ತರಮಂ ಸುಡಲೊಗೆವುದು ದು
ರ್ಧರಕೋಪಾಗ್ನಿಯನೆ ಮುನ್ನಮಾಂ ಪೊತ್ತಿಸೆನೇ ॥ ೧೦೨

ವ॥ ಎಂದು ನುಡಿವನಿತುಮಂ ನುಡಿದು ಮಾಣ್ದ ಮಾಗಧಾಮರನಂ ದೃಷ್ಟಪರಂಪರರಪ್ಪ ಕುಲವೃದ್ಧರೆಯ್ದೆವಂದು,

ಚಲದಭಿಮಾನದುನ್ನತಿಯ ಪೆಂಪನೆ ತಾಳ್ದಿದುವೀನಿಕಾಮಕೋ
ಮಲಭವದುಕ್ತಿಗಳ್ ಬೆಸಸುವರ್ ಪೆಱರಾರಿದನಿಂತು ಸಂದ ತೋ ।
ಳ್ವಲದದಟಂ ಪರಾಭವಮನೇಕೆಯೊ ಸೈರಿಸುವಂ ಬಲಸ್ಥನೊಳ್
ಬಲಮನೆ ಪೂಣ್ಪುದುಂ ಪರಿಭವಕ್ಕೆ ಮೊದಲ್ ಸುರಸೈನ್ಯನಾಯಕಾ ॥ ೧೦೩
ಕಡುಗಲಿತನಮುಂ ಚಾಗದ
ಪಡೆಮಾತುಂ ವಿದ್ಯೆಯುರ್ಕುಮೊರ್ವನೊಳೆಂತುಂ ।

ನಡೆಯವು ಭುವನಾಂತರದೊಳ್
ಸಿಡಿಯುರ್ಗಂ ಸಿಡಿಯರೊಳರಿದೇಂ ವಿಸ್ಮಯಮೋ ॥ ೧೦೪

ಮುನ್ನಾಲೋಚಿಸದಾವುದು
ಮನ್ನೆಗೞಿಲ್ಲಾಗದೆಂಬುದೇದೊರೆತಿದನೆ ।
ಚ್ಚುನ್ನತಯಶನಾವನದಂ
ಮುನ್ನಂ ತಿಳಿದಱಿದು ನೆಗೞ ನೆಗೞ್ವಿದನೀಗಳ್ ॥ ೧೦೫

ವ॥ ಅದಲ್ಲದೆಯುಂ ಪೂರ್ವಾಪರವಿದೇಹಂಗಳ್ಗೆ ದೇವನಿಕಾಯದೊಡನೆ ಜಿನೇಂದ್ರವಂದನಾಭಕ್ತಿಯಿಂ ಪೋದಲ್ಲಿ ಭರತಕ್ಷೇತ್ರದೊಳೀಯುಗದೊಳ್ ತೀರ್ಥಂಕರರುಂ ಚಕ್ರವರ್ತಿಗಳುಮಪ್ಪರೆಂದು ಸರ್ವಜ್ಞರ್ ಬೆಸಸೆ ಪಲವು ಸೂೞಾವೆಲ್ಲಂ ಕೇಳ್ದಱಿದೆವು,

ಸಾಮಾನ್ಯಮಲ್ತು ಶರಮಿದು
ಸಾಮಾನ್ಯಮನುಷ್ಯನಲ್ಲನಿವನೆಚ್ಚಾತಂ ।
ನಾಮಾಕ್ಷರಮಾಲಿಕೆಗಳ್
ತಾಮಱಿಪವೆ ಚಕ್ರವರ್ತಿಯೆಂಬುದನಾತಂ ॥ ೧೦೬

ಮಾಗಧ ಪೆಱತಂ ಬಗೆಯದಿ
ರಾಗದು ಚಕ್ರಿಯೊಳೊಡಂಬಡಂ ನೆಗೞಿಲ್ ನೀ ।
ನೀಗಳೆ ಪೂಜಿಸು ಶರಮಂ
ಬೇಗಂ ಪೋಗೆಱಗು ಚಕ್ರವರ್ತಿಯ ಪದದೊಳ್ ॥ ೧೦೭

ನಯಮಪ್ಪೊಡೆ ಸೇವಕವೃ
ತ್ತಿಯೆ ದಲ್ ನಮಗೆಳೆವ ತೊಱೆಯನಿದಿರಿಸುವುದದೆ ।
ಲ್ಲಿಯ ಗಾಂಪು ಚಕ್ರವರ್ತಿಯೊ
ಳಯಶಂ ನಮಗುಱದು ಬೇಗಮೆಱಗದೊಡುಱುಗುಂ ॥ ೧೦೮

ಪುರುಪರಮೇಶ್ವರಪುತ್ರಂ
ಚರಮಾಂಗಂ ಚಕ್ರವರ್ತಿಯೆಂದೊಡೆ ಪೇೞಿಲ್ ।
ದೊರೆ ಪೆಱರಾರ್ ಭರತನೊಳೆನೆ
ಕರಗಿದುದಾಗರ್ವಪರ್ವತಂ ಮಾಗಧನಾ ॥ ೧೦೯

ವ॥ ಅಂತು ನಿಜಶೌರ್ಯಮದಜ್ವರಂ ಮಂತ್ರಿವರ್ಗವೈದ್ಯವಚನೌಷಧಿಗಳಿಂ ಪತ್ತುವಿಡೆ,

ಮುನ್ನಂ ಪೂಜಿಸಿ ಶರಮಂ
ರನ್ನದ ಪಡಲಗೆಯೊಳಿಟ್ಟು ನಿಜಪರಿವಾರಂ ।
ತನ್ನೊಳ್ಪನಿತುಂ ಬೆರಸು ಭ
ಯನ್ನಡುಕಮನೀಯೆ ಬಂದು ಕಂಡಂ ದಿವಿಜಂ ॥ ೧೧೦

ಪೊಂಗುಳಿದು ಭರತನೃಪಚರ
ಣಂಗಳ್ಗೆ ಮಾಗಧಾಮರಂ ವಿನಮಿತಸ ।
ರ್ವಾಂಗಭರಂ ಚಜ್ಜಾರು ಭು
ಜಂಗನ ಕೊರಲಂತೆ ಬಾಗಿದಂ ಮೂಱಿಡೆಯೊಳ್ ॥ ೧೧೧

ತಳಮಳಗುತ್ತೆ ಬಗುವುದುಂ
ವಿಳಸನ್ಮಾಗಧಕಿರೀಟರತ್ನಾಂಶುಗಣಂ ।
ಗಳಯಿಸಿದುದವನ ಗರ್ವಮೆ
ಗಳಯಿಸುವಂತಿರೆ ನೃಪೇಂದ್ರಪದಸರಸಿಜದೊಳ್ ॥ ೧೧೨

ಚಕ್ರಂ ಪುಟ್ಟಲೊಡಂ ಪರ
ಚಕ್ರಭಯಂಕರ ಬರಲ್ಕೆವೇೞ್ಪುದನಱಿದೆಂ ।
ವಿಕ್ರಮಮನುಚಿದೆನೆನತೊಂ
ದಕ್ರಮಮಂ ಸೈರಿಸೊಂದು ಸೂಡ್ ಚಕ್ರಧರಾ ॥ ೧೧೩

ವಿಜಿತರಿಪುನೃಪ ಭವತ್ಪದ
ರಜದಿಂದಂ ವಾರ್ಧಿಯೊಂದುಪೂತಮೆ ಪೊದಾಂ ।
ಬುಜಸೇವೆಯಿಂದಮಾನುಂ
ವಿಜಯಶ್ರೀಯುತ ಪವಿತ್ರಗಾತ್ರನೆನಾದೆಂ ॥ ೧೧೪

ಎಂದೆಂದಿದು ಭರತಯಶೋ
ದುಂದುಭಿರವಮೆನಿಸಿ ದೆಸೆಗೆ ಪೊಣ್ಮುವ ನಿಜವಾ ।
ಕ್ಸೌಂದರ್ಯದೆ ಪೊಲ್ತಂ ಪುರು
ನಂದನನಂ ಪೊಗೞ್ದು ಮಾಗಧಂ ಮಾಗಧನಂ ॥ ೧೧೫

ಇವು ದಿವದೊಳಗಗ್ಗಳಮೆನಿ
ಸುವ ರತ್ನವ್ರಾತಮೆಮ್ಮ ಮನೆಯೊಳ್ ಮಿಗಿಲ।
ಪ್ಪವು ಸಿಧಿಗಧಿವಾಸಿಸಲ
ಪ್ಪವೆಂದು ರತ್ನಂಗಳನಿತುಮಂ ಮುಂದಿಟ್ಟಂ ೧೧೬

ಇವು ರತ್ನಕುಂಡಲಂ ಜಿತ
ರವಿಮಂಡಳಮಿವು ತುಡಲ್ಕೆ ಯೋಗ್ಯಂ ನಿನಗ।
ಲ್ಲವು ಪೆಱರ್ಗೆದೆಸ್ಸೆ ಭಕ್ತಿಯ
ನಿವಱಿಂದಾಂ ನಿನಗೆ ಪೇೞ್ವಪೆಂ ಚಕ್ರಧರಾ॥ ೧೧೭

ವಾರಾಶಿಯೊಳನ್ನವು ಮು
ತ್ತೋರನ್ನವು ಪಡೆಯಲಾಗವತಿತರಳತರ।
ತಾರಾಹಾರಂ ಜಿತನೀ
ಹಾರಂ ತ್ರೈಲೋಕ್ಯಸಾರಮಿಂತಿದು ಹಾರಂ ೧೧೮

ಇದು ನಿನ್ನೀಯುಗಲ್ದುರದೊಳ್
ಪೊದಱಿ ತನತೊಂದು ಜನ್ಮಮಂ ಸಫಲಂ ಮಾ।
ಡ್ಪುದಿದಿಂದುಕುಂದದಳಶಾ
ರದನೀರದನಿರ್ಮಳಂ ಭವತ್ಕೀರ್ತಿಯವೋಲ್॥ ೧೧೯

ವ॥ ಎಂದು ಮಾಗಧಾಮರಂ ತನ್ನ ಸದ್ಭಾವಸರ್ವಸ್ವದೊಡನೆ ಸರ್ವಸ್ವ ಮೆಲ್ಲಮುಮಂ ಮುಂದಿಟ್ಟಾಗಳ್,

ಕುಳಶೈಲೋನ್ನತನುಗ್ರಶಾತ್ರವಶಿರೋಮಾಣಿಕ್ಯಮಾಳಾಂಶುಮಾ
ಸಳಿತಶ್ರೀಪದಪೀಠರತ್ನಕಿರಣಂ ಚಕ್ರೇಶ್ವರಂ ವಾರ್ಧಿಭೂ।
ತಳನಾಥಂಗನುರಾಗಮಂ ಬಳೆಯಿಸಲ್ಕಷ್ಟೈಕ್ರಿಯಾತಂಡುಲಂ
ಗಳಮೆಂದಾದರದಿಂದೆ ಕೊಂಡನವಱೊಳ್ ಪತ್ತೆಂಟುರತ್ನಂಗಳಂ॥ ೧೨೦

ವ॥ ಅಂತು ಮಾಗಧನಂ ಸಂತಸಂಬಡಿಸಿ ಪೋಗಲ್ವೇೞ್ದು ನಿಜವಿಜಯ ಕಟಕಾಭಿಮುಖನಾದನಾಗಳ್ ಸಾರಥಿರಥಮಂ ಚೋದಿಸುತ್ತುಂ,

ಮಾಗಧನಂ ಗೆಲ್ದೊಸೆಗೆಗೆ
ರಾಗಿಸಿ ಜಳರಾಶಿ ನಿನಗೆ ಸೇಸಿಕ್ಕುವವೋಲ್।

ಈಗಳ್ ಸೊಗೆಯಿಸಿದುದು ಮು
ಕ್ತಾಗಣಮಿಶ್ರಿತತರಂಗಹಸ್ತೋತ್ಕರದಿಂ ॥ ೧೭೧

ಪಸರಿಸಿದ ಪದ್ಮರಾಗದ
ಪೊಸಗೆಂಪಂ ಮಾಂಸಮೆಂದು ಮುಂ ಕರ್ದುಕಲ್ಕಾ ।
ಟಿಸಿಯುಂ ಬಱಿಕದನುರಿಯೆಂ
ಬ ಸಂಕೆಯಿಂ ಪೊರ್ದದಿರ್ದುವೀಮತ್ಸ್ಯಂಗಳ್ ॥ ೧೭೦

ಸಮದಕರಿಮಕರಹತಿಯಿಂ
ಸಮುಚ್ಚಳದ್ವೀಚಿಮಾಳಿಕಾಸ್ಫಾಳಾಂತ ।
ಸ್ಸ್ತಿಮಿತಾಕ್ಷನೀಗಳೀತಿಮಿ
ತಿಮಿಂಗಿಳಂಗೆತ್ತ ನೋಱ್ಪುದೀಸ್ಯಂದನಮಂ ॥ ೧೭೩

ಕಡುಗುಣ್ಪುವೆರಸು ದಾಂಟೆಂ
ಗಡ ಮೇಱೆಯನೆಂದು ವಜ್ರವೇದಿಕೆಯಂ ತಾಂ ।
ತೊಡೆಸಕ್ಕಿವೊಯ್ವವೊಲ್ ಪೊ
ಯ್ದೊಡನೊಡನುಚ್ಚಳಿಪುವಿದಱತುಂಗತರಂಗಂ ॥ ೧೭೪

ವ॥ ಎಂಬಿನೆಗಂ ; ಅತ್ತ ವಿಜಯಕಟಕಜನಮಂಬುಧಿತಟದೊಳಿರ್ದು ಅರಸನೊಂದೆ ಮೆಯ್ಯೊಳ್ ಪೋಗಿ ಬಾರದೆ ತಡೆದುದರ್ಕೆ ಕಟ್ಟು ಕಡಿದು,

ಅರಸಂ ತುಂಗತರಂಗಭಂಗುರುಗಭೀರಾಂಭೋಧಿಯಂ ಪೊಕ್ಕನೊಂ
ದೆ ರಥಂ ಸಾರಥಿಯೊರ್ವನಾರುಮೊಡನಿಲ್ಲೆಂತೆಂತುಟಾಬಲ್ಲಿದಂ ।
ಸುರನಾಮಾಗಧನಲ್ಲಿ ಭೂಭುಜನ ದೋರ್ದಂಡಕ್ಕೆ ಪುಣ್ಯೋದಯಂ
ನೆರಮಕ್ಕೆಂದು ಪಲುಂಬಿ ಪಂಬಲಿಪುದಾಯ್ತಂತಾಕುಳವ್ಯಾಕುಳಂ ॥ ೧೭೫

ವ॥ ಅನ್ನೆಗಂ,

ಪರಿತಂದಪ್ಪುದದೊಂದದೇಂ ಮಕರಮೋ ತುಂಗಾದ್ರಿಯಂ ಪೋಲ್ವ ಪೆ
ರ್ದೆರೆಯೋ ಪೆರ್ದೆರೆಯಲ್ತು ಪೋ ಮಕರಮುಂ ತಾನಲ್ಲದುದ್ಯದ್ಧ್ವಜಂ
ಭರತಾಧೀಶ್ವರನೇಱಿ ಪೋದರಥಮಾಬಂದಂ ಧರಾಧೀಶನೆಂ
ಬ ರವಂ ಪೊಂಪುಳಿವೋಗೆ ವಾರಿಧಿತಟಂ ಚೆಲ್ವಾದುದಾಸೈನ್ಯದಿಂ ॥ ೧೭೬

ತೆರೆಗಳ ಪೊಯ್ಲಿಂ ಸ್ಯಂದನ
ತುರಗಂಗಳ್ ಪೊಗಮನೆತ್ತಿ ಬಂಚಿಸಿ ಪಟ್ಟಂ ।
ಪರಿಯೆ ತೆರೆಯಿಲ್ಲದೆಡೆಯೊಳ್
ಪರೂಥಮಪಯಪಡೆ ತಡಿಯನೆಯ್ದಿದುದಾಗಳ್ ೧೨೮

ವ॥ ಅಂತು,

ಮಣಿಸಂಘಾತಂಗಳಂ ಮಾಗಧನತಿಭಯದಿಂದಿತ್ತು ಮಂ ಚಕ್ರಿಚೂಡಾ
ಮಣಿ ಕೈಕೊಂಡಾಜ್ಞೆಯಂ ದಾಂಟದೆ ನಡೆವುದು ನೀನೆಂದಣಂ ಮಾಣದೇ ಕ।
ಕ್ಷಣದಿಂದಂ ತನ್ನ ಲೀಲಾರಥದೊಳ್ ಲವಣಾಂಭೋಧಿಯಂ ದಾಂಟಿ ನಾನಾ
ಗುಣರತ್ನಾಂಭೋಧಿ ಬಂದಂ ಸುಕವಿಜನಮನೋಮಾನಸೋತ್ತಂಸಹಂಸಂ॥

ವ॥ ಅಂತು ಸಮುತ್ತೀರ್ಣಪ್ರತಿಜ್ಞಾಪಾರಂ ಪಾರಾವಾರಪಾರವನೆಯ್ದಿದಾಗಳ್ ಗಂಗಾದ್ವಾರದೊಳ್ ಬಂದು ಕಾಣ್ಬ ಮಕುಟಬದ್ಧರುಂ ತದ್ವೇದೀತಟದೊಳ್ ಬಂದೆಱಗುವಧಿಕಾರಿಗಳುಂ ಶಿಬಿರಬಹಿರ್ಭಾಗದೊಳ್ ಬಂದು ಕೈಕೊಂಡ ಸೈನ್ಯಂಗಳುಂ ಬೆರಸು,

ನೆರೆದಂತಃಪುರಕಾಂತೆಯರ್ ಪಲಬರುಂ ಸೇಸಿಕ್ಕೆಯುಂ ಪಾರಪಾಂ
ದರಿಯರ್ ಚಾಮರಮಿಕ್ಕೆಯುಂ ಮಕುಟಬದ್ಧಾಧೀಶರಾಗಳ್ ಪಸುಂ ।
ಧರೆಯಂ ಪರ್ವಿರೆ ಪ್ಯೆಯನಿಕ್ಕೆಯುಮುದಾತ್ತೋತ್ಸಾಹದಿಂ ರಾಜಮಂ
ದಿರಮಂ ಪೊಕ್ಕನುದಾರಸಾರವಿಭವಂ ಸಂಸಾರಸಾರೋದಯಂ ॥ ೧೨೯

ಗ॥ ಇದು ದೇವೇಂದ್ರಮುನೀಂದ್ರವಂದ್ಯಪರಮಜಿನೇಂದ್ರಮುಖ
ಚಂದ್ರವಾಕ್ಚಂದ್ರಿಕಾಪ್ರಸರಪ್ರಸಾದೋದೀರ್ಣಸೂಕ್ತಿ
ಕಲ್ಲೋಲಮಾಲಾಕೀರ್ಣಕವಿತಾಗುಣಾರ್ಣವ
ಪ್ರಣೀತಮಪ್ಪಾದಿಪುರಾಣದೊಳ್
ಮಾಗಧದರ್ಪದಳನಂ
ದ್ವಾದಶಾಶ್ವಾಸಂ
ಸಂಪೂರ್ಣಂ.

---

# ತ್ರ ಯೋ ದ ಶಾ ಶ್ವಾ ಸಂ.

ಶ್ರೀಯೊಳೊಡಂಬಡಿಸಿ ಜಯ
ಶ್ರೀಯುಂ ಷಟ್ಖಂಡಮಂಡಳಕ್ಷಿತಿಯುಮನಾ ।
ತ್ಮೀಯಂ ಮಾಡುವೆನೆಂಬ ನಿ
ಜಾಯತಿಯಿಂದಂ ಸರಸ್ವತೀಮಣಿಹಾರಂ ॥ ೧

ವ॥ ಅಂತು ಭರತೇಶ್ವರಚಕ್ರವರ್ತಿ ದಕ್ಷಿಣದಿಗಂಗನಾಳಂಕಾರನಾಗಿ ನಡೆದು ದಕ್ಷಿಣಾಂಬುರಾಶಿಯನೆಯ್ದಿ ವೈಜಯಂತೀದ್ವಾರದೊಳ್ ಬೀಡಂ ಬಿಟ್ಟಾಗಳ್,

ಏಲಾಲವಂಗಲವಲೀ
ವೇಲಾವನಭೂಮಿಯೊಳ್ ನಿಧೀಶ್ವರಸೈನ್ಯ!
ವ್ಯಾಲಗಜಂಗಳ್ ವನಗಜ
ಲೀಲೆಯನನುಕರಿಸೆ ಕಣ್ಗೆವಂದುವು ಪಲವುಂ ॥ ೨

ವ॥ ಅಂತಾವನೋಪಾಂತದೊಳ್ ಮುನ್ನಿನಂತೆ ಶಿಬಿರಮಂ ನಿಱಿಸಿ ವೈಜಯಂತೀದ್ವಾರದೊಳಗಣಿಂದಮೊಂದೇ ರಥದೊಳ್ ಲವಣಜಲಧಿಯಂ ಪೊಕ್ಕು,

ಮಾಗಧನಂ ಗೆಲ್ದಂತವೊ
ಲಾಗಡೆ ವರತನುವನೊತ್ತಿ ಕಪ್ಪಂಗೊಂಡು ।
ದ್ಯೋಗದ ಕಲಿತನಮಂ ಪೊಗ
ೞ್ವಾಗಳವಾಙ್ಮನಸಗೋಚರಂ ಪಾರವನಾ ॥ ೩

ವ॥ ಅಂತು ವರತನುವಿನ ಕೈಯೊಳಭೇದ್ಯಕವಚಮುಮಂ ಚೂಡಾರತ್ನಮುಮಂ ರತ್ನಕಟಕಂಬೆರಸು ಪಲವುಂ ಪರಾರ್ಥ್ಯರತ್ನಂಗಳಂ ಕೊಂಡು ಮಗುಳ್ದು ಲವಣಸಮುದ್ರದುಪಸಮುದ್ರದ ನಡುವೆ ನಡೆದು ಚಂದನಪನಸನಾಳಿಕೇರತಾಂಬೂಲವಲ್ಲೀಪ್ರಚುರಪ್ರದೇಶಂಗಳೊಳ್ ನಿಜವಿಜಯಕುಂಜರಂಗಳಂ ವಿಹಾರಿಸಿ ಬಂದು ಸಿಂಧುದ್ವಾರದೊಳ್ ಸಮುದ್ರಕಲ್ಲೋಲಲೀಲಾಂದೋಳಿತವನದೇವತಾಂದೋಳನಾನುಕಾರಿತಾಂಬೂಲಲತಿಕಾಲಂಬಕ್ರಮುಕಮುಮಾಕಂಪಿತಮಧುಕರನಿಕರಾನುಕಾರಿ ಲತಾಗೃಹಪ್ರದೀಪಚಂಪ

ಕಮುಂ ಪ್ರೇಂಖದೋಳಿತಮನಸಿಜವಿಜಯಪ್ರಶಸ್ತಿಲೇಖನೋಚಿತಚಕ್ಷುದಶ್ರೀ ತಾಳಿಕಮುಮಪ್ಪ ವೇಳಾವನದೊಳಾವಾಸಿತವಿಜಯಕಟಕನಾಗಿ ಪೂರ್ವಸ್ಥಿತಿಯೊಳ್ ಪೋಗಿ,

ಜಳಧಿಯ ನೀರನದೊಂದಾಂ
ಗೊಳಗನ ನೀರೆಂದು ಬಗೆದು ದಾಂಟಿದ ವಸುಧಾ ।
ತಳಪತಿಗಿತ್ತಂ ತ್ರಾಸಂ
ಗೊಳುತುಂ ಸರ್ವಸ್ವಮಂ ಪ್ರಭಾಸಾಮರನುಂ ॥ ೪

ವ॥ ಅಂತಾಪ್ರಭಾಸಾಮರನಂ ನಿಜವಿಜಯಯಶಃಪ್ರಭಾಸಮೂಹದಿಂದಂ ಪ್ರದಿಪು ಸಿಂಧುನದೀತೀರಂಬಿಡಿದು ಬರ್ಪಲ್ಲಿ,

ಎಳವಿಸಿಲೀಗಳೀಗಳ್ ಮುದಿರ್ಪುದು ಚೂತಕುಜಾತವಿಾಗಳೀ
ಗಳ್ ನನೆದೋಱುತಿಂದೊಳದಿನುನ್ಮದಷಟ್ಪದವೃಂದವಿಾಗಳೀ ।
ಗಳ್ ಮೊರೆದತ್ತು ಚಂದನದ ತಳ್ಕಬಳಾನಿಕರಕ್ಕದೀಗಳೀ
ಗಳ್ ನೆಗೞ್ದತ್ತಲೇ ಪುಗಿಲದಾಗಳ್ ವೇಡ ವಸಂತರಾಜನಾ ॥ ೫

ಜೆನುಗುವ ತುಂಬಿಯಿಂಚರಮೆ ಗಾಣರ ಕಾಕಳಿ ಕೂಡೆ ಸೋರ್ವ ಮಾ
ವಿನ ಸೊನೆ ಗಂಧಸಿಂಧುರಮದಂ ತಳಿರೋಳಿ ತಗುಳ್ದು ತಳ್ತ ಕೇ ।
ತನತತಿ ಚಾಮರೋತ್ಕರದೆಲರ್ ಮಳಯಾನಿಳನಾಗೆ ರಾಜರಾ
ಜನ ಪಡೆ ಚೆಲ್ವನೇನೆಡೆದುಕೊಂಡುದೊ ಬಂದ ಬಸಂತರಾಜನಾ ॥ ೬

ವ॥ ಮತ್ತಮತ್ಯಂತಧೌತಕಲಧೌತಸ್ಥಾಸಕಾಳಂಕೃತನಕ್ಷತ್ರಮಾಲಾಪರಿಕಲಿತಕರೀಂದ್ರಂಗಳ್ ವಿಕಚಕರ್ಣಿಕಾಕಾರನಿಕೀರ್ಣಜಂಗಮಕ್ರೀಡಾಗಿರೀಂದ್ರಂಗಳಾಗೆ, ಸಕಲದಿಕ್ಪ್ರಚಳಿತರಾಜಪುತ್ರಮಯೂರಾತಪತ್ರನಿಚಯಮೆ ಸಂಚಾರೀಭೂತಚೂತಭೂಜಾರಾಮಮಾಗೆ, ವಿಜಯಕೌಸುಂಭರಕ್ತಾಂಶುಕಪತಾಕಾನಿಕಾಯಮೇ ಪಲ್ಲವಿತಾಶೋಕವನಮಾಗೆ, ಮದಾಮೋದಸುರಭಿಯುಂ ಮದಸೀಕರಾಸಾರಶಿಶಿರಮುಂ ಮದಾಮೋದಭರಮಂಥರಮುಂ ಅಪ್ಪ ಕರಿಕರ್ಣತಾಳಾನಿಳನೆ ಮಳಯರುಹನಂದನಾಂದೋಳನೋದ್ಗಂಧಿಯುಂ ಮಳಯಗಿರಿನಿರ್ಝರಾಸ್ಫಾಳಿತಶೀತಳಮುಂ ಮಳಯವಿಳಾಸಿನೀನಿರಂತರಾಳಸ್ತನತಟಸ್ಖಲನಮಂದಮಂದಗಮನಮುಮಪ್ಪ ಮಳಯಾನಿಳನಾಗೆ,

ಕರೇಣೀವೃಂದವ್ರಜೋದ್ಗಾಯನಸಮುದಯಕರ್ಣಾಮೃತಸ್ಯಂದಿಹಿಂದೋ
ಳರವಂ ಸಾಮೋದನಾನಾವಿಧಕುಸುಮರಸಾಪಾನಸಾನಂದಭೃಂಗೌ ।
ಘರವಂ ತಾನಾಗೆ ಪುಷ್ಪೋತ್ಕರಬಳವಿಜಯೋದ್ಧರ್ಪಕಂದರ್ಪಲೀಲಾ
ಕರನಾದಂ ಚೈತ್ರಯಾತ್ರೋತ್ಸವದೊಳಖಿಳಷಟ್ಖಂಡಭೂಮಂಡಲೇಶಂ॥ ೭

ವ॥ ಅಂತು ದಿಗ್ವಿಜಯಯಾತ್ರೆಯೆ ವಸಂತೋದ್ಯಾನಯಾತ್ರೆಯುನನುಕರಿಸೆ,

ಸಲಿಲಕ್ರೀಡಾಭವೋದ್ಯಜ್ಜಳಕಣನಿಕರಾಕಾರಮತ್ತದ್ವಿಪೇಂದ್ರಾ
ವಳಿಹಸ್ತಾಗ್ರೋಚ್ಚಳಚ್ಛೀಕರಸಮುದಯಮುದ್ಯಾನಕೇಳೀಚಳತ್ಪ ।
ತ್ರೀಳಶಾಖಾಕಾರಚೈತ್ರದ್ವಿರದಕದಳಿಕಾಡಂಬರಂ ಭೂರಿಕೋಳಾ
ಹಳಸೇನಾಚಕ್ರವಾಳಂ ನಡೆದುದು ವಿಜಯಶ್ರೀವಧೂತ್ಕಂಠೆಯಿಂದಂ ॥ ೮

ವ॥ ಅಂತತ್ಯಂತಪ್ರವರ್ಧಮಾನವಿಜಯೋದ್ಯೋಗದಿಂ ವಿಜಯಾರ್ಧಾಚಳೋಪಾಂತಮನೊಯ್ಯನೊಯ್ಯನೆಯ್ದೆವರ್ಪಾಗಳ್,

ಚಿರವಿಕ್ಷೋಭಿತಸಿಂಧುತೋಯಶಿಶಿರಂ ತತ್ತೀರನಾನಾಲತೋ
ತ್ಕರಸಂಘಟ್ಟನಮಂಥರಂ ಮದಪಯಃಕಂಡೂಳಗಂಡಸ್ಥಳಂ ।
ದ್ವಿರದೋದ್ಘೃಷ್ಟಘನಸ್ರವತ್ಸರಳಸಾರಾಮೋದಮುದ್ಧಾಮಭೃಂ
ಗರವಂ ಚಕ್ರಿಯನಾಱಿಸಿತ್ತು ವಿಜಯಾರ್ಧೋಪಾಂತಮಂದಾನಿಳಂ ॥ ೯

ವ॥ ಮತ್ತಮಂತಂತೆ ಬರೆವರೆ,

ಗಗನಾಭೋಗಮನೆಯ್ದೆ ನೀಳ್ದ ಮಣಿಕೂಟಾಟೋಪಮೆಂಬಂತೆ ದಿ
ಟ್ಟಿಗೆ ಮುನ್ನಂ ಬರೆ ಸಾರೆ ಸಾರೆ ತನುವಂ ತತ್ಕುಂಜಸಂಜಾತಭೂ ।
ಜಗಳತ್ಪುಷ್ಪಪರಾಗಸಾರಭವಹನ್ಮಂದಾನಿಲಂ ಸೋಂಕೆ ತೊ
ಟ್ಟಗೆ ಕಣ್ಗೊಂಡುದು ಪಾರವಂಗೆ ವಿಜಯಾರ್ಧಾದ್ರೀಂದ್ರಶೋಭೋದಯಂ॥

ವ॥ ಆವಿಜಯಾರ್ಧದ ಕಡೆವಿಡಿದು ಮೇಗೆ ನೆಗೆದ ವನವೇದಿಕಾಪ್ರದೇಶಮನೆಯ್ದಿದಾಗಳ್,

ಅದಱೊಳಗೆ ಪುದಿದ ಸಪ್ತ
ಚ್ಛದಚಂಪಕನಾಗಪೂಗಪುನ್ನಾಗವನಂ ।
ಪುದಿದ ಪೊಸಗಂಪಿನೊಳ್ ಬಳ
ಸಿದುದಾಗಳ್ ಪುಗುವ ಭರತನಂತಃಪುರಮಂ ॥ ೧೧

ವ॥ ಅಂತು ಸೊಗಯಿಸುವ ವನವೇದಿಕೆಯ ನಾನಾಮಣಿಮಯೂಖ ಮಾಲಾವಿರಾಜಿತೋತ್ತುಂಗತೋರಣದ್ವಾರದಿಂದಂ ನುಗುಳ್ದು ವನವೀಧಿವಿಡಿದುಬಂದು ವಿಜಯಾರ್ಧಮಧ್ಯಮಕೂಟಾಸನ್ನಪ್ರದೇಶನಿವೇಶಿತಶಿಬಿರನಾಗಿ ನಿಯಮದೊಳಿರ್ದ ಭರತೇಶ್ವರಚಕ್ರವರ್ತಿಯಿರವನಱಿದು,

ಸಿತಕುಸುಮಶೇಖರಂ ಚ
ರ್ಚಿತಚಂದನನತಿವಿಳಾಸವಿಧೃತದುಕೂಲಂ ।
ಧೃತರತ್ನಾರ್ಘ್ಯಂ ಬಂದಂ
ಪತಿಗಿದಿರಂ ಶಂಖಸಿಧಿಯೆ ಬರ್ಪಂತಾಗಳ್ ॥ ೧೨

ಮಣಿಮಕುಟಂ ಶಿಖರಂ ಲಂ
ಬಣಿಗೆಯ ಪೂಸಮುತ್ತು ನಿರ್ಝರಂ ಮಣಿಕಟಕಂ ।
ಮಣಿಕಟಕಮಾಗೆ ತದ್ಗಿರಿ
ಗೆಣೆಯಾದಂ ತನ್ನ ಪೆಸರೊಳಂ ವಿಜಯಾರ್ಧಂ ॥ ೧೩

ಬಂದು ಮಣಿಮಕುಟನಸವಸ
ದಿಂದಂ ಚಕ್ರಿಯ ಪೊದಳ್ದ ತೇಜಕ್ಕೆ ಮಸು ।
ಳ್ದಂದೆಱಗಿ ಮುಂದೆ ನಿಲ್ವುದು
ಮೊಂದವಯವದಿಂದೆ ಸಾರೆ ಕರೆದು ನೃಪೇಂದ್ರಂ ॥ ೧೪

ವ॥ ಭದ್ರಾಸನಮನಿಕ್ಕವೇೞೆ ಕುಳ್ಳಿರ್ದ ವಿಜಯಾರ್ಧಕುಮಾರಂ,

ಇದು ವಿಜಯಾರ್ಧಮೆನ್ನ ಪೆಸರುಂ ವಿಜಯಾರ್ಧಮಲಂಘ್ಯಮೆಂದುಮಿಂ
ತಿದು ಪೆಱಗಾರ್ನುಮಿನ್ನಗಮಲಂಘ್ಯನೆನಿಂ ನಿನಗಾಳೆನಾಳ ಲೆ ।
ಕ್ಕದೊಳಿದು ಚಕ್ರವರ್ತಿಗಳ ದಿಗ್ವಿಜಯಾರ್ಧದೊಳೊಂದಿನಿಂದುದ
ಪ್ಪದಱೊಳೆ ಸಂದುದೀಗಿರಿಯುಮೀಜಗದೊಳ್ ವಿಜಯಾರ್ಧನಾಮದಿಂ ॥
ಇದಱೊಳ್ ಮಧ್ಯಮಕೂಟದೊಳ್ ವಸಿಯಿಪೆಂ ನಿನ್ನಾಜ್ಞೆ ಪೂಮಾಲೆಯಂ
ದದೆ ನಿಂತಿರ್ಪುದು ಮತ್ಕಿರೀಟತಟದೊಳ್ ಚಕ್ರೇಶರಾರ್ ಬಂದೊಡಂ ।
ಮೊದಲೊಳ್ ಮಾಳ್ಪ ನಿಯೋಗಮಿಂತಿದೆನಗೆಂದಾನಂದದಿಂ ತಾನೆ ಮಾ
ಡಿದನಾಚಕ್ರಿಗೆ ನಾಡೆಯುಂ ವಿಭವದಿಂ ಪುಣ್ಯೋದಕಸ್ನಾನಮಂ ॥ ೧೫

ವ॥ ಅಂತು ವಿಜಯಾಭಿಷೇಕಂಗೆಯ್ದು,

ಸಾರಮಿದು ರತ್ನಮಯಭೃಂ
ಗಾರಂ ಹರಿಪೀಠಮಿದು ಜಗತ್ತ್ರಿತಯಾಳಂ ।
ಕಾರಮಿದು ದಿವ್ಯಮಾತಪ
ವಾರಣಮಮೃತಾಂಶುಬಿಂಬಧವಳವಿಳಾಸಂ ॥ ೧೭

ಇವು ಚಮರೀಜಾತಂ ದು
ಗ್ಧವಾರ್ಧಿಫೇನೋಪಮಾನಮಿವು ನಿನಗೆಯೆ ತ ।
ಕ್ಕುವು ನಿನ್ನ ಜಸದ ರೂಪಿನೊ
ಳಿವೆ ಮೆಱೆವುವು ಸಕಳಚಕ್ರವರ್ತಿಶ್ರೀಯಂ ॥ ೧೮

ವ॥ ಎಂದು ವಿಜಯಾರ್ಧಕುಮಾರಂ ಸಾರವಸ್ತುಗಳನೋಲಗಿಸಿ ತನಗಾಜ್ಞಾವಿಧೇಯನಾಗಿ ಪೋದಂ. ಅನ್ನೆಗಂ ಭರತೇಶ್ವರಚಕ್ರವರ್ತಿಯುಮಲ್ಲಿ ಚಕ್ರರತ್ನಮಂ ಪೂಜಿಸಿ,

ವಿಜಯಾರ್ಧಜಯಮಿದೆನಗಾ
ವ ಜಯಂ ನೆಗೞ್ದುತ್ತರಾರ್ಧಜಯಮೆ ಜಯಂ ದಿ ।
ಗ್ವಿಜಯದೊಳೆಂದೂರ್ಜಿತಭುಜ
ವಿಜಯಂ ದಿಗ್ವಿಜಯಚಿಂತೆಯಿಂ ತೊಡರ್ದಾಗಳ್ ॥ ೧೯

ವ॥ ಅಂತು ತನ್ನ ಮುನ್ನೆ ಬಂದ ವನವೀಧಿಯೊಳಗನೆ ಮಗುೞ್ದು ಪೋಗಿ ವೇದಿಕಾದ್ವಾರದಿಂ ಪೊಱಮಟ್ಟು ವಿಜಯಾರ್ಧವನವೇದಿಕಾಸನ್ನ ವಿಶಾಲಪ್ರದೇಶದೊಳ್,

ನೆಲೆವೀಡಂ ಬೀಡುಮಾಡಲ್ ಕೆಲವುದಿವಸಮಂ ಮಾೞ್ಪುದಿನ್ನಿಲ್ಲಿ ರೂಪ್ಯಾ
ಚಲಮಂ ಪಾಯ್ದುತ್ತರಾರ್ಧಕ್ಕೆಮಗೆ ನಡೆವ ಸಾಮಗ್ರಿಯಂ ಮಾಡಲೀಗಳ್॥
ನೆಲೆ ಗಂಗಾಸಿಂಧುಮಧ್ಯಕ್ಷಿತಿಪತಿಗಳುಮಿಾತಾಣದೊಳ್ ಬಂದು ಕಾಣ್ಬರ್
ಪಲರೆಂದಂತಲ್ಲಿ ಚೆಲ್ವಾಗಿರೆ ಬಿಡಿಸಿದನುರ್ವೀಶ್ವರಂ ತನ್ನ ಬೀಡಂ ॥ ೨೦

ವ॥ ಅಂತು ಬೀಡಂ ಬಿಟ್ಟಿರ್ಪನ್ನೆಗಂ ಗಂಗಾಸಿಂಧುಗಳೆರಡಱೆಡೆಯ ಭೂಪಾಳರಿಂದೆ ಮುನ್ನ ವೃಷಭನಾಥನ ನಡಪಿದುದುಮಂ ತಮ್ಮ ನಣ್ಪುಮಂ ಬಗೆದು ಕುರುರಾಜಾದಿಮೂರ್ಧಾಭಿಷಿಕ್ತಪಾರ್ಥಿವರ್ ಸನ್ನದ್ಧಬಲಪರಿವೃತರಾಗಿ ಭರತೇಶ್ವರಚಕ್ರವರ್ತಿಯನಾಸ್ಥಾನದೊಳ್ ಬಂದು ಕಂಡು,

ಒಡೆವುದೆ ವಜ್ರಕವಾಟಮು
ನಡರ್ವುದೆ ವಿಜಯಾರ್ಧಗಿರಿಯುನಿಂತೀಗಳ್ ಪೂ ।
ಣ್ದೆಡೆಗಿಡುವುದೆ ಸಿಂಧುವನಿಂ
ತಡೆವಂದಮಿದಾವುದೆಮ್ಮನೆಮ್ಮನೆ ಬೆಸಸಾ ॥ ೨೧

ನಿನಗುತ್ತರಾರ್ಧವೊಂದ
ರ್ಧನಿಮೇಷಮುಹೂರ್ತಮಾತ್ರದಿಂ ಬಾರದೆ ಕೈ ।
ಗಿನಿತುವರಂ ದೇವರ್ ನಡೆ
ವನಿತುಂ ಮಾಣ್ಬನಿತುಮಂತದಾವುದು ಗಹನಂ ೨೨

ಎಂಬನ್ನೆಗಮುಂಬರದೊಳ
ಘುಂಬಂ ಬೆಳಗೆನಿಸಿ ಮಕುಟಮಣಿಕುಂಡಲದಿ ।
ವ್ಯಾಂಬರಭೂಷಿತನಮರಕ
ದಂಬಕವೃತನೊರ್ವನಮರನಾಗಿರಿವರದಿಂ ೨೩

ಅವತರಿಸಿ ಚಕ್ರಿಯುಂ ಕಂ
ಡವನತಮಣಿಮುಕುಟನುಚಿತಪೀಠನಿವಿಷ್ಟಂ ।
ಭುವನೇಶಂ ಬೆಸಗೊಳೆ ವಿನ
ಯುವಚಃಪ್ರಸರಂಗಳೆಸೆದೊಡಂಬಡೆ ನುಡಿದಂ ॥ ೨೪

ಭುವನಕ್ಕೆ ಕುಶಲಮುಂ ಮಾ
ಡುವ ನಿನಗೇನೆಂದು ಕುಶಲಮೋ ಎಂಬೆಂ ಪೇಟ್ ।
ಭುವನನುತ ಮಾಣದರಿನ್ನೆಪ
ಭುವನಕ್ಕವ್ವಳಿಪ ತೋಳ್ಗೆ ಕುಶಲಮೆ ನಿನ್ನಾ ॥ ೨೫

ದೇವರ ಕುಲದೊಳ್ ಪುಟ್ಟಿಯೆ
ದೇವವೆಸರ್ ನೆಗೞ್ದೆಮಗೆ ಕಾರಣಮುಪನಾ ।
ಮೇವೆಮೊ ವಿಜಿಗೀಷುತೆಯಿಂ
ದೇವ ನೆಗೞ್ ದೇವ ನೀನೆ ದೇವನೆ ಅಲ್ತೇ ॥ ೨೬

ಇದು ನೃಪತೇಜಶ್ಚಕ್ರದ
ಪೊದಳ್ಕೆ ತಾನಲ್ತೆ ಚಕ್ರರೂಪದಿನಿರ್ದ ।

ಪ್ಪುದು ನಿನ್ನ ದಂಡನೀತಿಯು
ಪುದುವೆ ವಲಂ ದಂಡರತ್ನಮೆಂಬುದು ಪೆಱತೇ ॥ ೨೭

ಭವದೀಯಬಳವಿಜೃಂಭಿತ
ರವದಿಂ ತ್ರಸ್ತನೆನಧೀಶ ಬಂದೆಂ ಕಾಣಲ್ ।
ಭವದಂಘ್ರಿಸರೋಜಮನಾ
ನವಧೂತಾರಾತಿನೃಪ ಭವತ್ಕಿಂಕರನೇಂ ॥ ೨೮

ಕೃತಮಾಳನೆನೆಂಬೆನಿಳಾ
ಪ್ರತೀತನೆಂ ಗಿರಿತಟಂಗಳಿನ್ನಱಿಯದುವಿ ।
ಲ್ಲ ತಮಿಸ್ರಗುಹಾಕೂಟ
ಸ್ಥಿತನೆಂ ನೀನೆನ್ನನಾಳ್ವುದಾಳ್ವಸಗೆಯ್ವೆಂ ॥ ೨೯

ವ॥ ಎಂದು ತನ್ನಂ ಮುನ್ನಮಱಿಪಿ,

ಬೆಲೆಯಿಡಲಱಿವೊಡೆ ಮಂಡಲಿ
ಬೆಲೆಯಿಡುಗೆಮ ನೋಳ್ಪೊಡಿವಱ ತೇಜದ ಮೇಲು ।
ಜ್ಜ್ವಲತೇಜ ನಿನ್ನ ತೇಜಂ
ನೆಲಸಿದುದೆನೆ ಪೇಳವರ್ಕೆ ಬೆಲೆಗಳುಮೊಳವೇ ॥ ೩೦

ಬಂದೊಂದಱಿನೀತುಡುಗೆಗ
ಳೊಂದೊಂದಗ್ಗಳಮಿವೆಂದು ಪದಿನಾಲ್ಕುಮನೋ ।
ರೊಂದನೆ ತೋಱಿ ನಿಜಾದರ
ದಿಂದಂ ಭರತೇಶ್ವರಂಗೆ ದಿವಿಜಂ ಕೊಟ್ಟಂ ॥ ೩೧

ವ॥ ಅಂತು ಕೊಟ್ಟು ತಾನುಂ ಚಕ್ರವರ್ತಿಯ ಮುನ್ನಣೆಯೊಳ್ ಸಂತಸಂಬಟ್ಟು ವಿಜಯಾರ್ಧಗುಹಾದ್ವಾರಪ್ರವೇಶೋಪಾಯಮನೆಲ್ಲಮಱಿಯೆ ಬಿನ್ನಪಂಗೆಯ್ದಾ ವ್ಯಂತರಾಮರಂ ಪೋಗಲೊಡಂ ಮನುವಂಶಧ್ವಜಂ ಸೇನಾನಾಯಕಂಗೆ ಬೞಿಯನಟ್ಟಿದಾಗಳಾತಂ ಬಂದು ಮುನ್ನಮೆ ಬಂದಿರ್ದ ಕುರುರಾಜಾದಿಪಾರ್ಥಿವರಂ ನೋಡಿ,

ಅವನೀಶಾದೇಶಮಂ ದಾಂಟಿದರೆನಿಪ ಜಗದ್ಸುರ್ಯಶೋಧೂಳಿಯುಂ ಪಾ
ರ್ಥಿವಸೇನಾಧೂಳಿಯುಂ ಮುಟ್ಟಿದು ದಲಿವರನೆಂಬಂತೆ ಮುಂದಿಟ್ಟು ಬಂದಿ ।

ರ್ಗವರುದ್ಘುಷ್ಟಕ್ಷತ್ರಕಂಠೀರವರಿವರಧಿಪರ್ ಚಂಡದೋರ್ದಂಡಚಕ್ರೈತ್ರೋ
ತ್ರವಸೌಧೋದಗ್ರಕೀರ್ತಿಧ್ವಜರಿವರೆ ಪತಿಶ್ರೀಲತೋದ್ಯಾನಪಾಳರ್ ॥ ೩೦

ವ॥ ಎಂಬುದುಂ ತದುಕ್ತಿಸುಧಾಸಾರವಾರಿಧಾರೆಯಿಂದಂ ಕೊನರ್ತ ರಾಜಪುತ್ರರ ಮಾರ್ಗಶ್ರಮಾತಪಾಕ್ರಾಂತಮಪ್ಪ ಮನಮೆಂಬ ಲತೆಯನನೇಕಕುಶಲಾಲಾಪಪ್ರಶ್ನೆಯಿಂದಂ ಕುಸುಮಿತಮುಮಂ ಸ್ವಹಸ್ತತಾಂಬೂಲದಾನದಿಂದಂ ಫಲಿತಮುಮಂ ಮಾಡಿ ತಮ್ಮತಮ್ಮ ಬೀಡುಗಳ್ಗವರಂ ಪೋಗಲ್ವೇಳ್ದು ಸೇನಾನಾಯಕನ ಮೊಗಮಂ ನೋಡಿ ಕೃತಮಾಳಾಮರೋದ್ದಿಷ್ಟೋಪಾಯಮನೆಲ್ಲಮಂ ಪೇಳ್ದು,

ತೆಱೆವ ತೆಱನಿಂತುಟೆಂತೀ
ತೆಱದಿಂದೆ ತಮಿಸ್ರಗುಹೆಯ ವಜ್ರದ ಪಡಿಯಂ ।
ತೆಱೆದದಱ ಬೆಂಕೆ ಪೋಪಿನ
ಮೆಱಗಿಸು ನೀಂ ಮ್ಲೇಚ್ಛಖಂಡಮಂ ಪಡುವಣದಂ ೩೩

ಎನೆ ರಥಿನೀಪತಿ ಚಕ್ರೇ
ಶನ ಬೆಸನಂ ಪೊಣ್ದು ರಾಗದಿಂದೇಱ ಜಗ ।
ದ್ವಿನುತಾಶ್ವರತ್ನಮಂ ಪಿರಿ
ದು ನಚ್ಚಿನೊಳ್ ಪಿಡಿದು ದಂಡರತ್ನಮನಾಗಳ್ ॥ ೩೪

ಕತಿಪಯತುರಂಗಬಲಪರಿ
ವೃತನೊಳಪೊಕ್ಕೊಗೆದ ಸಿಂಧುವನವೇದಿಕೆಯಿಂ ।
ಸತತಗತಿವೇಗದಿಂದೂ
ರ್ಜಿತಭುಜಬಳನೆಯ್ದೆ ನಗದ ವನವೇದಿಕೆಯಂ ॥ ೩೫

ವ॥ ಆವೇದಿಕೆಯ ಮೂಡಣ ಮಣಿಮಯಸೋಪಾನಂಗಳಿಂದಂ ರಜತಾಚಳಜಗತೀತಳಮನೇಱ ತನ್ನೊಡನೆಯ ಬಲಮೆಲ್ಲಮಂ ಪಡುವಣ ಸೋಪಾನಂಗಳಿಂದಂ ಬೆಂಕೆ ಭೋಂಕೆನಳುರದಂತು ಬೇಗಂ ಮ್ಲೇಚ್ಛಖಂಡಾಂತರ್ವರ್ತಿಯಾಗೆ ಮುನ್ನಂ ಕಳಿಪಿ ಗುಹೋತ್ಸಂಗಮಂ ತಾನೊರ್ಬನೆಯ್ದೆವಂದು ತುರಗರತ್ನಮನೇಱ ಪಶ್ಚಿಮಾಭಿಮುಖನಾಗಿ ನಿಂದು ಭರತೇಶ್ವರಚಕ್ರವರ್ತಿ ಗೆಲ್ಗೆಂದು ಸಾತಿರೇಕಂ ದ್ವಾದಶಯೋಜನವಿಸ್ತಾರಾಷ್ಟಯೋಜನೋತ್ಸೇಧವಜ್ರಕವಾಟಪುಟಂಗಳಂ,

ಭರದಿಂದಂ ದಂಡದೊಳ್ ತಾಟಿಸಿದೊಡೆ ವಿಜಯಾರ್ಧಾಚಳಂ ತೊಟ್ಟನಾಗಳ್
ಬಿರಿದತ್ತೆಂಬಂತುಮಾಪರ್ವತಮುಳಱಿದುದೆಂಬಂತುಮಾಕಾಶಮಾಶಾಂ |
ತರದಿಂದಂ ಪತ್ತುವಿಟ್ಟೀಧರೆಗೆ ಕೆಡೆದುದೆಂಬಂತುಮಾಶಂಕೆ ಪೊಣ್ಮಿ
ತ್ತಿರೆ ಪೆರ್ಚಿತ್ತುಗ್ರಘೋಷಂ ಪ್ರಳಯಘನಘಟಾಟೋಪಗಂಭೀರಘೋಷಂ ॥

ಅರರೀಪುಟಮೊರೆಡುಂ ಜೀ
ರ್ಗರೆದು ಮರಲ್ದುಂದಮೊಂತುಟಾಯ್ತೆನ್ನ ಭಯಂ |
ಕರದಂಡರತ್ನಹತಿಯಿಂ
ಗಿರಿನೊಂದು ನರಳ್ವ ಮಾಳ್ಕೆಯಂತಾಯ್ತಾಗಳ್ ॥ ೩೭

ತೆಱೆಯಲೊಡೆಮಲ್ಲಿ ಬೆಂಕೆಯ
ಪೊಱಮಡುವೊಂದಂದಮನಿತುಕಾಲದೊಳೆಂದುಂ |
ಪೊಱಮಡದೆ ಭೋಂಕೆನಾಗಳ್
ಪೊಱಮಟ್ಟವೊಲಾದುದುಷ್ಣದೀರ್ಘೋಚ್ಛ್ವಾಸಂ ॥ ೩೮

ವ॥ ಅಂತಭೇದ್ಯವಜ್ರಕವಾಟಪುಟಂಗಳಾಪರ್ವತದೆರ್ದೆದೆಱೆವಂತೆ ತೆಱೆಯೆ ಭೋಂಕೆನಳುರ್ವ ಬೆಂಕಿಯುಂ ಸೋಂಕಲೀಯದೆ,

ಕಸೆಯನಿನಿಸಱಿಪಿ ಕುಡೆ ಲಂ
ಘಿಸಿದುದು ಪನ್ನೆರಡುಯೋಜನಂಬರಮಿನ್ನೀ |
ವೆಸಗೊಳ್ವುದೊ ಕಡುವೇಗದಿ
ನಸಕಳಿದುದು ಮನಮುಮಂ ತುರಂಗಮರತ್ನಂ ॥ ೩೯

ವ॥ ಅಂತು ತುರಂಗರತ್ನದ ಜವದೊಳೊಡಂಬಟ್ಟಂತೆ ಸಕಳಚಮೂಪತಿಯುಮನಶ್ವರತ್ನಮುಮಂ ದಂಡರತ್ನಮುಮಂ ಮೆಯ್ಕ್ಕೆಯ್ಯೊಳ್ ಕಾವ ದೇವತೆಗಳ್ ವಿಜಯಾರ್ಧತಟವೇದಿಕೆಯಿಂ ತಗುಳ್ದು ಸಿಂಧುವಿನ ಪಶ್ಚಿಮದಿಗ್ಭಾಗವನವೇದಿಕೆಯ ತೋರಣದ್ವಾರದಿಂದಂ ಮ್ಲೇಚ್ಛಖಂಡದೊಳಗಣ ವಿವಿಧಾಕಾರಪುರಗ್ರಾಮಸೀಮಾಭಿರಾಮಭೂಮಿಭಾಗಮಂ ಪುಗಿಸಿದಾಗಳ್ ಸೇನಾನಾಯಕಂ ಮ್ಲೇಚ್ಛಖಂಡಮಂ ತ್ರಿಪ್ರದಕ್ಷಿಣಂಗೆಯ್ದು ಬಾಯ್ಕೇಳಿಸಿ ಪಲಂಬರ್ ಮ್ಲೇಚ್ಛರಾಜರನವರವರ ಜೀವಧನಕುಲಧನಂಗಳ್ ವೆರಸು ಮುಂದಿಟ್ಟು ತೋರಣದ್ವಾರದಿಂದಂ ಸಿಂಧುವನವೇದಿಕೆಯೊಳಗನೆ ಬಂದು

ಸೋಪಾನಾಂತರದೊಳೀವಿಜಯಾರ್ಧತಟವೇದಿಕೆಯುಂ ಕಳಿದು ಜಗತೀತಳಮನೇಱಿ ಬರ್ಪನ್ನೆಗಂ,

ಒಳಗಣ ಬೆಂಕೆಯುನೞುದಿಂ
ಗಳಂತು ನಗಮುಗುೞ್ದು ಶಾಂತರೂಪದಿನಿರ್ದ |
ತ್ತಳಮರುತ್ತಮಿರ್ದ ಕೋಪಾ
ನಳನಿಂದುಪಶಾಂತನಾದ ಭೂಭೃತ್ಪತಿವೋಲ್ || ೪೦

ವ|| ಆಗಳಾಗುಹಾದ್ವಾರಮಂ ಪತಾಕಿನೀಪತಿ ಪಡೆಗೆ ನಡೆಯಲಿಂಬಪ್ಪಂತು ಶೋಧಿಸಿ ಕಾಪಂ ಪೇೞ್ದು ನಿಜವಿಜಯಶಿಬಿರಮಂ ಪೊಕ್ಕು ಚಕ್ರವಲ್ಲಭನಾಸ್ಥಾನಮಂಟಪದೊಳ್ ದೂರಾವನತಮಣಿಮಕುಟನಾಗಿ ಕಂಡು ವಸ್ತುವಾಹನಪುರಸ್ಸರಂ ಮ್ಲೇಚ್ಛರಾಜರಂ ಲಲಾಟಸ್ಪೃಷ್ಟಭೂತಳರಂ ಮಾಡಿ ಕಾಣಿಸಿ,

ಪರಿಕರಿಕನ್ಯಾರತ್ನಾ
ಭರಣಂಗಳ್ ದೇವಕುಲಧನಾದಿಗಳವು ದೇ |
ವರದೊಂದಾಜ್ಞೆಯನಾಂಪರ್
ಕಿರೀಟದಿಂದಿವರ್ಗಳನಿಬರುಂ ಭೂಪತಿಗಳ್ || ೪೧

ವ|| ಎಂದವರ ದೇಶನಾಮಕುಲಗೋತ್ರಂಗಳಂ ನೆಱೆಯೆ ತಿಳಿಯೆ ಬಿನ್ನಪಂಗೆಯ್ದು ಭೃತ್ಯಭಾವಮಂ ಪೂಣಿಸಿ ಸನ್ಮಾನದಾನಂಗಳೊಳ್ ಸಂತಸಂಬಡಿಸಿ ತಂತಮ್ಮ ನೆಲೆಗಳ್ಗೆ ಪೋಗಲ್ವೇೞ್ದು ಶುಭದಿನಮುಹೂರ್ತದೊಳ್ ಉತ್ತರಭರತವಿಜಯೋದ್ಯೋಗಮಂ ಭರತರಾಜನಱಿಪಲೆಂದು ವಿಜಯಭೇರಿಯಂ ಪೊಯಿಸಿದಾಗಳ್,

ದೆಸೆಗಳ ಸಂದಂ ಪೞಿದಾ
ಗಸದಿಂದಂ ಪತ್ತುವಿಡಿಸುವಂತೆವೊಲಿಳೆಯುಂ |
ಮುಸುಕದೊಳೆ ಪೊತ್ತು ನೆಗೆವವೊ
ಲೆಸೆದುದು ದಿಗ್ವಿಜಯಭೂರಿಭೇರೀನಿನದಂ || ೪೨

ವ|| ಆವಿಜಯಪ್ರಯಾಣಭೇರೀನಿನಾದಮಂಭೋಭಾರಗಂಭೀರಾಂಭೋಧರಸ್ತನಿತಬಹಳಸ್ನಿಗ್ಧಂಗಳಪ್ಪ ಮದಸ್ತಂಬೇರಮಬೃಂಹಿತಂಗಳಿಂದಮುಸ

ಕೃದಾಸ್ಫಾಲಿತಾನೇಕದುಂದುಭಿಧ್ವನಿಮಧುರಗಂಭೀರಂಗಳಪ್ಪ ಹಯಹೇಷಿತಂಗಳಿಂದಮುದಗ್ರಕುಂಜರಕುಂಭಜರ್ಜರಣಜನಿತೋತ್ಕಂಠಕಂಠೀರವರವೋದ್ಭಟಭೈರವಂಗಳಪ್ಪ ಸುಭಟಪಟಕ್ಷೋಭಿತಂಗಳಿಂದಂ ಸಂದಣಿಸಿ ಘೂರ್ಣಮಾನಾರ್ಣವಘೋಷಮಂ ಗೆಲ್ದು ಹರ್ಷದಿಂ ಪೆರ್ಚುವಂತೆ ಪೆರ್ಚೆ,

ವೀರಶ್ರೀಸ್ನಾನಕುಂಭದ್ವಯಮೆನಿಪ ಕಟದ್ವಂದ್ವದಿಂ ದಾನಧಾರಾ
ಸಾರಂ ಕೈಗಣ್ಮೆ ಕಣ್ಗೊಪ್ಪುವ ಜಯಗಜಮಂ ಲೀಲೆಯಿಂದೇಱಿ ವಾದಿ।
ತ್ರಾರಾವಂ ವಂದಿವೃಂದಧ್ವನಿ ಜಯಜಯಕೋಳಾಹಳಂ ಮಂಗಳಾಳಂ
ಕಾರಂ ಯಾತ್ರೋತ್ಸವಪ್ರಸ್ತುತಮೆನೆ ತಳರ್ದಂ ರಾಗದಿಂ ರಾಜರಾಜಂ ॥

ವ॥ ಅಂತು ತಳರ್ದು ರಾಜಮಂದಿರಮಂ ಪೊಱಮಡುವಾಗಳ್,

ಜಳಧಿದ್ವೀಪಾಂತರಾಳಂಗಳನಿರದೆ ಪುಗಿಂ ಪೋಗಿಮುಗ್ರಾರಿಗಳ್ ಮಾ
ರ್ಕೊಳಲಾಱಿರ್ ಚಕ್ರನಾಥಪ್ರಬಳಬಳಮನೆಂಬಂತೆವೊಲ್ ಸಾನುಕೂಲಾ।
ನಿಳನಿಂದಂ ಕೇತುಹಸ್ತಾವಳಿ ಮಿಳಿರ್ವಿನೆಗಂ ಬಂದನುತ್ತುಂಗಭೂಭೃ
ತ್ಕುಳಸಂಕಾಶಂಗಳಾಕಾಶದ ನೆಲದೆಡೆಯುಂ ಪರ್ವೆ ಗಂಧದ್ವಿಪಂಗಳ್ ॥ ೪೪

ವ॥ ಅಂತು ಪೊಱಮಟ್ಟುತ್ತರಭರತದ ವಿಜಯಶ್ರೀವಿವಾಹಮಹೋತ್ಸವಪ್ರಾರಂಭದೊಳ್ ದಿಕ್ಪಾಲಕರ ಕೆದಱುವ ಸಿಷ್ಟಾತಕಚೂರ್ಣಮೆನಿಸುವ ರಜಃಪುಂಜಮುಮಂ ದಿಕ್ಕನ್ಯಕೆಯರ ಸೂಸುವ ಲಾಜಾಂಜಳಿನಿಚಯಮೆನಿಸುವ ಮದಕರಿಕರಶೀಕರನಿಕರಮುಮಂ ಅಂಬರದೊಳಮರವೃಂದಂಗಳ್ ಬಿತ್ತರಿಸುವ ಪತಾಕೆಗಳೆನಿಸುವ ಕರಿಕದಳಿಕೆಗಳುಮಂ ಮುಂದೆ ಮುಂದನಿಲದೇವನ ತಳಿವ ಕುಸುಮಪ್ರಸರಮೆನಿಸುವ ತುರಂಗಮುಖಫೇನಪಲ್ಲವಸ್ತಬಕಮುಮಂ ನೋಡುತ್ತುಂ ನಡೆಯೆ,

ಬಳವತ್ಪ್ರತ್ಯಂತಭೂಪಾಳಕನಿಕರಮಹಾವಾಹಿನೀವಾಹಿನೀಸಂ
ಕುಳಮತ್ಯುತ್ಸಾಹದಿಂದಂ ಪುಗೆ ಪುಗೆ ದೆಸೆಯಿಂ ಬಂದು ಚಕ್ರೇಶಭೂಭೃ।
ತ್ಕುಳಚಕ್ರಾವಾರಪಾರಂ ಸುಭಟಜನಚಮತ್ಕಾರಿ ತೇಜೋಮಹೋರ್ವಾ
ನಳಮುಗ್ರಾರಾತಿವರ್ಗಪ್ರಳಯಕರಮದೊಂದೆಯ್ದೆ ತಾಳ್ದಿತ್ತಗುರ್ವಂ ॥

ವ॥ ಆಗಳ್ ಸೈನ್ಯಾಧಿನಾಥನಧಿನಾಥನ ಕೆಲದೊಳ್ ಪಟ್ಟಗಜಾಧಿರೂಢನಾಗಿ ದೇವ ನೋಡೀತೋರ್ಪುದು ದವದಹನಧೂಮಾಧಿಕಶ್ಯಾಮಳತೋತ್ತಾಳತಾ

ಳಕಾಯುಮತಿವಿಚಿತ್ರತ್ರಪುಮಯಪತ್ರಖಚಿತೋಚ್ಚಂಡತಾಳಚಾಪದಂಡಮನೇಕವರ್ಣಾಕೀರ್ಣತ್ರಿಸರವೇಣಿಕಾಗಾಢಗ್ರಥಿತತ್ರಪುಷಕೋಶಗುಪ್ತಗುಲ್ಫಾಂತರಪ್ರಾಪ್ತಖಡ್ಗಧೇನುಕಮಾಂಧ್ರಧಾನುಷ್ಕಬಳಂ, ಮತ್ತಿತ್ತ ಕೋಮಳಶ್ಯಾಮಳಚಟ್ಟಿಯಾನಿಕಾಯಮುಂ ಉಪನಿಟಿಲಘಟಿತಕುಟಿಲಜೂಟಬಂಧಮುಮಾಕೂರ್ಪರರಚಿತಕಾಳಾಯಸವಳಯಭಯಂಕರಕರದ್ವಯಮುಮಭಿನವಕುಂಭತ್ಕೌಸುಂಭವೇಣಿಕಾಬಂಧೋಲ್ಲಸನ್ಮಲ್ಲಿಕಾಮುಕುಳಾಕಾರವಿತಸ್ತಮಾತ್ರಾಸಿಧೇನುಕೋಶಮುಮನೇಕರುಚಿವಿಚಿತ್ರವೇತ್ರವಿಶಿಖಾತಿರುಚಿರಪ್ರಾಂತಕುಂತಮನುತ್ತರೀಯಕಂಟಕಮತಿಸುಭಟಮದೋತ್ಕಂಠಮಿದು ಕರ್ಣಾಟಬಲಂ, ಮತ್ತೀಭಾಗದೊಳ್ ಅಭಿನವಪ್ರಿಯಂಗುಶ್ಯಾಮಾಂಗಮರ್ಧಚಂದ್ರಬುದ್ಬುದವ್ಯಾಕೀರ್ಣತ್ರಿಶೂಲಕರಾಳವಿಶಾಲಮಿತ್ರಖೇಟಕಮುದ್ಘೃಷ್ಟರಶ್ಮಿಪಾಂಡುರಪಾಳಿತಕರವಾಳಡಾಡ್ಡಯುಧಮಿಕ್ಷುದಂಡಪ್ರಣೀತಕ್ರೀಡಾವಖಂಡಿತೋಚ್ಚಂಡಶುಂಡಾಳಗಾತ್ರಾಪರಪತಿಬಾಳಕದಳಿಕಾಕಾಂಡಲೀಲಾಚ್ಛಿನ್ನಸಿಂಧುರಮಧ್ಯಹಸ್ತಮತ್ಯಂತಮೃದುಮೃಣಾಳದಂಡಹೇಳಾದಳಿತದಂತಿದಶನಮುಸಳಮುತ್ಕವಾಟಲಾಘವಲಂಘಿತಪರಪುರಪರಿಖಾವಳಯಮನೇಕಾಪಮದೃಷ್ಟದೋಸ್ಸಾಹಸಮಿದು ಮರಾಟಸುಭಟಬಲಂ, ಮತ್ತಿತ್ತ ಸರ್ವಾಂಗೀಣಸಾಂದ್ರಹರಿದ್ರವಿಲೇಪನವಿಲಿಪ್ತಹರಿತಾಳಪಿಂಗಳಪಿಲಂಘಿತಶಿಲಾಸ್ತಂಭವಿಭ್ರಮನಿತಂಬಖಿಖರಿತತರಂಗಿತಚತುರಂಗುಳಾಗ್ರಪಲ್ಲವನಿವಸನಮತಿಮಸೃಣವರ್ಣವ್ಯತಿಕರೋದೀರ್ಣಶೋಭಾಪುಂಜರಂಜಾಪುರಪಟ್ಟಿಕಾನಂದಕನಕಪತ್ರಾಂಕಿತಯೋಗಖಡ್ಗಪುತ್ರಿಕೋದ್ಘಾಸಮಾನಸುವರ್ಣಕೋಶಮನತಿಜರಠಕರ್ಣಿಕಾಮುಕುಳಸ್ಥೂಳತ್ರಿಚತುರಸುವರ್ಣಕಂದೋದರಕಂಧರಮುತ್ಕಟಹಾಟಕಪದಕಮಣಿತ್ರಿಖಂಡಕರ್ಣಾಭರಣಮುದ್ಬದ್ಧಜೂಟಮತ್ಯಂತಶೌರ್ಯಸೌಂದರ್ಯಪ್ರಕಾಶನಪರಿತ್ಯಕ್ತತನುಚ್ಛದಮುತ್ತಪ್ತರಜತಾವದಾತಲೋಹಪುತ್ರಿಕಾನಂದಲಾಕ್ಷಾಹಿಂಗುಲಿಕಪಾಟಫಲಕಮರ್ಧಕರವಾಳಜಾಳನಪ್ರಕಟಿತಭಟಬಿಭೀಷಿಕಾಡಂಬರಮತಿಸ್ಫುಟವೀರಶೃಂಗಾರನಾಟಕಾಭಿನಯನಟವೃಂದಮಿದು ಮಹಾನಾಟಕಬಲಂ, ಮತ್ತಿತ್ತ ಕಾರ್ತಸ್ವರಸ್ತಂಭಸಂಚಾರಣಭಾಸ್ವರಮಾಸ್ಕಂದಪ್ರಲಂಬಸುಭಟಕರ್ಣಾಭರಣಕರ್ಣಪಾಶಮಾಬಳಶಾರ್ದೂಲಮುಖರೋಮಕರಾಳಸೃಕ್ಕೋಪಾಂತಪ್ರರೂಢಶ್ಮಶ್ರುಜಾಳ

ಮಾಹವಮಹಾಹುಂಕಾರಕಾಳಕೂಟವಿಟಪಿಪ್ರರೋಹಶಂಕಾವಹನಾಭಿಕೂಪಾವಲಂಬಿಕೂರ್ಚಕಳಾಪಂ ಲಲಾಟನಿಹಿತಕಾಂಸುಂಭಾಂಶುಕಪಟ್ಟಿಕಾಪ್ರಾಂತನಿಬಿಡನಿಬದ್ಧಕೇಶಬಂಧಮಾಚಕೂಳಸ್ವಸ್ತಿಕಬದ್ಧವಿಚಿತ್ರವಸ್ತ್ರದ್ವಯೋದ್ದಾಮಧಾನುಷ್ಕಮುದ್ವೀಚಿಮರುಮರೀಚಿನಿಚಯಚಂಚಳೋದ್ದಾಮಬಳಬಹಳನಿಕವಚಪ್ರಾಸಪಾಣಿವಾರಾಶ್ವಿಕಮುಗ್ರಪುಂಖಪ್ರೇಂಖೋಳಾನೇಕನೇತ್ರಪಟ್ಟಿಕಾಸಟಾಳಸರಳಕುಂತಹಸ್ತಮಹಾಹಯಾರೋಹಣಾಮಸಿತಭುಜಗಶಿಶುತರಳತರವಾರಿಖಡ್ಗಖೇಟಕವ್ಯಗ್ರಕರದ್ವಯೋದ್ದಾಮಪದಾತಿಬಹಳಮಿದು ಲಾಟಬಲಂ, ಎಂದನೇಕದೇಶಾಧೀಶಬಲಂಗಳಂಬೇಱವೇಱತೋಱುತ್ತುಂ ಬರ್ಪನ್ನೆಗಂ ಮುಂದೆ,

ಇಭಖಡ್ಗಿವ್ರಾತನಾನಾಹರಿಮಯಕಟಕಭ್ರಾಜಿತಂ ತುಂಗವಂಶ
ಪ್ರಭವಂ ಸಿಂಹಾಸನಶ್ರೀಸಮುಚಿತಮಮೃತಾಂಭೋಧಿಕಲ್ಲೋಲಮಾಳಾ ।
ನಿಭಲೀಲಾಸಂಚಳಚ್ಚಾಮರರುಚಿರಮಿಳಾಚಕ್ರವಿಖ್ಯಾತಭೂಭೃ
ತ್ಪ್ರಭು ಚಕ್ರಾಧೀಶನೊಳ್ ಮಚ್ಚರಿಪವೊಲೆಸದಿರ್ದತ್ತು ರೌಪ್ಯಾಚಳೇಂದ್ರಂ

ವ॥ ಅಂತು ವಿಜಯಾರ್ಧಾಚಳಕಟಕಾಭಿಮುಖೀಕೃತನಿಜವಿಜಯಕಟಕನಾಗಿ ಬಡಗವೊಗದೆ ನಡೆದು ತನ್ಮಹೀಧರದ ಜಗತೀತಳಮಣಿಮಯಸೋಪಾನಮನೇಱುವಲ್ಲಿ ಪಶ್ಚಿಮಾಭಿಮುಖನಾಗಿ ಪೋಗಿ ಪಂಚಷಡ್ಯೋಜನಾಯಾಮದೊಳಂ ದ್ವಾದಶಯೋಜನವಿಸ್ತಾರಾಷ್ಟಯೋಜನೋತ್ಸೇಧವಜ್ರಕವಾಟಪುಟಮುಂ ವಿಚಿತ್ರಮಣಿಮಯೂಖಚಿತ್ರಿತದ್ವಾರಬಂಧಬಂಧುರಮುಮಧಸ್ಸ್ಥಳಪ್ರಸರ್ಪತ್ಸಿಂಧುವಾಹಪ್ರವಾಹವಿರಾಜಿತಮುಂ ಪ್ರಸವಾಗಾರದಂತೆ ನಿಷಿದ್ಧಾನ್ಯಪ್ರವೇಶಮುಂ ರಾಜಭವನದಂತೆ ಕೃತರಕ್ಷಾವಿಧಿಯುಂ ವಿವಾಹಗೇಹದಂತೆ ಸಂಗತಮಂಗಳಪರಿಕರಮುಂ ಜೀವಿತಾಶಯದಂತೆ ಅತ್ಯಾಯಾಮಮುಂ ಮುಕ್ತಜ್ವರದಂತೆ ನಿರ್ಮುಕ್ತೋಷ್ಮಮುಂ ಮೂರ್ಛಾಪ್ರಾಪ್ತನಂತೆ ತಮೋಮಯಮುಮಪ್ಪ ತಮಿಸ್ರಗುಹೆಯನೆಯ್ದಿದಾಗಳ್,

ಅದಱೊಳಗೆ ಪುದಿದು ಮಂದೈ
ಸಿದ ಕತ್ತಲೆಗಗಿದು ಸುಗಿವ ಪೆರ್ಬಡೆಯುಂ ಕಂ ।
ಡಿದು ನಡೆಯದೆ ಸೆಡೆದಿಂದಿ
ರ್ದುದೆಂದು ಬೆಸಸಿದೊಡೆ ಚಕ್ರಿ ಸೇನಾಪತಿಯುಂ ॥ ೭೪

ಆತಂ ಪುರೋಹಿತಂ ಬೆರ
ಸಾತತತಿಮಿರಪ್ರಭೇದನೋಪಾಯಮಿದೆಂ ।
ದಾತನುಮಂ ಕಿಡಿಸಲ್ ಸಂ
ಜಾತನಯಂ ಬಗೆದು ತದ್ಗುಹಾಭಿತ್ತಿಗಳೊಳ್ ॥ ೪೮

ಎರಡಱೊಳಂ ಚಂದ್ರಾದಿ
ತ್ಯರನಾಗಳ್ ಬರೆದು ಕಾಕಿಣೀರತ್ನದೊಳಂ ।
ಸ್ಫುರಿತಮಣಿರತ್ನದೊಳಮಂ
ತರಿಸುತ್ತುಂ ಯೋಜನಕ್ಕೆ ಬರೆದೊಂದೊಂದಂ ॥ ೪೯

ಬಿಸಲಂ ಬೆಳ್ದಿಂಗಳುಮಂ
ಪಸರಿಸೆ ಕತ್ತಲೆ ತೆರಳ್ದು ತೊಳ್ದೊಡೆ ರಾಗಂ ।
ಪಸರಿಸೆ ನಡೆವತ್ತು ಬಲಂ
ಪಸರಿಸಿ ನದ್ಯುಭಯತಟದೊಳೊಡನೊಡನಾಗಳ್ ॥ ೫೦

ವ॥ ಅಂತು ಕಾಕಿಣೀಮಣಿರತ್ನಂಗಳೊಳ್ ಬರೆದ ಚಂದ್ರಾದಿತ್ಯರ ಬೆಳಗುಗಳೊಳಂ ಮುಂದೆ ನಡೆವ ಚಕ್ರರತ್ನಪ್ರಭಾಚಕ್ರದೊಳಂ ಆಪಡೆ ಕಣ್ಡೆದಂತೆ ಸೋಪಾನಾಂತರದೊಳಿೞಿದೆರಱಿಗೆಯಾಗಿ ಸಿಂಧುವಿನೆರಡುಂ ತಡಿಯೊಳಮೆರಡುಯೋಜನದಗಲದೊಳ್ ಸೇನಾನೀನಿಯಮದೊಳ್ ಪ್ರಭೂತಯವಸಮಾಗೆ ನಡೆದು ಕೆಲವು ಪಯಣಂಗಳಂ ಗುಹಾಭಿತ್ತಿಗಳೆರಡುಂ ದೆಸೆಯ ಕುಂಡಂಗಳೊಳ್ ಪುಟ್ಟಿ ಬಂದೆರಡುಂ ದೆಸೆಯೊಳಂ ಸಿಂಧುವಿನೊಳ್ ಕೂಡಿದ ಗುಹಾಮಧ್ಯದ ನಿಮ್ನಗಾತಟದೊಳ್ ಬೀಡಂ ಬಿಡಿಸಿ,

ಬಂದಱ ನೀರ್ಮಳಲೊಂದ
ಕೆರ್ಱಂದಿಸುತುಂ ಮೇಗೆ ಕೊಂಡು ನೆಗೆವುದಿದೇಂ ಮ ।
ತ್ತೊಂದಱ ನೀರಡಿಗರ್ದುವು
ದೆಂದತಿವಿಸ್ಮಯದೆ ನೋಡಿದಂ ಭರತೇಶಂ ॥ ೫೧

ವ॥ ಅಂತುಭಯನದಿಯ ವೈಷಮ್ಯಮುಮನಾಶ್ಚರ್ಯಂಬಟ್ಟು ನೋಡಿ ನದ್ಯುತ್ತರಣೋಪಾಯಮಾವುದೆಂದು ಬಗೆದು ಬೇಗಂ ಸ್ಥಪತಿರತ್ನಮಂ ಕರೆದು ತನ್ನಿಪತದುದಕೊಭಯಸರಿತ್ಸ್ವರೂಪಮಂ ತೋಱಿದೊಡೆ,

ಅಡಿಯಿಂ ಮೇಗಣ್ಗೆತ್ತುವ
ಕಡುಗಾಳಿಯ ಪೊಯ್ಲೊಳಿದಱ ನೀರೆೞೆದಪುದ |
ರ್ದಡಿಗೆ ಬರೆ ತೆಗೆವ ಗಾಳಿಯಿ
ನಡಿಗಿೞಿದಪುದಿದಱ ನೀರಿದೊಂದಚ್ಚರಿಯೇ || ೫೦

ವ॥ ಎಂದು ಬಿನ್ನಪಂ ಗೆಯ್ದು ದಿವ್ಯಶಕ್ತಿಪ್ರಭಾವದಿಂದಮಾನುಷಾರ ಣ್ಯಂಗಳ ಮಹಾದ್ರುಮಂಗಳಂ ತರಿಸಿ ನಡಿಸಿ ನಟ್ಟ ಕಂಭಂಗಳ ಮೇಗೆ ಸಾರದಾರಂಗಳನೆಡೆಗಿಱಿದಿರೆ ಪಾಸಿ ಪಸರಿಸಿ ಪಡೆಗೆ ನಡೆಯಲಪ್ಪಂತೆ ಮಾ ಡಿದಾಗಳ್,

ದಳ್ಳಿಸಿ ಕುಕಿಲುತ್ತಂಬುಧಿ
ಯುಳಾಳ್ಕಳಂ ನೆಗಪೆ ಕವಿದು ನರ್ತಿಸಿ ನಡೆದ |
ತ್ತುಳಾಳ್ಕಡೆ ನೆಲಂ ಬಲಮದು
ಕೊಳ್ಳೆಂದು ಮಹಾರವಂ ಪೊದಪ್ದೆಸೆವಿನೆಗಂ || ೫೩

ವ॥ ಅಂತು ಭರತೇಶ್ವರಚಕ್ರವರ್ತಿಯುಮನೇಕಮದಗಜಘಟಾಪರಿವೇ ಷ್ಟಿತನಾಗಿ ರಾಜಮಾರ್ಗದೊಳ್ ನಡೆವಂತದಱ ಮೇಲೆ ನಡೆದು ಕೆಲವು ಪಯಣಂಗಳಿಂದುತ್ತರಗುಹಾದ್ವಾರಮನನಾಯಾಸದೊಳ್ ತೆಱೆದು ಪೊಱ ಮಟ್ಟಾಗಳ್,

ಸೆಱೆವನೆಯಿಂದಂ ಭೋಂಕೆನೆ
ಪೊಱಮಟ್ಟವೊಲಂದು ಗರ್ಭಗೃಹದಿಂದಂ ಮೇ |
ಣ್ಪೊಱಮಟ್ಟವೊಲಾಗುಹೆಯಿಂ
ಪೊಱಮಟ್ಟುದು ಸೈನ್ಯಮಂಬುಧಿಧ್ವನಿಯಿಂದಂ || ೫೪

ವ॥ ಅಂತು ತಮಿಸ್ರಗುಹಾದ್ವಾರದಿಂ ಪೊಱಮಟ್ಟಾಗಳ್,

ಸಕಟೋದ್ಘೃಷ್ಟವನೇಭತುಂಗಜರರಸ್ಥೂಳಾರ್ಗಳಾಕಾರಮಾ
ರ್ಗಕುಜಂ ವಾಜಿಖುರಾಹತಿಸ್ಥಪುಟಿತಗ್ರಾವಸ್ಥಳಂ ಸೈನ್ಯದಂ |
ತಿಕರೋಚ್ಚಾಟಿತಸಲ್ಲಕೀಕಿಸಲಯಂ ಚಕ್ರೇಶ್ವರಂ ಪೆರ್ಚಿದು
ತ್ಸುಕದಿಂ ದಾಂಟಲಳುಂಬಮಪ್ಪ ವಿಜಯಾರ್ಧಾದ್ರೀಂದ್ರಮಂ ದಾಂಟಿದಂ ||

ವ॥ ಅಂತು ವಿಜಯಾರ್ಧಮಹೀಧರೋಪಕಂಠವನನಿಕಟದೊಳ್ ಬೀಡಂ ಬಿಟ್ಟಾಗಳ್,

ಆಗುಹೆಯೊಳಗಣ ಶರದದೊ
ಳಾಗಳ್ ಬಸವಳಿದ ಬಲಮನಾಱಿಸುವವೊಲಾ ।
ಯ್ತಾಗಿರಿಯ ಕೊಳದ ಮರಗಳ
ಪೂಗಳ ಕಂಪನೆ ತೆರಳ್ಚಿ ಬೀಸುವ ಪವನಂ ॥ ೫೬

ವ॥ ಅಂತಲ್ಲಿ ಬೀಡಂ ಬಿಟ್ಟು ಮುನ್ನಿನಂತೆ ಪಶ್ಚಿಮಖಂಡಮುಮಂ ಅಖಂಡಪ್ರತಾಪಧ್ವಜನೆಂದು ತನ್ನ ಧ್ವಜಿನೀಪತಿಯನಟ್ಟಿ ಬಾಯ್ಕೇಳಿಸಿ ಚಕ್ರರತ್ನಮಂ ಮುಂದಿಟ್ಟು ಮಧ್ಯಮಖಂಡಮುಮಂ ಪೊಂಕಿ ಪೊಱೆ ಪೊಕ್ಕವಷ್ಟಂಭಿಸಿ ನಿಂದಾಗಳ್, ಬಳಾಕಾವರ್ತರೆಂಬಿರ್ವರುಂ ಮ್ಲೇಚ್ಛರಾಜರ್ ಧನುರ್ಧರಪ್ರಾಯಮುಮಂ ಅಶ್ವೀಯಬಹಳಮುಮಂ ಹಾಸ್ತಿಕಸಾಧನಮುಮಪ್ಪ ತಮ್ಮ ಬಲಮನೊಂದುಮಾಡಿ ಕೂಡಿಕೊಂಡು ಚಕ್ರವರ್ತಿಯೊಳುಚ್ಚವಿಗ್ರಹಂಗೆಯ್ಯಲೆತ್ತಿಕೊಂಡುದಂ ಕಂಡು ಮಂತ್ರಿಗಳ್ ಮಾರ್ಕೊಂಡು,

ವಿಜಯಾರ್ಧಾದ್ರಿಯನುರ್ಚಿ ಬರ್ಪಳವಿದೇಂ ಸಾಮಾನ್ಯಮೇ ದೇಶಮಂ
ಭುಜವಿಕ್ರಾಂತದಿನೊತ್ತಿ ಪೊಕ್ಕಧಟದೇನಾಶ್ಚರ್ಯಮಲ್ತೇ ಮೃಗ ।
ವ್ರಜದೊಡ್ಡೇಂ ಮೃಗರಾಜನಂ ನೆಱೆವುದೇ ತಾಂಗಲ್ಕೆ ನಮ್ಮೀಬೃಹ
ದ್ಧ್ವಜಿನೀಸಂಕುಳಮೀಜಿಗೀಷುವನಿದೇಂ ಸಂಗ್ರಾಮದೊಳ್ ಗೆಲ್ಗುಮೇ ॥ ೫೭

ವ॥ ಅದಲ್ಲದೆಯುಂ ಈಗಿರಿದುರ್ಗಮಂ ದಾಂಟಿ ಬಂದ ಬಲ್ಲಾಳ್ ದಿವ್ಯಪ್ರಭಾವನಕ್ಕುಮಮೋಘನಕ್ಕುಂ; ಅದಱಿಂ ಈತನೊಳ್ ಇದಿರ್ಚಿ ಕಾದುವಮರುಳ್ತನಂ ಬೇಡ; ಹಿಮವದ್ವಿಜಯಾರ್ಧಗಂಗಾಸಿಂಧುತಟಾವಧಿಯಪ್ಪೀ ನಮ್ಮ ಮಧ್ಯಮಖಂಡದೊಳಂ ಅಗಾಧನದೀನದದುಸ್ತರಮಪ್ಪ ಜಲದುರ್ಗದ ಮಹಿಮೆಯುಮಂ ಅಭ್ರಂಕಷಶಿಖರಿಶಿಖರದುಲ್ಲಂಘ್ಯಮಪ್ಪ ಗಿರಿದುರ್ಗದಪೆಂಪುಮಂ ಉದಗ್ರತರುಗಹನದುಷ್ಪ್ರವೇಶಮಪ್ಪ ವನದುರ್ಗದುನ್ನತಿಯುಮಂ ಬಳಕೊಂಡು, ನಿರಂತರಾಟ್ಟಾಳಕಪ್ರತೋಳೀಂದ್ರಕೌಶಳದೇವಪಥಸನಾಥಂಗಳುಂ ಗಂಡಶೈಳಾಭೀಳಶಿಳಾಯಂತ್ರಭಯಂಕರಂಗಳುಂ ಪ್ರಳಯಕಾಳಾನಳವರ್ಷಶಂಕಾಕಾರಿಹುತವಹವರ್ಷಾಗ್ನಿಯಂತ್ರಭಯಾನಕಂಗಳುಂ ಕಂಟಕಗುಲ್ಮವಿಷವಲ್ಲೀಸಂಘಾತಭೀಷಣಂಗಳುಂ ಜಾನುಭಂಜನಿಶೂಲಪ್ರಕರಪರಿವೃತಂಗಳುಂ ಕೂಪಕೂಟಾವಪಾಯಲೋಹಕಂಟಕಸಂಕಟಂಗ

ಳುಂ ತಾಳಪತ್ರಶೃಂಗಾಟಕನಿಚಿತಂಗಳುಂ ಸ್ಪಂದದಂಷ್ಟ್ರಾಗ್ರಗಳೋಪರಿವು ಸಂಛನ್ನಂಗಳುಂ ಯಂತ್ರಾಯುಧಾವರಣೋಪಕರಣಪರಿಣತಂಗಳಾಗಿರ್ದ ದುರ್ಗಂಗಳೊಳ್,

ಘನದೋರ್ದಂಡಪ್ರಭಾವಾರ್ಜಿತಧರಣಿಗುಹಾಸಿಂಹರಿರ್ ನೀಮುವಿರಾಗಳ್
ವನಸಿಂಹನ್ಯಾಯದಿಂ ದುರ್ಗದೊಳೆ ಬಲಿವು ನಿಂದಲ್ಲಿ ಬಂದೊತ್ತಿ ಚಕ್ರೇ।
ಶನ ಚಂತ್ರಂ ನಿಲ್ಕುವಾರ್ತಲ್ಲಿಗೆ ನೆಱೆದು ಭರಂಗೆಯ್ದುದುರ್ಕುಳ್ಳ ಸಾಮಂ
ತನಿಕಾಯಂ ಯಂತ್ರಮುಕ್ತಾನಳಶರವೃಷದಾಸಾರವಿಧ್ವಂಸಮಕ್ಕುಂ ॥ ೫೮

ವ॥ ಅಂತೀತನ ಕಟಕಕ್ಕೆ ನಿತ್ಯಕ್ಷಯವ್ಯಯಪ್ರತ್ಯವಾಯಂಗಳಂ ಮಾಡಿ ಬೇಸಱಿಸಿ ನೆಲದಿಂ ತೆರಳ್ಚುವಮಲ್ಲದೊಡಂ ನಮ್ಮ ಕುಲದೇವತೆಗಳಪ್ಪ ಮೇಘಮುಖರೆಂಬ ನಾಗರಾಜರೆಂಬ ನಾಗರಾಜರಿಂದಮೀತನಳುರ್ಕೆಯುಮ ನುರ್ಕುಮಂ ಕಿಡಿಸಿ ಗೆಲ್ವಮೆಂದು ನುಡಿದ ಮಂತ್ರಿಗಳಮಾತಂ ಮನದೆಗೊಂ ಡು ಬಳಾಕಾವರ್ತರ್ ಪೂಜಾಪುರಸ್ಸರಂ ದರ್ಭಶಯನತಳಗತರ್ ತದುದ್ಯೋ ಗಪರರಾದಾಗಳಾನಾಗರಾಜರ್ ಬಂದು ನಿಮಗಾವುಳ್ಳಂತೆ ದಂದುಗವೆಂದು ಮೇಕಪ್ಪುದೆಂದು,

ಜಳದಾಕಾರದೊಳೆಯ್ದೆ ಪರ್ಬಿ ಸಕಳಾಶಾಚಕ್ರಮಂ ವ್ಯೋಮಮಂ
ಡಳಮಂ ಕರ್ಗಿ ಕಱಂಗಿ ತೋಱಿ ಸಿಡಿಲಿಂ ಮಿಂಚಿಂ ಘನಧ್ವಾನದಿಂ।
ದಿಳೆ ಕಂಪಂಗೊಳೆ ಸೋನೆಯಿಂ ಸರಿಗಳಂ ತಂದಲ್ಗಳಿಂದಂದು ಭೂ
ತಳಮೇಕಾರ್ಣವಮಾಗೆ ಚಕ್ರಿಯ ಬಲಕ್ಕಾತಂಕಮಂ ಮಾಡಿದರ್ ॥ ೫೯

ವ॥ ಅಂತು ಪ್ರಳಯಕಾಳಜಳದೋದೀರ್ಣಜಳಮುಮನಿಱಿಸಿ ಜಳಧರ ಜಳಧಿಯ ನಡುವೆ,

ಅಡಿಯೊಳ್ ಪಾಸಿದ ಚರ್ಮರತ್ನಪಟಮಂ ತಚ್ಛತ್ರರತ್ನಂ ಬೆಡಂ
ಗಿಡಿದೋರಂತಿರೆ ಮುಟ್ಟೆ ಪೊರ್ದ್ದ ತೆಱದಿಂದಿಂಬಾಗೆ ತನ್ಮಧ್ಯದೊಳ್।
ಸೊಡರಿರ್ಪಂತಿರೆ ಚಕ್ರರತ್ನಮದಱೊಳ್ ನಿರ್ಬಾಧಮಿರ್ದತ್ತು ಪೆ
ರ್ವಡೆ ವಾರಾಶಿಯೊಳಿರ್ದ ಬೈತ್ರದೊಳಗಂದೆತ್ತಂ ತೆರಳ್ದಿರ್ದವೊಲ್ ॥ ೬೦

ವ॥ ಅಂತು ಕೃತಕಚಕತುದ್ವಾರದಂತರ್ಭಾಗದೊಳ್ ಸೇನಾಧಿನಾಥ ರಕ್ಷಿತಮಪ್ಪ ಕಟಕಕ್ಕೆ ವಜ್ರಪ್ರಾಕಾರರೂಪನಾಗಿ ಕುರುಕುಲಾಗ್ರಗಣ್ಯ

ನೆಪ್ಪೆ ಸೋಮಪ್ರಭನ ಮಗಂ ಜಯಕುಮಾರಂ ಸ್ಥಪತಿರತ್ನವಿರಚಿತಾಂ
ಬರಗೋಚರರಥನಿಕರಂಗಳುಂ ವಜ್ರಗಿರಿಗಳುಂ ಬೆರಸು ಮೇಘಪ್ರಮುಖಾ
ಮರರೊಳ್ ಕಾದುವಾಗಳ್,

ತಮದೊಡ್ಡಿರ್ಪವೊಲಿರ್ಪ ಕಾರ್ಮುಗಿಲ ತಳ್ತೊಡ್ಡಿಲ್ಲಮಂ ಮುನ್ನಮ
ಗ್ನಿಮುಖಾಸ್ತ್ರಂಗಳಿನೆಚ್ಚು ತೂಳ್ದು ಬಳಿಯಂ ಮೆಯ್ಗೊಂಡು ಪ್ರಂಬಾನು
ಪ್ರಂ ।
ಭ್ರಮಿಸುತ್ತಿರ್ಪಿಡೆಯೊಳ್ ತೆರಳ್ಚಿದುವಗುರ್ವಿಂ ಪರ್ಬಿ ಬಂದಿರ್ದ ಮೇ
ಘಮುಖಾಹೀಂದ್ರರ ಪೊಂಕಮಂ ಜಯಕುಮಾರೋನ್ಮುಕ್ತಬಾಣಾಳಿಗಳ್ ॥

ಸಿಡಿಲಿಂ ಮಿಂಚಿಂ ಮೊಳಗಿಂ
ಪಡೆಗುಳ್ಕಂ ಪಡೆವಹೀಂದ್ರರೆರ್ದಗಿಡುವಿನೆಗಂ ।
ಸಿಡಿಲುಂ ಮಿಂಚುಂ ಮೊಳಗುಮ
ನೊಡನೆ ತೆರಳ್ಚಿದುವು ಜಯನ ಶರನಿಕರಂಗಳ್ ॥ ೬೦

ಸಿಡಿಲಂ ಸಿಡಿಲಟ್ಟುವುದೆನೆ
ಕುಡುಮಿಂಚಂ ಮಿಂಚು ತಳ್ತುದೆನೆ ಗಗನಮನೇ ।
ನೆಡದರ್ಪವೊ ಜಯನ ಶರಂಗಳ್
ಸಿಡಿಲುಂ ಮಿಂಚುಂ ಪಳಂಚಿ ಸಂಚಳಿಸುವಿನಂ ॥ ೬೧

ಅಂಬರದಿಂ ಸೂಸುವ ಧಾ
ರಾಂಬುಗಳುಮನೊಡನೆ ಸುರಿವ ಪಲವಂದದ ಕೂ ।
ರಂಬುಗಳುಮನೊಡನೆಳದರ್ಪವ
ದೇಂ ಬಿಗಿಯವೊ ಜಯಕುಮಾರನನಲಶರಂಗಳ್ ॥ ೬೨

ತಳದಳಪೆ ಮುಗಿಲ್ಗಳ್ಕಳ
ಕುಳಮಪ್ಪಿನಮಳದರ್ಪ ಜಯನ ಶರತತಿ ಕೊಳೆ ಬ ।
ಳ್ವಳಿಯ ಮಱಿವೊಕ್ಕವೊಲ್ ಕಳ
ಕುಳಮಾದರ್ ನಾಗರಾಜರಪಗತತೇಜರ್ ॥ ೬೩

ಕಡುಕೆಯ್ದಾನಿರೆ ಚಕ್ರವರ್ತಿವರೆಗಂ ಮೇಘಾಮರರ್ ಬರ್ಪರೆಂ
ದೊಡಿದರ್ಕಂ ಮಿಗಿಲುಂಟೆ ಬನ್ನಮೆನುತುಂ ಮೇಘೋತ್ಕರಧ್ವಾನದಿಂ ।

ಕಡುಕೆಯ್ದಾರ್ದುರ್ ಜಯಮುಂ ಭುಜಾರ್ಜಿತಜಯಮುಂ ಪೊಕ್ಕೆಳ್ಚನಸ್ತ್ರಾಳಿಯಿಂ
ಕಿಡಿಯಿಂ ಕೆಂಡದಿನೇಂ ಪೊರಳ್ಚಿದುವೊ ತನ್ಮ್ಲೇಛಾಮರಾನೀಕಮುಂ ೬೬

ವ॥ ಆಗಳಾನೆಗಟ್ಟಿ ಸಮರಕಳಕಳಮುಂ ಕೇಳ್ದಿದೇನೆಂದು ಭರತೇಶ್ವರ ಚಕ್ರವರ್ತಿ ಖಡ್ಗರತ್ನಕ್ಕೆ ಕೈಯುಂ ನೀಡಿದಾಗಳ್,

ಗಣಬದ್ಧಾಮರಹೂಂಕೃತಂ ಜಯಕುಮಾರೋನ್ಮುಕ್ತಮಾನೋಗ್ರಮಾ
ರ್ಗಣಮಾವೀರನಿನಾದಸಿಂಹನಿನದಂ ತಮ್ಮಂ ಪಳಂಚಲ್ಕೆ ತ ।
ಳ್ಪಿಣಿವೃಂದಂ ಮಣಿದೋಡೆ ಮಾಣದೆ ಬಳಾಕಾವರ್ತರಳ್ಕುತ್ತೆ ಕೇ
ಳ್ಮಿದಿನ್ನೆಂದುದನೆಂಬೆವೆಂದೆಱಗಿದರ್ ಚಕ್ರೇಶಪಾದಾಬ್ಜದೊಳ್ ॥ ೬೭

ವ॥ ಆಗಳ್ ಜಯನ ಭುಜವಿಜಯಸೂಚಕಮಾಗಿ ಮೇಘನಾದಸಮಾನ ಮಾದ ಸಿಂಹನಾದಕ್ಕೆ ಚಕ್ರವರ್ತಿ ಮೆಚ್ಚಿ ಮೇಘೇಶ್ವರನಾಮಮುಮಂ ವೀರಾಗ್ರಗಣ್ಯಪದವಿಯುಂ ದಯೆಗೆಯ್ದು ಬಳಾಕಾವರ್ತರ ಕುಲಧನಮುಮಂ ಯಶೋಧನಮುಮಂ ಕೈಕೊಂಡು ಅವರಂ ವಶವಿಧೇಯರ್ಮಾಡಿ ಸಿಂಧು ನದೀತೀರಂಬಿಡಿದು ಪೋಗಿ ಹಿಮವತ್ಪರ್ವತದ ಸಿಂಧುಪ್ರಪಾತಮನೆಯ್ದಿ ತನ್ನ ಬರವನಱಿದಿದಿರ್ವಂದ ಸಿಂಧುದೇವಿಯಿಂದಂ ಸಿಂಧುಜಳಂಗಳಿಂದಭಿಷಿಕ್ತನಾಗಿ ಭದ್ರಾಸನಮಂ ಪಡೆದು ಸಿಂಧುದೇವಿಯನಿರಿಸಿ ಕತಿಪಯಪ್ರಯಾಣಂಗಳಿಂ ಹಿಮವನ್ಮಧ್ಯಕೂಟಾಭಿಮುಖಪ್ರದೇಶದೊಳ್ ಬೀಡಂ ಬಿಟ್ಟು ನಿಯಮಸ್ಥನಾಗಿ ಹಿಮವತ್ಕುಮಾರನುಮಂ ವಿಜಯಾರ್ಧಕುಮಾರನಂದದೊಳ್ ಸಾಧಿಸುವುದುಮಾತನಂದೊಲಗಿಸಿದ ಗೋಶೀರ್ಷಚಂದನದಿವ್ಯೌಷಧಮಾಳಾದಿತದ್ಗಿರಿಸಮುದ್ಭೂತಸಾರವಸ್ತುಗಳಂ ಕೈಕೊಂಡು ಆಜ್ಞಾವಿಧೇಯರ್ಮಾಡಿ ಸಿಂಧುನದೀತೀರಂಬಿಡಿದು ಪೋಗಿ ಹಿಮವತ್ಪರ್ವತಮಂ ನೋಡಿ,

ಇದು ಹೈಮಾದ್ರೀಂದ್ರಮಾಱುಂ ಕುಲಗಿರಿಗೆ ಮೊದಲ್ ಮೇರುಶೈಲೇಂದ್ರಮಂ ಮೆ
ಚ್ಚದಿದಾಕಾಶಂಬರಂ ಪರ್ಬಿದ ಮಣಿಮಯಕೂಟಂಗಳಿಂದಿಲ್ಲಿ ಮಾದ್ಯ ।
ದ್ವಿದಿನೀಂದ್ರಸ್ಥೂಳದಂತಾಹತಿವಿದಳಿತಗೋಶೀರ್ಷಸಾರದ್ರವಾಮೋ
ದದಿನೆತ್ತಂಗಂಧವಾಹಂ ಮಗಮಗಿಸೆ ಬೆಡಂಗೀನಗೇಂದ್ರೋಪಕಂಠಂ ॥ ೬೮

ಇದಱಿಂ ಮಧ್ಯದ ಪದ್ಮೆಯೆಂಬ ಕೊಳದಿಂದಂ ಗಂಗೆಯುಂ ಸಿಂಧುವುಂ
ಮೊದಲೊಳ್ ಪುಟ್ಟಿ ನೆಗೞ್ತೆವೆತ್ತುವು ನೆಲಕ್ಕೆವಮ್ಮಾಳ್ವ ಷಟ್ಖಂಡಕಿಂ ।
ತಿದಱಿಂದಿತ್ತೆಯೆ ಮೇರೆ ನೋಡಿಮೆಮಗೀಶ್ಶೈಳೇಂದ್ರಮೆಂದಂದು ತೋ
ಱಿದನಾತನ್ನೊಡವರ್ಪ ಭೂಪನಿಕರಕ್ಕುತ್ತುಂಗಹೈಮಾದ್ರಿಯುಂ ॥ ೧೯

ವ॥ ಅಂತು ತದ್ಗಿರೀಂದ್ರಮಧ್ಯಮಕೂಟದಿಂದಂ ಸಯ್ತು ತೆಂಕಮೊಗದೆ ಬಂದು ವೃಷಭಾಚಳಮಂ ಕಂಡಂ. ಅದು ಯೋಜನಶತಮೂಲವಿಸ್ತೃತಮುಂ ತಾವತ್ಪ್ರಮಾಣೋತ್ಸೇಧಮುಂ ತದರ್ಧಪ್ರಮಿತೋಪರಿಮತಳವಿಸ್ತಾರಮುಂ ಪಂಚವಿಂಶತಿಶತಯೋಜನಾವಗಾಹಮುಮಾಗಿ ಸಂದುತ್ತರಭರತಮಧ್ಯಮಖಂಡದ ನಟ್ಟನಡುವಣೆಡೆಯೊಳ್ ಅತಿಕ್ರಾಂತಾನೇಕಚಕ್ರವರ್ತಿಗಳ ವಿಶದಯಶಃಪುಂಜಮುಮಂ ವಿಜಯಲಕ್ಷ್ಮೀಮುಖವಿಳೋಕನಮಂಗಳಮಣಿದರ್ಪಣಶ್ರೀಯುಮಂ ತನ್ನೊಳಳವಡಿಸಿ,

ಕುವಲಯಪಾಂಡುರಂ ಕನಕಪಂಕಜಷಂಡವಿರಾಜಿ ಕೇಕಿತಾಂ
ಡವರಮಣೀಯಕಲ್ಪಲತಿಕಾವನಮುನ್ಮದಭೃಂಗಮಾಳಿಕಾ ।
ರವಮುಖರೀಕೃತಾಮ್ರವನಶೋಭಿತಮಾಶ್ರಿತದಿವ್ಯಸುಂದರೀ
ನಿವಹನಿಕೀರ್ಣಚಂಪಕವನಂ ಕರಮೊಪ್ಪುಗುಮಾಮಹೀಧರಂ ॥ ೨೦

ವ॥ ಆವೃಷಭಾದ್ರಿಯ ಮೇಖಳಾಭಿತ್ತಿಯೊಳ್ ಆತ್ಮೀಯವಿಶ್ವವಿಶ್ವಂಭರಾವಿಜಯಪ್ರಶಸ್ತಿಯನತ್ತಿಯೊಳ್ ಬರೆಯಿಸುವೆನೆಂದು ಪೋಗಿ ನೋಡುವನ್ನೆಗಂ,

ಅದಱೊಳನೇಕಕಲ್ಪಶತಕೋಟಿಗಳೊಳ್ ಸಲೆ ಸಂದ ಚಕ್ರಿವೃಂ
ದದ ಚಲದಾಯದಾಯತಿಯ ಬೀರದ ಚಾಗದ ಮಾತುಗಳ್ ಪೊದ ।
ೞ್ದಿದವಿರೆ ತತ್ಪ್ರಶಸ್ತಿಗಳೊಳಂತವನೊಯ್ಯನೆ ನೋಡಿ ನೋಡಿ ಸೋ
ರ್ದುದು ಕೊಳಗೊಂಡ ಗರ್ವರಸಮಾಭರತೇಶ್ವರಚಕ್ರವರ್ತಿಯಾ ॥ ೨೧

ವ॥ ಅಂತು ಗಳಿತಗರ್ವನಾಗಿ ಸಿಗ್ಗಾಗಿ ಪೂರ್ವಾವನಿಪಾಳಪ್ರಶಸ್ತಿಯೊಳೊಂದೊಂದಂ ದಂಡರತ್ನದಿಂ ಸೀಂಟಿ ಕಳೆದು ನಿಜಪ್ರಶಸ್ತಿಗೆಡೆಮಾಡಿ,

ಸ್ವಸ್ತಿ ಸಮಸ್ತನರೇಶ್ವರ
ಮಸ್ತಕವಿನ್ಯಸ್ತಶಾಸನಂ ಸಕಲಜಗ ।

ದ್ವಿಸ್ತಾರಿತಯಶನನ್ವಯು
ವಿಸ್ತಾರಕನಾದಿದೇವನಗ್ರತನೂಜಂ ॥ ೩೦

ಭುವನವಿಶೇಷಕನಿಕ್ಷ್ವಾ
ಕುವಂಶಗಗನೇಂದು ಚಕ್ರರತ್ನಾಧೀಶಂ ।
ನವನಿಧಿವಲ್ಲಭನಾನತ
ದಿವಿಜಗಣಂ ನೆಗೞ್ದ ನಾಭಿರಾಜನ ಪೊಮ್ಮಂ ॥ ೩೧

ಆವನ ದಿಗ್ವಿಜಯದೊಳೈ
ರಾವತಗಜನಿಭಗಜಂಗಳಿಂ ಭುವನತಳಂ ।
ತೀವಿದುದಾವನ ಸೈನ್ಯದೊ
ಳಾವರಿಸಿದ ಧೂಳಿ ಪೂೞ್ದುದಂಭೋನಿಧಿಯಂ ॥ ೩೪

ವೇಳಾವನಂಗಳುಂ ಕು
ತ್ಕೀಳಂಗಳುಮಾವ ನೃಪನ ಪಡೆ ನಡೆವೆಡೆ ನಿ ।
ರ್ಮೂಳಂಗಳಾದುವಾವನ
ತೋಳಿಂ ನಿಮಿರ್ದತ್ತು ಜಳಧಿವರಮವನಿತಳಂ ॥ ೩೫

ದೇವಾಂಗನೆಯರ್ ಪಾಡುವ
ರಾವನ ಜಸಮಂ ಕುಳಾಚಳಾವಳಿಯೊಳ್ ಶೌ ।
ರ್ಯಾವಷ್ಟಂಭದಿನಾಳ್ದವ
ನಾವಂ ಷಟ್ಖಂಡಮಂಡಿತಕ್ಷಿತಿತಳಮಂ ॥ ೩೬

ಆತಂ ಭರತೇಶ್ವರನಿಂ
ತೀತೆಱದಿಂ ನೆಗೞ್ದ ತನ್ನ ಕೀರ್ತಿಯನೀವಿ ।
ಖ್ಯಾತವೃಷಭಾದ್ರಿಯೊಳ್ ಸುರ
ಗೀತಯಶಂ ನಿಱಿಸಿದಂ ನೆಲಂ ನಿಲ್ವಿನೆಗಂ ॥ ೩೭

ವ॥ ಅಂತಾತ್ಮೀಯವಿಜಯಪ್ರಶಸ್ತಿಯನಾವೃಷಭಗಿರಿಯೊಳಾವೃಷಭೇಶ್ವರನಂದನಂ ಕಾಕಿಣೀರತ್ನದಿಂ ಬರೆಯಿಸಿ ಬೞಿಕ್ಕದರ್ಕೀಶಾನದೊಳಿರ್ದ ಗಂಗಾಕೂಟಕ್ಕಭಿಮುಖನಾಗಿ ತತ್ಸಮೀಪದೊಳ್ ಆತ್ಮೀಯಮಂಗಳಜಳಂಗಳಿಂದ

ಭಿಷೇಕಂಗೆಯ್ದು ಅನೇಕಾಶೀರ್ವಾದಪುರಸ್ಸರಂ ಸಿಂಹಾಸನಮುಂ ಕೊಟ್ಟ ಗಂಗಾದೇವಿಯುಂ ವಿಸರ್ಜಿಸಿ ಗಂಗಾತಟಂಬಿಡಿದು, ಚತುರಂಗಚಮೂಚಕ್ರಪ್ರಾಂಸುಪಟಲದಿಂದಂ ದಿಙ್ಮುಖಂಗಳುಂ ವಿರೋಧಿನರಪಾಳಪ್ರಿಯಸಖೀಮುಖಂಗಳುಂ ವಿಚ್ಛಾಯಂಗಳಾಗೆಯುಂ, ಮಹಾವಾಹಿನೀವಾರಣೇಂದ್ರಘಟಾನ್ಯೋನ್ಯಸಂಘಟ್ಟಘಂಟಾಟಂಕಾರಾಸ್ಫಾಳನದಿಂದಂ ಉದಗ್ರಗಿರಿಗುಹಾಂತರಂಗಳುಂ ಉದಗ್ರವಿಕ್ರಮಾರಾತಿಕರ್ಣಾಂತರಂಗಳುಂ ವಿಕೀರ್ಣಂಗಳಾಗೆಯುಂ, ಅಪರಿಮಿತಸ್ತಂಬೇರಮಾನೀಕಶೀಕರನೀಹಾರವರ್ಷದಿಂದಂ ಉಷ್ಣಾಂಶುಪ್ರತಾಪಮುಂ ಊರ್ಜಿತಾರಾತಿರಾಜಪ್ರತಾಪಮುಂ ಅವಿಧೃತೋದ್ರೇಕಮಾಗೆಯುಂ, ಸಂಚಾರಿತಮೇಚಕಕಾಚಳಚಕ್ರವಾಳರುಚಿಹರಿಕರಟಿಘಟಪ್ರಪಂಚರಾಗಕೇತನಚಂಚಳಾಂಚಳನಿಚಯದಿಂದಂ ಅಂಭೋದಿಪಥಮುಂ ಅತಿಚಕಿತವಿದ್ವಿಷ್ಟದೃಷ್ಟಿಪಥಮುಂ ನಿರವಕಾಶಮಾಗೆಯುಂ, ಉದ್ವೃತ್ತಮತ್ತವಾರಣೇಂದ್ರವಿಷಾಣಕುಲಿಶದಂಡಹತಿಯಿಂ ವನದುರ್ಗಭಂಗಮುಂ ವಿಪಕ್ಷಪಾರ್ಥಿವಮನೋರಥಭಂಗಮುಂ ಸಿದ್ಧಮಾಗೆಯುಂ, ದಕ್ಷಿಣಾಭಿಮುಖನಾಗಿ ನಿತ್ಯಪ್ರಯಾಣಂಗಳಿಂ ಬಂದು,

ಇಭಕುಂಭೋದ್ಭೂತಮುಕ್ತಾಫಲನಿಕರಮುಮಾನಂದದಿಂ ತಂದು ಕಂಡಿ
ರ್ದಭಯಾರ್ಥಿವ್ಯಾಧರಾಜಪ್ರತತಿಗಭಯಮಂ ಕೊಟ್ಟು ಕಲ್ಪಾಂತಕಾಲ।
ಕ್ಷುಭಿತಾಂಭೋರಾಶಿಶಂಕಾವಹಬಳನಿಕರಂ ರಾಜತಾದ್ರೀಂದ್ರಶೋಭಾ
ವಿಭವಕ್ಕಟ್ಟಿತುರ್ಜ ತತ್ಪರ್ವತನಿಕಟವನೋಪಾಂತದೊಳ್ ಬೀಡುವಿಟ್ಟಂ॥

ವ॥ ಅಂತು ವಿಜಯಾರ್ಧಾಚಳಕಾಂಡಕಪ್ರಪಾತಗುಹಾಸಮೀಪದೊಳ್ ಬೀಡಂ ಬಿಟ್ಟು ಮುನ್ನಿನ ಮಾಳ್ಕೆಯೊಳ್ ವರೂಥಿನೀಪತಿಯುಂ ಬೆಸಸಿದೊಡೆ ಆತನಾಗುಹಾದ್ವಾರಮಂ ಪೂರ್ವೋಕ್ತಕ್ರಮದೊಳ್ ತೆಱೆದವಱ ಬೆಂಕೆಯಾಱುವನ್ನೆಗಂ ಮ್ಲೇಚ್ಛಖಂಡಮುಮಂ ಮೂಡಣ ದೆಸೆಯೊಳಿರ್ದುವುಮಂ ಬಾಯ್ಕೇಳಿಸಲ್ವೇಗೆ ದಕ್ಷಿಣೋತ್ತರಶ್ರೇಣಿಗಳ ವಿದ್ಯಾಧರರಾಜಾಧಿರಾಜರ್ ನಮಿವಿನಮಿಗಳಂ ಮುಂದಿಟ್ಟು ಬಂದು,

ಭರತೇಶ್ವರಪದನಖಮಣಿ
ಮರೀಚಿಗಳ್ ತಮ್ಮ ಮಕುಟಮಣಿದೀಧಿತಿಯೊಳ್।

ಬೆರಸಿರೆ ತದಾಜ್ಞೆಯಂ ನಿಜ
ಕಿರೀಟದಿಂ ತಾಳ್ದಿದಂದದಿಂ ಸೊಗಯಿಸಿದರ್ ॥ ೭೯

ನಮಿವಿನಮಿಗಳಂತಾಕ
ಚ್ಛಮಹಾಕಚ್ಛರ್ಕಳಿಂದವೊದವಿದ ನಣ್ಪಂ ।
ತಮದರ್ದಿರೆ ತವೆಮ್ಮಡವುಟ್ಟಿದ
ಕಮಳಾನನೆಯಂ ಸುಭದ್ರೆಯಂ ತಂದಿತ್ತರ್ ॥ ೮೦

ವ॥ ಅಂತಾಸುಭದ್ರೆಯೆಂಬ ಕನ್ಯಾರತ್ನಮಂ ಅಂಬರಚರರೋಚಿತಕಲ್ಯಾಣಂಗಳಿಂದಂ ಆಪುರುಷರತ್ನಾಕರನೊಳ್ ನೆಱಪಿ ತಮ್ಮ ಮನೆಯೊಳುಳ್ಳನರ್ಘ್ಯರತ್ನಂಗಳೆಲ್ಲಮಂ ಬಳಿವಳಿಗೊಟ್ಟು ಬೀಳ್ಕೊಂಡು ಪೋದರ್. ಅನ್ನೆಗಂ ಮ್ಲೇಚ್ಛರಾಜಬಲಪರಿವೃತನಾಗಿ ನಿಜಭುಜವಿಜಯಮಂ ಮುಂದಿಟ್ಟು ಬಂದು ಕಂಡ ದಂಡನಾಯಕಂ ತೋಱಿದನೇಕಕ್ಷತ್ರಿಯಪುತ್ರಕುಲಧನಂಗಳಂ ಕೈಕೊಂಡು ಕೋಶಾಧ್ಯಕ್ಷಹಸ್ತನ್ಯಸ್ತಂಗಳ್ಮಾಡಿ ಬೆಸನನಿರ್ವೆ ಕೇಳ್ದಂತು ಪೂಣಿಸಿ ಕಳುಪಿ ಮುನ್ನಮೆ ತೆಱೆದಱುದಿಂಗಳ್ಪರಮಾಱಿದ ಕಾಂಡಕಪ್ರಪಾತಗುಹೆಯೊಳಗಣಿಂದಂ ಚಕ್ರರತ್ನಂ ಮುಂದೆ ನಡೆಯೆ ಕಾಕಿಣೀರತ್ನರಚಿತಸೂರ್ಯಚಂದ್ರಮಂಡಲಂಗಳ ಬೆಳಗಿನೊಳಂ ಗಂಗಾನದ್ಯುಭಯತಟಮಹಾವೀಥಿಗಳೊಳಂ ನಡೆದು ಕತಿಪಯದಿನಂಗಳಿಂ ಗುಹಾದ್ವಾರಮಂ ಪೊಱಮಡುವಾಗಳ್ ತದ್ಗುಹಾಕೂಟನಿವಾಸಿಯಪ್ಪ ನಾಟ್ಯಮಾಲಾಮರಂ ಸುವರ್ಣಪೂರ್ಣಕುಂಭಾದಿಮಂಗಳಂಗಳಿನಿದಿರ್ಗೊಳೆ ಗುಹಾದ್ವಾರದಿಂ ಪೊಱಮಟ್ಟಾಗಳ್,

ಧವಳಚಮರೀಜವೀಚೀ
ನಿವಹಂ ಶ್ವೇತಾತಪತ್ರಫೇನಪ್ರಕರಂ ।
ವಿವಿಧಪ್ರವಾಹಮೆಸೆಪುದು
ವಿವಿಧಬಲಂ ಗಂಗೆಯಂತೆ ತದ್ಗಿರಿತಟದೊಳ್ ॥ ೮೧

ವ॥ ಆಗಳ್ ಪತಾಕಿನೀಪತಿಯ ನಿಯಮದಿಂ ಪೂರ್ವದಿಗ್ಭಾಗಸ್ಥಿತಮಂ ಮ್ಲೇಚ್ಛಖಂಡಮನಪ್ರತಿಹತಶಾಸನಾಂಕಿತಂಮಾಡಿ ಬರೆ ವಿಜಯಸೈನ್ಯವಿನಿರ್ಜಿತಭರತಮಂಡಳಂ ಭರತೇಶ್ವರಚಕ್ರವರ್ತಿ ಸಿದ್ಧದಿಗ್ವಿಜಯನಾಗಿ

ವಿಜಯಪರ್ವತಗಳುಮನೇಱಿ ಗಂಗಾತಟಂಬಿಡಿದು ಪದಯಣಂಬಂದು ಕೈಳಾಸಾಚಳನಿಕಟದೊಳ್ ಕಟಕಮಂ ನಿಱಿಸಿ ಪರಿಮಿತಪರಿಜನಂಬೆರಸು ತದ್ಗಿರೀಂದ್ರಮನೆಯ್ದೆವಂದು,

ಶರಭಂಗಳ್ಗಡೆ ಸಿಂಹದುರ್ವ್ವನಗಂಧೇಭೋತ್ಕರಕ್ಕಂದುಮಾ
ಗರವಿೂಭಾಧರವಿೂಮಹೋಗ್ರಮೃಗಸಂಘಾತಂಗಳೊಂದೊಂದನಿಂ ।
ತಿರೆ ಕಂಡೋಡುವುವಲ್ಲದಿಂತಿವೊಡಗೂಡಿರ್ದಪ್ಪುವಿಂತೀಜಗ
ದ್ಗುರು ಬಂದಿದ್ದರ್ಪದಱಿಂದೆ ಶಾಂತರಸಮಂ ಕೈಕೊಂಡುದೀಪರ್ವತಂ ॥ ೮೨

ವ॥ ಎಂದು ಕೈಳಾಸಾಚಳಮನೇಱಿ ಧೂಳೀಶಾಲದಿಂ ತಗುಳ್ದು ಪೂರ್ವ್ವೋಕ್ತವರ್ಣನೋಪೇತಮಪ್ಪ ವೃಷಭನಾಥನಾಸ್ಥಾನಮಂಟಪಮಂ ನೋಡುತ್ತುಂ ಬಂದು ಸಕಳಸುರಾಸುರೇಂದ್ರಮುನೀಂದ್ರರುಂದ್ರಸಭೆಯ ನಡುವೆ ಸಿಂಹಾಸನಮಸ್ತಕದೊಳಿರ್ದ ಜಗತ್ತ್ರಯತಿಳಕನ ಪಾದಪದ್ಮಂಗಳ್ಗೆ ಭರತೇಶ್ವರಚಕ್ರವರ್ತಿ ಮಹೀತಳನಿಹಿತಮಣಿಕಿರೀಟರಶ್ಮಿಸಂದೋಹಸಾಂದ್ರಕುಂಕುಮಪಂಕದಿಂ ವಿಹಿತೋಪಹಾರನಾಗಿ,

ಸಮಸ್ತಸುರಕೋಟಿ ಹೇಮಘಟಕೋಟಿಯಿಂ ತೀವಿ ತಂ
ದಮೋಘಭುಜಕೋಟಿಯಿಂ ಮಿಸಿಸೆ ದುಗ್ಧಸಿಂಧುಪ್ಲವಂ ।
ಶ್ರಮಾಂಬುಲವಮೊಂದುಮಂ ನಿನಗೆ ಪುಟ್ಟಿಸಲ್ಕಾರ್ತುದಿ
ಲ್ಲಮಾನುಷಮನಂತವೀರ್ಯಗುಣಮಾದಿತೀರ್ಥೇಶ್ವರಾ ॥ ೮೩

ವಿದಗ್ಧಸುರಸೌಂದರೀನಯನಸೌಂದರಂ ನಿನ್ನ ರೂ
ಪಿದೆತ್ತ ಕುಸುಮಾಸ್ತ್ರನಂ ತುಳಿದು ಗೆಲ್ದ ವಿಕ್ರಾಂತಮೆ ।
ತ್ತಿದಚ್ಚರಿ ದಲೆಂಬಿನಂ ನೆಗಟ್ದೆ ನೀಂ ತ್ರಿಲೋಕಂಗಳೊಳ್
ನದೇವಚರಿತಂ ಚರೇತೆನಿಸಿದೈ ತ್ರಿಲೋಕೇಶ್ವರಾ ॥ ೮೪

ಅತೀಂದ್ರಿಯಸುಖಾಮೃತಾಂಬುಧಿನಿವಾಸಮೊಂದೊಂದನಾ
ತ್ಮತತ್ವವಿದ ಮುಕ್ತಿಮಾರ್ಗಮನೆ ಕೇಱಿ ಕಂಡೈ ಪೆಱರ್ ।
ಚತುರ್ಗತಿಯ ಬಟ್ಟೆಯಂ ನೆಱೆಯೆ ಕಂಡರೆಂತುಂ ಕರ
ಸ್ಥಿತಾಮಳಕಮೆಂಬರಾಜಱುಚದೇವುದಿಂದಾರ್ಚಿತಾ ೮೫

ಮರುಸ್ಥಳದ ಮಾೞದೊಳ್ ನಡುಪಗಲ್ವರಂ ಗ್ರೀಷ್ಮದೊಳ್
ಸುರುಳ್ವನೆಗಮಪ್ಪ ಜೀವವರ್ಗೆ ಜೊಂಪವಿಾವಮ್ಮಾವು ನಿ ।
ರ್ಝರಾಂಬು ದೊರೆಕೊಳ್ವವೊಲ್ ಭವದವಾಗ್ನಿಯೊಳ್ ಜೀವ ಜೀ
ವರಾಶಿಗೆ ಭವದ್ವಚೋಮೃತಮೆ ಮರ್ದನಂಗಾಂತಕಾ ೮೬

ಭವಂ ತವೆ ಭವತ್ಪದಾಂಬುರುಹಸೇವೆಗೆಯ್ವಾರುಮಂ
ಭವಂಗಿಡಿಪೆಯೇಂ ತ್ರಿಲೋಕಗುರುವೆಂಬ ಪೆಂಪಿಂತುಟೇ ।
ಭವಂಗಿಡಿಸುವೋಲಗಕ್ಕಭವ ಬೇಸಱಿಂ ಪೋಗೆ ಪೋ
ಭವಂ ಭವದುಪಾಂತದಲ್ಲಿಯೆ ಮನೋಭವಧ್ವಂಸಕಾ ॥ ೮೭

ಜವಂಗಿಡದೆ ಮುಟ್ಟೆ ಬರ್ಪ ಜವನಂ ಜವಂಗುಂದಸಲ್
ಜವಂಗೆ ಜವನಾಗಲಿಂಪೆಱರ್ಗೆ ತೀರ್ಗುಮೋ ತೀರದಾ ।
ಜವಂ ಜವಜವಾಗಿ ಮುಟ್ಟುಗಿಡುವನ್ನಮಿನ್ನಾ ಜವಂ
ಜವ ವ್ಯಸನಪುಂಜಮಂ ಕಿಡಿಪುದಾದಿತೀರ್ಥೇಶ್ವರಾ ॥ ೮೮

ಅನೇಕಭುಜನೇತ್ರಪಙ್ತಿರಸನಾದಿಗಳ್ ದೇವನಿ
ನ್ನನರ್ಚಿಸುವ ನೋೞ್ಪ ಬಣ್ಣಿಸುವ ಪೊತ್ತದೇಕಾಂಗದಿಂ ।
ದ್ರನಂತೆನಗೆ ಸಾಲವಿನ್ನೆರಡೆ ಕೈಯ್ಯೆರಟ್ಕಣ್ಗಳೊಂ
ದೆ ನಾಲಗೆಯುಮೊಂದೆ ಚಿಂತಿಸುವೆನಾದಿಭಟ್ಟಾರಕಾ ॥ ೮೯

ಫಣಿಪ್ರಭುಗವೆತ್ತಮತ್ತಳಗಮಲ್ತೆ ರೂಪಸ್ತವಂ
ಗುಣಸ್ತವಮುದಾತ್ತವೃತ್ತ ಭವದೀಯವಸ್ತುಸ್ತವಂ ।
ಗುಣಾಗುಣವಿವೇಕಮೂಕರತಿಮುಗ್ಧರೆಮ್ಮಂದಿಗರ್
ಪ್ರಣಾಮದೊಳೆ ಪುಣ್ಯಮಂ ಪಡೆವರಾದಿತೀರ್ಥೇಶ್ವರಾ ॥ ೯೦

ವ॥ ಎಂದನೇಕಸ್ತವನಂಗಳಿಂ ಸ್ತುತಿಸಿ,

ಚತುರಂಭೋರಾಶಿಮಧ್ಯಕ್ಷಿತಿವಲಯದೊಳಂ ತನ್ನದಗ್ರಪ್ರತಾಪೋ
ನ್ನತಿಯಿಂದಂ ತನ್ನ ರತ್ನಪ್ರತತಿಗಳೊಳಪೂರ್ವಂಗಳಂ ಕೊಂಡುಕೊಂಡೂ
ರ್ಜಿತಪುಣ್ಯಂ ಪೂಜಿಸುತ್ತುಂ ತಣಿಯನೆ ಭಗವತ್ಪಾದಪೀಠೋಪಕಂಠ
ಕ್ಷಿತಿಯುಂ ಚಕ್ರಾಧಿನಾಥಂ ಸುಕವಿಜನಮನೋಮಾನಸೋತ್ತಂಸಹಂಸಂ ॥

ಸುರಗೀತಂ ಸುರದುಂದುಭಿಧ್ವನಿ ಸುರಸ್ತ್ರೀರಮ್ಯಸಂಗೀತಕಂ
ಸುರಪುಷ್ಪೋತ್ಕರಸಾರಭಂ ಸುರಜಯಸ್ತೋತ್ರಂ ಸುರಾಶೀಸ್ತವಂ ।
ಸುರರಾಜೇಂದ್ರಮಹಾವಿಭೂತಿ ತರೆ ಚಿತ್ತೋತ್ಸಾಹಮಂ ತಾಳ್ದಿದಂ
ಪರಮಾನಂದಮನಾದಿದೇವಸಭೆಯೊಳ್ ಸಂಸಾರಸಾರೋದಯಂ ॥ ೯೦

ಗ॥ ಇದು ದೇವೇಂದ್ರಮುನೀಂದ್ರವಂದ್ಯಪರಮಜಿನೇಂದ್ರಮುಖ
ಚಂದ್ರವಾಕ್ಚಂದ್ರಿಕಾಪ್ರಸರಪ್ರಸಾದೋದೀರ್ಣಸೂಕ್ತಿ
ಕಲ್ಲೋಲಮಾಲಾಕೀರ್ಣಕವಿತಾಗುಣಾರ್ಣವ
ಪ್ರಣೀತಮಪ್ಪಾದಿಪುರಾಣದೊಳ್
ಷಟ್ಖಂಡಮಂಡಳವಿಜಯಂ
ತ್ರಯೋದಶಾಶ್ವಾಸಂ.
ಸಂಪೂರ್ಣಂ.

---

ಶ್ರೀರಮಣನೆಱಗಿ ಮುಕ್ತಿ
ಶ್ರೀರಮಣನ ಪಾದಪೀಠದೊಳ್ ಸುರಸಭೆ ಕ ।
ಣ್ಣಾರೆ ನಡೆ ನೋಡೆ ಮದನಾ
ಕಾರಂ ತಳರ್ದಂ ಸರಸ್ವತೀಮಣಿಹಾರಂ ॥ ೧

ವ॥ ಅಂತು ಸಮವಸರಣಮಂಡಳದಿಂ ಪೊಱಮಟ್ಟು ಲೀಲಾಪ್ರಸಾದಿತ ಸಕಳದಿಙ್ಮಂಡಳಂ ಕೈಲಾಸಶೈಲಕಟಕನಿಕಟವರ್ತಿಯಾಗಿರ್ದ ನಿಜವಿಜಯ ಕಟಕಕ್ಕೆವಂದು,

ಅಱುವತ್ತು ಸಾಸಿರಂಗಳ್
ನೆಱೆದವು ಬರಿಸಂಗಳಿಂದು ದಿಗ್ವಿಜಯದೊಳ ।
ಲ್ಕಿಱಿನೊಳಯೋಧ್ಯಗೆ ಪೊಗಸಿದ
ನಱಿಕೆಯ ಪಱೆ ಪಲವುಮೆಸೆಯೆ ಭರತಮಹೀಶಂ ॥ ೨

ವ॥ ಅಂತು ಕೆಲವುಪಯಣಂಗಳಿಂದಂ ನಿಜಾನ್ವಯರಾಜಧಾನಿಯನಯೋಧ್ಯಾಪುರಮನೆಯ್ದಿದಾಗಳ್,

ಹತವೈರಿಕ್ಷತ್ರಚಕ್ರಂ ಭಯಚಕಿತಜಗದ್ವೀರಚಕ್ರಂ ವಿನಮ್ರ
ಕ್ಷಿತಿಚಕ್ರಂ ದೀಪದೀಪ್ತಿಪ್ರತಿಹತದಿನಕೃಚ್ಚಕ್ರತೀವ್ರಾಂಶುಚಕ್ರಂ ।
ಜಿತದಿಕ್ಚಕ್ರಂ ಪ್ರಭಾಪ್ರಜ್ವಳಿತದಶದಿಶಾಚಕ್ರಮುಗ್ರಪ್ರತಾಪೋ
ರ್ಜಿತತೇಜಶ್ಚಕ್ರಮಿರ್ದತ್ತೊಳಪುಗದೆ ಪುರೋಪಾಂತದೊಳ್ ಚಕ್ರಿಚಕ್ರಂ॥

ವ॥ ಅಂತು ಚಕ್ರರತ್ನಮಯೋಧ್ಯಾಪುರಮಂ ಪುಗದೆ ತಱಂಬಿನಿಂದುದಂ ಕಂಡುಮದಂ ರಕ್ಷಿಸುವ ಯಕ್ಷಸಹಸ್ರಂಬೆರಸು ಗಣಬದ್ಧದೇವರೆಲ್ಲಂ ನೆರೆದು,

ಪುರಗೋಪುರದೊಳಗಂ ಚಕ
ಕ್ರರತ್ನಮಿಂತೇಕೆ ಪುಗದೆ ಮಾರ್ಕೊಂಡುದೊ ಮ ।
ಚ್ಚರಿಪಘಟನಿನ್ನನಾವನೊ
ಭರತೇಶ್ವರಚಕ್ರವರ್ತಿಗಿನ್ನುಂ ಜಗದೊಳ್ ॥ ೪

ಆವಂಗೆ ಕಾಲಚಕ್ರಮ
ನೋವದೆ ಮಾಡಲ್ಕೆ ಚಕ್ರಮಿದು ಬಗೆದುದೊ ಶೌ ।

ರ್ಣ್ಯಾವಿರ್ಭೂತದವಾನಳ
ನಾವನ ಚತುರಂಗಬಲಮನಿಸಿಂ ಸುಟ್ಟಪ್ಪುದೋ ॥ ೫

ಆತಂಗೆ ಚಕ್ರಿವೇಟ್ಟಿಮು
ಪ್ಪೋ ತಳ್ತುಱಿದಾಮ ಗೆಲ್ವಮೆಂದನಿಬರುಮಂ ।
ತ್ಪಾತಮರುದಾಭಿಘಾತೋ
ದ್ಭ್ಪೂತಪಯೋನಿಧಿಗಳಂತೆ ಮಸಗಿದರಾಗಳ್ ॥ ೬

ವ॥ ಆಪ್ರಸ್ತಾವದೊಳ್ ಚಕ್ರೇಶ್ವರಂಗೆ ಚಕ್ರರತ್ನಸ್ಖಲನಮಂ ಪತಾಕಿನೀಚಕ್ರಪ್ರಧಾನಪ್ರಭುಗಳಱಿಯೆ ಬಿನ್ನಪಂಗೈದೊಡಸ್ಖಲಿತಗತಿಯಪ್ಪ ಚಕ್ರರತ್ನಸ್ಖಳನಕ್ಕೆ ನಾಡೆಯುಂ ಚಕ್ರಿ ಮನಸ್ಖಳನಮಾಗೆ ವಿಸ್ಮಯಂಬಟ್ಟು ಪುರೋಹಿತರತ್ನಮಂ ಬರಿಸಿ,

ಪದಿನಾಲ್ಕುಂ ರತ್ನಕ್ಕಂ
ಮೊದಲೆನಗೀಚಕ್ರರತ್ನಮಿದಱಿಂ ಮೇಲಾ ।
ವುದು ದೈವಮೆನಗಯೋಧ್ಯೆಯು
ನಿದು ಪೊಗದೆ ತಱುಂಬಿನಿಂದ ಕಾರಣಮೇನೋ ॥ ೭

ಆಪೂರ್ವದಕ್ಷಿಣಾಪರ
ಕೂಪಾರದ ರಜತಗಿರಿಗುಹಾದ್ವಯದೆಡೆಯೊಳ್ ।
ಪೋಪಂದುಮಣಮ ತೊಡಱದು
ದೀಪುರಗೋಪುರದೊಳೇಕೆ ತೊಡರ್ದುದೊ ಚಕ್ರಂ ॥ ೮

ಎನಗಮರಾತಿಗಳೊಳರೆಂ
ಬಿನಿತು ಪರಾಭವಮನೀಗಳೀಚಕ್ರಂ ಸೂ ।
ಚನೆಗೈದುದಿನ್ನು ನಾವಂ
ತನಗಿರಲೆಡೆಮಾಡಿದಪ್ಪನಂತಕಮುಖಮಂ ॥ ೯

ವ॥ ಎಂದು ವೀರರಸೋದಾರಗಂಭೀರವಚನರಚನೆಗಳನಿನಿತನೆ ಬೆಸಸಿ ಮಾಣ್ದ ಚಕ್ರವಲ್ಲಭಂಗೆ ಪುರೋಹಿತನಭಿಮುಖನಾಗಿ,

ನೀನಾದಿರಾಜನ್ಯ ನಿನ
ಗಾನಾಲ್ಕುಂ ರಾಜವಿದ್ಯೆ ಪುಟ್ಟಿದುದಱಿಂ ।

ನೀನೆ ಬೆಸಸುವುದು ನಯಮವನ
ದೇನೆಂದೆಮ್ಮಂದಿಗರ್ ಜಡರ್ ಬಿನ್ನವಿಪರ್ ॥ ೧೦

ಫಳದಿಂ ಕಲ್ಪದ್ರುಮಮಂ
ಜಳದಿಂ ಜಳನಿಧಿಯನುಕ್ತಿಯಿಂ ಸುರಗುರುವಂ ।
ಬೆಳಗಿಂ ದಿನಪನನರ್ಚಿಪ
ಜಡಮತಿಗಳ ತೆಱನನಾಮುಮನುಕರಿಸಿರೆವೇ ॥ ೧೧

ನಿನ್ನಯ ಮಾಡಿದ ಗೌರವ
ದುನ್ನತಿ ನುಡಿಯಿಸುವುದೆನ್ನನದಱಿಂ ಕಿಱಿದಂ ।
ಬಿನ್ನವಿಸಿದಪೆಂ ಜೈತ್ರಾ
ಸ್ತ್ರಾನ್ನಿನಗೀಚಕ್ರರತ್ನದಿಂ ಪೆಱತುಂಟೇ ॥ ೧೨

ಇದು ಪಗೆವರುಳ್ಳುದಂ ತೋ
ಱಿದಪುದು ನಿನಗರಿನೃಪರ್ಕಳಲ್ಲದಿದಿಂತಿರ್ಪು ।
ದೆ ದುರ್ನಿರೀಕ್ಷ್ಯಮಿನಬಿಂ
ಬದಂತೆ ಪಜ್ಜಳಿಸಿ ಬಾಗಿಲೊಳ್ ಪುರವರದಾ ॥ ೧೩

ದ್ವಾದಶರಾಜಕಮೆಂಬುದ
ನೋದುಗಳೊಳ್ ಕೇಳಲಾದುದಲ್ಲದೆ ಕಾಣ ।
ಲ್ಕಾದುದೆ ಲವಣೋದಧಿವೃತ
ಮೇದಿನಿಯೊಳ್ ದೇವ ನಿನ್ನ ಪೆಸರೆಸೆವೆಡೆಯೊಳ್ ॥ ೧೪

ನಿನಗರಸ ಬಹಿರ್ಮಂಡಳ
ಮನೆ ಸಮಱಲ್ಕಿನಿತುಬರಿಸಮುಂ ಪೋದುವು ಕೇ ।
ಳನಿಸಂತರ್ಮಂಡಲಸಾ
ಧನಮುಂಟೆಂದಱಿಪಿದುದುಮನಿನ್ನಱಿಪುವೆವೇ ॥ ೧೫

ಪುರುತನಯಂ ತಾನಾಮುಂ
ಪುರುತನಯರೆಮೆಮಗೆ ತಂದೆಯಿತ್ತವನಿತಳಂ ।
ಪೊರೆಯುಂಟೆ ತನಗೆ ಭಾಗ್ಯಾ
ನುರೂಪದಿಂ ಬಾಳ್ವಮೆಱಗೆವೆಂಬತಿಮದದಿಂ ॥ ೧೬

ನಿನ್ನನುಜರನಿಬರುಂ ಮಾ
ನೋನ್ನತರಣಮೆಱಗರವರೊಳಗ್ಗಳದದಟಂ ।
ತನ್ನಭಿಮಾನದಭುಜಬಲ
ದುನ್ನತಿಯನೆ ಮೆಱೆವ ಬಾಹುಬಲಿ ಮುನ್ನೆಱೆಗಂ ೧೭

ಆದಿಬ್ರಹ್ಮರ ಕೊಟ್ಟೀ
ಮೇದಿನಿಗಾನೊಡೆಯನಾತನರಸನಿವಿರಿದಿಂ ।
ವಾದೊಡಮೇನೆನಗೆಂಬ ಮ
ದೋದಯದೊಳ್ ದೇವ ಬಾಹುಬಲಿ ಬಲ್ದಿರ್ದಂ ॥ ೧೮

ನಿನಗೇನಂ ಪೇಳ್ವೆನಾತಂ ಸುಭಟಸಮರಸಂಘಟ್ಟದೋರ್ಗರ್ವವಿಧ್ವಂ
ಸನಕೇಳೀದೋಹಳಂ ವಿದ್ವಿಷದಿಭರದನಸ್ತಂಭಲೀಲಾಸಮುತ್ತಾ ।
ಟನಕಾಂಕ್ಷಾದುರ್ಮದಂ ದುರ್ಜಯರಿಪುನೃಪಶೌರ್ಯೋನ್ನಮನ್ಮಸ್ತಕಾವ
ರ್ಜನವಾಂಛಾದುರ್ಧರಂ ದುರ್ಲಲಿತಚರಿತಸಂಕೇತಗೋಷ್ಠೀನಿಕೇತಂ ॥ ೧೯

ರಾಜವತಿಯುಕ್ಕುಮಲ್ಲದೆ
ರಾಜನ್ವತಿಯಾಗದಲ್ತೆ ಧರೆ ಮತ್ತೊರ್ವಂ ।
ತೇಜಸ್ವಿ ಪೊಡಮೊರ್ಡದಱಿಂ
ರಾಜನ್ವತಿ ಮಾಡು ಧರಣಿಯುಂ ಧರಣಿಪತೀ ॥ ೨೦

ಭರತೇಶ್ವರ ನಿನ್ನ ಪದಾಂ
ಬುರುಹಕ್ಕವರೆಱಗಿ ಸುಖಮನನುಭವಿಸುಗೆ ಮೇಣ್ ।
ಪುರುಪರಮೇಶ್ವರನ ಪದಾಂ
ಬುರುಹಕ್ಕವರೆಱಗಿ ತಪಮನನುಭವಿಸುಗೆ ಮೇಣ್ ॥ ೨೧

ಬಗೆಯೊಳಗೆ ಬಳೆದ ಭೀತಿಯೆ
ಮಿಗೆ ಭವದಾಸ್ಥಾನಭೂಮಿಯುಂ ಪುಗುಗೆ ವನಂ ।
ಬುಗುಗಲ್ಲದಂದು ಪೆಱತೆಡೆ
ಪುಗುವೆಡೆಯಿಲ್ಲವರ್ಗೆ ಬೆಸಸು ಶಾಸನಹರರಂ ॥ ೨೨

ಎನೆ ಬಳೆದ ಮುನಿಸಿನೊಳ್ ಕೆ
ಚ್ಚನಾದ ಕಣ್ ದೆಸೆಗೆ ಕೆಂಪನೊದವಿಸಿದುದು ಧಿ ।

ಗ್ವನಿತೆಯುರ್ಗೆ ರಕ್ತ ಬಲಿಯಂ
ಮನಕ್ಕೆವರೆ ಬಳೆದ ಮುನಿಸೆ ಕುಡುವಂತಾಗಳ್ ‖ ೧೩

ವಿಕಸಿತನಾಸಾಪುಟನತಿ
ವಿಕಂಪಿತಾತಾಮ್ರದಶನವಸನಂ ಬದ್ಧ ।
ಭ್ರುಕುಟಿಪುಟಂ ಭರತೇಶ್ವರ
ನಕಾಲಯಮರಾಜಲೀಲೆಯಂ ಕೈಕೊಂಡಂ ‖ ೧೪

ಏನೇನೋ ಮದನುಜರೆನ
ಗಾನತರಣಮಾಗದಿರ್ದರಾಮದಮವರ್ಗೇ ।
ನೇನೇತಱೊಳಾದುದನಿನಿ
ಸಾನುಂ ಜೇಗದೊಳೆ ಕಳೆದು ತೋಱುವೆನೆ ರಣದೊಳ್ ‖ ೧೫

ವೀರಭಟರುದ್ಭಟಾರಭ
ಟೀರಸರಿವರವರದೆನ್ನರುಂ ಸೆಣಸುವೊಡೇ ।
ಕಾರಣಮೊ ಚಕ್ರಮೇವುದೊ
ವಾರಣಘಟೆ ದಂಡರತ್ನಮೇಗೆಯ್ದಪುದೋ ‖ ೧೬

ಕೊಲೆಗೆಯ್ದೆಮೆಂತುಮೆಂಬೀ
ಬಲಮುಕ್ಕುಮುವಂದಿರಂ ಪಳಂಚಲೆದಪುದಿಂ ।
ಕೊಲೆಗೆಯ್ದದೊಡೇ ನೆಯ್ದರೆ
ಕಲಹದೊಳೆನ್ನಿಂ ಪರಾಭವಂಗಳನವರ್ಗಳ್ ‖ ೧೭

ಎನಿಬರರಸುಗಳುಮೆಱಗಿದೊ
ಡೆನೆಗೇ ವಂದಪುದೊ ಬಾಹುಬಲಿ ಪೊಱಗೆನೆ ಪೇ ।
ಳೆನಿತುಂ ಪುರಮೇವುದೊ ಪಾ
ದನಪುರಮೆನ್ನಾಳ್ಕೆಗಿಂತು ಪೊಱಗೆನಿಪಾಗಳ್ ‖ ೧೮

ಏವನೆಮಗೆಂಬ ಶೌರ್ಯಮ
ದಾವಷ್ಟಂಭದೊಳವಂದಿರಿಂತುಱದಿರೆ ಪೇ ।
ಳಾವುದೊ ಬಾಯ್ಕೇಳಸಿಯುಮಿ
ದೇವುದೊ ಷಟ್ಖಂಡಮಂಡಿತಂ ಭೂವಳಯಂ ‖ ೧೯

ಎಂದೊಡೆ ಪುರೋಹಿತಂ ನಿನ
ತೊಂದೊರೆಗೆ ಶ್ರೀವೃದ್ಧ ದೂರಂದುವುದನವಾರ್ತೆಯಂ |
ಸೆಂಪರಸ ಬಳೆಂಬ ನುಡಿಪವೆ
ನಿಂದತ್ತ್ವಿಲವಿದ್ಯೆನವನ ಭಾವಜ್ಞಾತಂ ೩೦

ವ॥ ಆಗಳ್ ಭರತೇಶ್ವರಚಕ್ರವರ್ತಿಯಟ್ಟಿದ ದೂತರ್ ಪುರುಪರಮೇಶ್ವರ ತನೂಜರಲ್ಲಿಗೆ ಪೋಗಿ,

ಎನಗೊರ್ವಂಗುಪಭೋಗ್ಯಮಲ್ತು ವಸುಧಾಸಾಮ್ರಾಜ್ಯಮೋರಂತೆ ನಿ
ಮ್ಮನಿಬರ್ಗಂ ಪಿರಿಯಣ್ಣನೇಂ ಜನಕನೇನೆಂಬೊಂದು ಕೊಂಡಾಟದಿಂ |
ವಿನಯಂ ಸಾಲ್ವುದು ತಾಮುಮಾಮುಮೊಪ್ಪಿರ್ಪ್ಪಂ ಬಪ್ಪುದೆಂಬೀಶಾ
ಸನಮಂ ನೆತ್ತಿಯೊಳಾಂತು ಬನ್ನಿಮೆಱಗಿಂ ಚಕ್ರೇಶಪಾದಾಬ್ಜದೊಳ್ ॥ ೩೧

ವ॥ ಎಂದು ನುಡಿದ ದೂತನ ನುಡಿಯುಮಂ ರಾಜಾದೇಶಮುಮನವಧಾ ರಿಸಿ ಬಂದ ದೂತನಂ ಮನ್ನಿಸಿ ಸಂತೋಷಂಬಡಿಸಿ ಪೋಗಲ್ವೇೞ್ದು,

ಪಿರಿಯಣ್ಣಂ ಗುರು ತಂದೆಯೆಂದೆಱಗುವಂ ಮುನ್ನೆಲ್ಲಮಿಂತೀಗಳಾ
ಳರಸಂಬೊಂದು ವಿಭೇದಮಾದೊಡೆಱಕಂ ಛೀ ಕಷ್ಟಮಲ್ತೇ ವಸುಂ |
ಧರೆಗಯ್ಯಂ ಪಯೆಗೆಯ್ಯೆಮುಂ ಪಡೆದುವರ್ಕಿಂತೀತನೊಳ್ ತೊಟ್ಟ ಕಿಂ
ಕರಭಾವಂ ನಮಗಕ್ಕಿಗೊಟ್ಟ ಮಡಗೂೞುಣ್ಬಂದಮಂ ಪೋಲದೇ ॥ ೩೨

ವ॥ ಎಂದು ತಮ್ಮೊಳನಿಬರುಂ ಪರಿಚ್ಛೇದಿಸಿ,

ಕುಳಿಶಾಸ್ತ್ರೋತ್ತಂಸಿತಪದ |
ನಳಿನಂಗೆ ತನೂಜರಾಗಿ ಪುರುಷಾರ್ಥಮನು |
ಜ್ಜಳಿಸದೆ ಮಾಣ್ಬುದೆ ನಮಗಿದು
ಪಳಾಳಭಾರಂಬೊಲೀಮಹೀತಳಭಾರಂ ೩೩

ವ॥ ಎಂದು ಪರಿತ್ಯಕ್ತನಿಜರಾಜ್ಯಪರಿಚ್ಛೇದರಾಗಿ,

ತಳರ್ದಪ್ಪುವು ರತ್ನಶಿಬಿರಾ
ವಳಿವಿಳಸಿತಕನಕಗಿರಿಗಳೆನೆ ತನುರುಚಿಗಳ್ |
ಬೆಳಗೆ ಕುಮಾರರ್ ನೂರ್ವರು
ಮೊಳಪೊಕ್ಕರ್ ಸಮವಸರಣಭೂಮಂಡಲಮಂ ॥ ೩೪

ಬಳಪುಗುವುದುಮಖಿಳಜಗ
ತ್ತಿಳಕನ ಮುಖಚಂದ್ರಕಿರಣದಿಂ ಕರಕಮಳಾ ।
ವಳಿಯುಂ ತದೀಯನಯನೋ
ತ್ಪಳವನಮುಂ ಮುಗಿದುವಲರ್ದುವೊಡನೊಡನಾಗಳ್ ॥ ೩೫

ವ॥ ಅಂತು,

ಪೊಡೆವಟ್ಟು ದೇವ ನೀಂ ಕುಡೆ
ಪಡೆದೆವಿಳಾತಳಮನೊಡನೆ ಪುಟ್ಟಿದ ವೋಳ್ ।
ಕ್ಕಡಿಗೆಱಗಿಮೆಂದು ಭರತಂ
ಜಡಿವಂ ನಿನಗೆಱಗಿ ಪರಮ ಪೆಱರ್ಗೆಱಗುವೆವೇ ॥ ೩೬

ಭವದಂಘ್ರಿಕಮಳರಜದಿಂ
ಪವಿತ್ರಮಾದೆಮ್ಮ ಮಕುಟಮೆಱಗದು ಪೆಱರ್ಗಂ ।
ಭವಭಯಹರ ಭರತನನೆಮ
ಗವಯವದೆಱಗಿಸುವ ತಪಮನೀಗಳೆ ದಯೆಗೈ ॥ ೩೭

ದುರಿತಘನತಿಮಿರದಶಶತ
ಕಿರಣ ಮತಿಪ್ರೀತಿಕರಣಮಖಿಳವಿನೇಯೋ ।
ದ್ಧರಣಮೆಮಗಭವ ಭವಭಯ
ಹರಣಂ ಭವದೀಯಸಮವಸರಣಂ ಶರಣಂ ॥ ೩೮

ವ॥ ಎಂದು ಪರಮನಿರ್ವೇಗಪರಾಯಣರಾಗಿ,

ಭರತಂಗೆಱಗುವರೆಂಬಿದೆ
ಪರಿಭವಮೆಮಗಿಂತು ಮಾನಭಂಗಂ ಬರೆ ಬ ।
ರ್ಪರಸೇವುದೆಂದು ಪೊಱ್ದರ್
ಪರಮತಪೋಭರಮನನಿಬರುಂ ಪುರುತನಯರ್ ॥ ೩೯

ವ॥ ಅಂತಾಕುಮಾರರನಿಬರುಮಾದಿತೀರ್ಥಂಕರಸಮವಸರಣಸರೋವರ
ರಾಜಹಂಸವ್ಯತಿಕರಮಂ ಭರತೇಶ್ವರಂ ಕೇಳ್ದು,

ಅವಳಂಬಿಸಿ ನೆಗೞ್ದಿಕ್ಷ್ವಾ
ಕುವಂಶವೊಂದನೆ ಪುರಾಣಪುರುಷರವೋಲಿಂ ।

ತವಿಹತಗತಿಯಿಂ ಮುನ್ನ
ಸ್ವಾಯಂಭುವಭೂಧರದ ಶಿಖರವಂ ಮುಟ್ಟಿದರಾರ್ ‖ ೪೦

ವ॥ ಎಂದು ವಿಸ್ಮಿತಾಂತಃಕರಣನಾಗಿ ಮನದೊಳ್ ಮೆಚ್ಚಿ

ಎನಗನುಜರಾಗಿಯುಂ ಚಲ
ದೆನೆಗೆಱಗದೆ ಪೋಗಿ ಭುವನಗುರುಗೆಱಗಿದರಂ ।
ತನಿಬರುಮಂ ಪೞಿಂದಗ್ಗಳ
ಮೆನೆ ನೆಗೞ್ದ ಬಾಹುಬಲಿಯೆನೆಂತೆಱಗಿಸುವೆಂ ‖ ೪೧

ಖರಕಿರಣಸ್ಫುರಿತಕ್ಕಿದಿ
ರುರಿವಂತಿರೆ ಸೂರ್ಯಕಾಂತಮೆನ್ನೀ ತೇಜ ।
ಸ್ಫುರಿತಕ್ಕೆ ಸೆಣಸಿನೊಳ್ ಮಾ
ಱುರಿಗುಂ ಸೈರಿಸದು ತೇಜಮಾಭುಜಬಲಿಯಾ ‖ ೪೨

ಅದಱಿಂದಮಾತನಂ ಸಾ
ಮದಿಂದಮೞವಡಿಸಿ ನೋಡುವೆಂ ಸಾಮದೊಳಂ ।
ಪದವಡೆದೊಡೆ ಬೞಿಕಿರ್ದ
ಪ್ಪುದಲ್ತೆ ಪದವಡಿಸಲೆನ್ನ ಬಯಕೆಯ ದಂಡಂ ‖ ೪೩

ವ॥ ಎಂದು ಮಂತ್ರಿವರ್ಗದೊಡನೆ ನಿರಾಕುಳಿತಕಾರ್ಯಪರ್ಯವಸಾನನಾಗಿ ಬಾಹುಬಲಿಕುಮಾರಂಗೆ ಲೇಖಮನುನ್ನಯಯೂಖರತ್ನಾಭರಣಪ್ರಭೂತಸ ಮೇತಮನಟ್ಟುವಂತು ಮಹಾಸಂಧಿವಿಗ್ರಹಿಗೆ ಬೆಸಸಿದೊಡಾತಂ ಜನಪ ದಸಮಭಿಜಾತನುಮನ್ವಯಾಗತನುಮಭಿರೂಪನುಂ ಪ್ರತ್ಯುತ್ಪನ್ನಪ್ರತಿಭ ನುಂ ವಕ್ರೋಕ್ತಿನಿಪುಣನುಮಾಧೇಯವಚನನುಮನುದ್ಧತವೇಷನುಂ ಪರಿ ಚಿತಾಶೇಷದೇಶಭಾಷನುಂ ವಯೋವೃದ್ಧನುಂ ಪ್ರಸಿದ್ಧನುಮಪ್ಪ ಮಹತ್ತರ ನ ಕೈಯೊಳ್ ಸನ್ಮಾನದಾನಪುರಸ್ಸರಮಾಗೆ ಕೊಟ್ಟು ವಿಜಯಕಾರ್ಯಸಿದ್ಧಿ ಯಕ್ಕೆಂದು ಪೋಗಲ್ವೇೞ್ವುದು ಮಾತನುಂ ಕತಿಪಯಪ್ರಯಾಣಂಗಳಿಂದಂ ಪೌದನಪುರಮನೆಯ್ದಿ ಪುರಶ್ರೀಯನರ್ಥಿವಟ್ಟುನೋಡಿ ಮೆಚ್ಚುತುಂ ಬಂದು ಲೀಲೋತ್ತಾರಿತರಿಪುನೃಪಾಲಸಾಮಂತಸೀಮಂತಿನೀಸೀಮಂತರಪ್ಪ ಮಹಾ ಸಾಮಂತರಿಂದಮಧರಿತಾನೇಕರಿಪುನೃಪಾನೇಕರಣಂಗಳಪ್ಪವಾರಣಂಗಳಿಂದಂ

ಹೇಲೆಗೋಲ್ಲಂಘಿತಮಹಾವಾಹಿನೀಭಗುರಿಚ್ಛೈರವಾಜಿಗಳಪ್ಪ ವಾಜಿಗಳಿಂಮ ಪಹೃತವಿಕ್ರಾಂತವಿದ್ವಿಷ್ಟವಿಕ್ರಮಸಂಪತ್ತಿಗಳಪ್ಪ ಪತ್ತಿಗಳಿಂದಂ ವಿರಾಜಮಾನಮಪ್ಪ ರಾಜಮಂದಿರಮನೆಯ್ದಿ ದೌವಾರಿಕನಿವೇದಿತಾತ್ಮೀಯವೃತ್ತಾಂತನಾಸ್ಥಾನಮಂಡಪಮಂ ಪೊಕ್ಕು ಲಲಾಟತಟಸಂಘಟ್ಟಿತಸಭಾಕುಟ್ಟಿಮನಾಗಿ,

ಮರಕತನಗಂ ದಿವ್ಯಂ ಮತ್ರ್ಯಾಕೃತಿಯೆಂಬಿನಂ
ವಿರಚಿಸಿದನಿಂತಾದಿಬ್ರಹ್ಮಂ ಹರಿನ್ಮಣಿವರ್ಣನಂ ।
ನೆರೆದುದಿದು ಮೇಣ್ ಕ್ಷಾತ್ರಂ ತೇಜಂ ಧರಾಧಿಪರೂಪದಿಂ
ಧರೆಗೆನುತುಮಾದೂತಂ ಕಣ್ಣಾಳ್ಕೆ ನೋಡಿ ಕುಮಾರನಂ ೪೪

ಪುರುಪರಮೇಶ್ವರಪುತ್ರಂ
ಭರತೇಶ್ವರಚಕ್ರವರ್ತಿಗನುಜನೆನಲ್ ಸುಂ ।
ದರರೂಪನೀಕುಮಾರನೆ
ದೊರೆ ಚಕ್ರಿಗಮೆಸೆಯದಿನಿತು ತೇಜಸ್ಸ್ಫುರಿತಂ ॥ ೪೫

ವ॥ ಎಂದು ಮನದೊಳೆ ಬಗೆದು ವಿಸ್ಮಯಂಬಟ್ಟು ಭರತನಾಥದೂತನಾತ್ಮಪಾರ್ಶ್ವಚರಕರತಳದಿನುಪಾಯನರತ್ನಕರಂಡಕಮಂ ಕೊಂಡು ದೇವಭವದೀಯಾಗ್ರಜಂ ರಾಜಾಧಿರಾಜಂ ನಿಮಗಟ್ಟಿದ ಮಹಾಪ್ರಸಾದಂಬಿನ್ನಪಮೆಂದು ಮುಂದಿಟ್ಟು ಮಹತ್ತರಂ ಮಹತ್ತರಯೋಗ್ಯಮಹೀನಿಹಿತಾಸನದೊಳಿರ್ದುದುಂ; ಅದಂ ಮಹಾಸಂಧಿವಿಗ್ರಹಿ ಕೊಂಡು ಅಪನೀತಮುದ್ರೆಯಂ ಮಾಡಿ ತದಂತಸ್ಸ್ಥಿತಂಗಳಪ್ಪ ರತ್ನಾಭರಣಂಗಳಂ ತೋಱಿ ಕೋಶಾಧ್ಯಕ್ಷಹಸ್ತನ್ಯಸ್ತಂಗಳ್ಮಾಡಿ ದೇವ ಲೇಖಮಿದೆಂದು,

ಭೂವಲ್ಲಭಸೋತ್ಕ್ಷೇಪ
ಭ್ರೂವಿಲಸಿತದತ್ತವಾಚನಾದೇಶಮಿದಂ ।
ಭಾವಿಸಿಮೆಂದತಿಮಧುರೋ
ದ್ಭಾವಿತಗಂಭೀರನಾದದಿಂ ಬಾಜಿಸಿದಂ ೪೬

ವ॥ ಸ್ವಸ್ತಿ ಸಮಸ್ತವಿಷ್ಟಪಾಧೀಶ್ವರಪುರುಪರಮೇಶ್ವರಚರಣಸರಸಿಜರಜೋರಂಜಿತಮಣಿಕಿರೀಟಮಕರಿಕಾಚಕ್ರಂ ಚಕ್ರರತ್ನಪ್ರಭಾಸಾದಿತನಿಖಿಲದಿಕ್ಚಕ್ರಂ ಭರತೇಶ್ವರಚಕ್ರವರ್ತಿ ನಿಜಪ್ರಿಯಾನುಜಬಾಹುಬಲಿಕುಮಾರನಂ ಪರಮಾಶೀರ್ವಾದದಿಂ ಪರಸಿ ಕನಕಪತ್ರಾಂಕಿತಕಾರ್ಮುಕಲತಾ

ಲಂಬನಂಗಳುಂ ವಿಜಯೋತ್ಸವತೋರಣಸ್ತಂಭಂಗಳುಂ ವೀರಶ್ರೀಭುಜಂಗೀ ಸಮಾಶ್ರಯಪ್ರಾಸಾದಕಳಸಂಗಳುಮಪ್ಪ ದೋರ್ದಂಡಂಗಳಿಂದಮತಿನಿಬಿಡಾಲಿಂಗನಂಗೆಯ್ದು ಕಾರ್ಯಮಂ ಬೆಸಸಿರ್ದಂ,

ಮತ್ತಪ್ಪುದೆನಲೊಡಂ ಪಾಣಿ
ಮತ್ತತ್ತಣ ಕಾರ್ಯಮನಱಿಯಲಾಪುದೆ ಪೇಳ್ ಭೂ |
ಪೋತ್ತಮನಿರ್ದನೆ ಸುಖದಿನು
ದಾತ್ತಯಶಂ ನೆಗೞೆ ನೆಗೞ್ದಯೋಧ್ಯಾಪುರದೊಳ್ || ೪೭

ಎಂತಾನುಂ ನೆನೆದಂ ಬಹು
ಚಿಂತಂ ಚಕ್ರೇಶನೆಮ್ಮ ದಿಗ್ವಿಜಯಮುಮನಾ |
ದಂತೆಡಱದೆಯ್ದೆ ನಡೆದುದೆ
ನೆಂತುಮೆ ದಕ್ಷಿಣಭುಜಕ್ಕೆ ಭೂವಲ್ಲಭನಾ || ೪೮

ಅರಸುಗಳೆಲ್ಲಂ ಬಾಯ್ಕೇ
ಳ್ದರೆಂದುಮಾಶಾಂತರಂಗಳೞ್ಕಿದುವೆಂಬಂ |
ಧರಣೀತಳಂ ಕೀರ್ತಿಸೆ ಕೇ
ಳ್ದ ರಾಗಿಸುತ್ತಿರ್ಪವಿನ್ನುಮೇಂ ತೊದಳುಂಟೇ | ೪೯

ಇಲ್ಲೆಯೊ ಪೇಳೆಂದು ಮಹೀ
ವಲ್ಲಭದೂತಂಗೆ ನುಡಿದು ದಶನಾಂಶುಗಳಿಂ |
ಮೆಲ್ಲನೆ ದಶನಚ್ಛದಮೃದು
ಪಲ್ಲವದಿಂ ಮಱಸಿ ಮಾಣೆ ದೂತಂ ನುಡಿದಂ || ೫೦

ಭವದಗ್ರಜದಿಗ್ವಿಜಯೋ
ತ್ಸವಮಧಿಕಮಹೋತ್ಸವಂ ಮಲಂ ನಿನಗಾದಂ |
ಶ್ರವಣಸುಖಮೊಂದೆ ದಿಟಮ್ಮ
ತ್ರಿವರ್ಣನಂಗೆಯ್ವಿನಂತದೇ ನೆನ್ನೆಳವೇ || ೫೧

ವ|| ಅದೆಂತೆಂದೊಡೆ ಮುನ್ನಂ ತ್ರೈಲೋಕ್ಯಸಾಮ್ರಾಜ್ಯಹೇತುಭೂತಮೆನಿಸಿದ ಪುರುಪರಮೇಶ್ವರನ ಕೇವಲಜ್ಞಾನಪೂಜೆಯುಮಂ ಪ್ರಾಜ್ಯಸಾಮ್ರಾಜ್ಯಪ್ರಕಾಶನಕರಮಪ್ಪ ಚಕ್ರಪೂಜೆಯುಮಂ ನಿರ್ವರ್ತಿಸಿ,

ನೆಗೞ್ದಿಕ್ಷ್ವಾಕುಕುಲಾಂಬರೇಂದು ಭರತಂ ನಿನ್ನಗ್ರಜಂ ಸಾಹಸಂ
ಮುಗಿಲಂ ಮುಟ್ಟೆ ನಿಜಪ್ರತಾಪದಳವಂ ತೋಱಲ್ಕೆ ಮಾಱಾಂಪ ಜ।
ಟ್ಟಗರಾರಪ್ಪೊಡಮಿಲ್ಲದಂತು ಸಕಳಾಶಾಚಕ್ರಮಂ ಚಕ್ರಮೊಂ
ದೆ ಗೆಲಲ್ಸಾಲ್ದಿರೆ ದಿಗ್ಜಯಕ್ಕೆ ಪೊಱಮಟ್ಟಾಮೆಂಪು ಸಾಮಾನ್ಯಮೇ ॥ ೫೦

ವ॥ ಅಂತು ಪೊಱಮಟ್ಟನೇಕಕರಟಿಕಟಕಷ್ಷೀಕರಣನಿಶ್ಶೇಷಿತಾರಾತಿವನದುರ್ಗನುಂ, ಉದಗ್ರಮದಾಂಧಸಿಂಧುರಪ್ರತಿಗಜಶಂಕಾಸ್ಫಾಲಿತಗಂಡಶೈಲವಿಘಟಿತಗಿರಿದುರ್ಗನುಂ, ಅಂತಸ್ಸ್ಫುರದತಿಸ್ಫಾರಸಮರೋಷ್ಮಸಂತಪ್ತ ಜಲಪ್ರತ್ಯೇಕ ಚುಳುಕಪಾನ ಮಾತ್ರಜಾನುದಘ್ನ ಜಲದುರ್ಗನುಮಾಗಿ ನಡೆದು,

ಬಳಸಂಪನ್ನ ಕ್ಷಿತೀಶಪ್ರಕರಕರಿಕುಳಗ್ರಾಮಸಂಘಟ್ಟಭಂಗಂ
ಗಳನೆಂದುಂ ಕಾಣದೆತ್ತಂ ಬಳೆಯೆ ಕಳಿದ ವೇಳಾವನಸ್ಥೂಳಶಾಳಂ।
ಗಳೊಳಾದಿಬ್ರಹ್ಮಪುತ್ರಂ ನಿಜವಿಜಯಗಜೇಂದ್ರಂಗಳಂ ಕಟ್ಟೆ ನೀಳಾ
ಚಳಸಂಘಾತಂಗಳಂ ಸುತ್ತಿಱಿದವೊಲೆಸೆದತ್ತಾಸಮುದ್ರೋಪಕಂಠಂ ॥ ೫೩

ವ॥ ಅಂತು ಪೂರ್ವದಕ್ಷಿಣಾಪರಪಾರಾವಾರತೀರವರ್ತಿಗಳಪ್ಪ ಭೂಪಾಳರನೆಱಗಿಸಿ ಗಂಗಾವೈಜಯಂತೀಸಿಂಧುದ್ವಾರಂಗಳಂ ನಿಜವಿಜಯವರೂಥಮೊಂದಱೊಳೆ ನುಗುಳ್ದು ಲವಣಜಲಧಿಯಂ ಪೊಕ್ಕು,

ಕರಿಮಕರಂ ಪರಿವಂತಿರೆ
ಪರಿವ ರಥಂ ಜಳಧಿಯೊಳಗೆ ಮಾಣ್ದೊಡೆ ಶರದಿಂ।
ದುರಿಪಿದನಲ್ಲವೆ ತದ್ವ್ಯಂ
ತರಾಮರಾವಾಸಮನಿತುಮಂ ಭರತೇಶಂ ॥ ೫೪

ಶರಪಾತಮೆ ದೂತನವೋಲ್
ತರೆ ಮಾಗಧವರತನುಪ್ರಭಾಸಾಮರರಂ।
ಕರುಣಿಸಿ ಬಿಟ್ಟಂ ಕುಲಧನ
ಪರಿಕರಮಂ ಕಯ್ಗೆ ಮಾಡಿ ಮನುಕುಲತಿಲಕಂ ॥ ೫೫

ವಿಜಯಾರ್ಧಾದ್ರೀಂದ್ರದೊಳಂ
ವಿಜಯಾರ್ಧಕುಮಾರನೆಂಬ ನೆಗೞ್ದಮರನುಮಂ।
ವಿಜಯಶರಮೊಂದೆ ತಂದುದು
ವಿಜಯೋದ್ಘೋಷಣೆಗಳಮರರಿಂ ನೆಗೞ್ವೆನೆಗಂ ॥ ೫೬

ಕೃತಮಾಳಾಮರನಗಿದಾ
ನತನಾಗೆ ತಮಿಸ್ರಗುಹೆಯ ವಜ್ರದ ಪಡಿ ತ ।
ತ್ಕ್ಷಿತಿಧರದೆರ್ದೆಯಂತೆ ಚಮೂ
ಪತಿಯಿಂ ತೆಱೆದತ್ತು ಚಕ್ರಿಗರಿಯಪ್ಪವೊಳವೇ ॥ ೫೭

ವ॥ ಅಂತು ತಮಿಸ್ರಗುಹೆಯೊಳಗನೆ ಕಾಕಿಣೀರತ್ನದೊಳ್ ಬರೆದ ಚಂದ್ರಾದಿತ್ಯರ ಬೆಳಗುಗಳೊಳ್ ನಿಜವಿಜಯಕಟಕಂ ನಡೆಯೆ ವಿಜಯಾರ್ಧಾಚಳಮಂ ಪೆಱಗಿಕ್ಕಿ ಶಬರಖಂಡಂಗಳಂ ಸೇನಾನಾಯಕನೆ ಬಾಯ್ಕೇಳಿಸಿ ಬರೆ,

ಮಸಗಿ ಬಳಾಕಾವರ್ತರ
ಬೆಸದಿಂದಂ ಬಂದ ಮೇಘಮುಖರಂ ತೂಳ್ದೀ ।
ಡಿಸೆ ಜಯನೊರ್ವನೆ ಚಕ್ರಿಗೆ
ಬೆಸಕೆಯ್ದತ್ತುತ್ತರಾರ್ಧಮಧ್ಯಮಖಂಡಂ ॥ ೫೮

ವ॥ ಮತ್ತಂ ಸಿಂಧುಪ್ರಪಾತ ಸಿಂಧು ದೇವಿಯಿಂದಮಭಿಷಿಕ್ತನಾಗಿ ಪೋಗಿ,

ಹಿಮಗಿರಿಯ ಮಧ್ಯಕೂಟದ
ಹಿಮವದ್ವಿಜಯಮನೊತ್ತಿ ಕಪ್ಪಂಗೊಂಡಾ ।
ಹಿಮಶೈಲದೊಳಮಲಂಪಿಂ
ಹಿಮವತ್ತೇಜಮನುದಾತ್ತತೇಜಂ ಮೆಱೆದಂ ॥ ೫೯

ವ॥ ಅಂತು ಬಂದು ವೃಷಭಾಚಳನಿಕಟಂಗಳೊಳಂ ಅಪ್ರತಿಹತದಿಗ್ವಿಜಯಪ್ರಶಸ್ತಿಯಂ ಟಂಕೋತ್ಕೀರ್ಣಂಮಾಡಿ ಗಂಗಾದೇವಿಯೋಲಗಿಸಿದನರ್ಘ್ಯರತ್ನಂಗಳಂ ಕೈಗೆಮಾಡಿ ನಮಿವಿನಮಿಗಳ್ಮೊದಲಾಗೆ ದಕ್ಷಿಣೋತ್ತರಶ್ರೇಢಿಗಳ ವಿದ್ಯಾಧರರಾಜರನಾಜ್ಞಾವಿಧೇಯರ್ಮಾಡಿ ಕಾಂಡಕಪ್ರಪಾತಗುಹೆಯ ವಜ್ರಕವಾಟಂಗಳಂ ತೆಱೆದು ಪೊಱಮಟ್ಟು ಸಿದ್ಧದಿಗ್ವಿಜಯನಾದನಿಂತು,

ಆರಜತಾದ್ರಿಮುದ್ರಿತಮಹೀತಳಮಂ ಬೆಸಕೆಯ್ಸಿ ತದ್ಗುಹಾ
ದ್ವಾರಮನುರ್ಚಿಪೋಗಿ ವಿಜಿತೋತ್ತರಭೂತಳನಾದನಲ್ತೆ ಘ ।
ಕ್ಕಾರವರವ್ಯದಿಗ್ವಳಯಕುಂಜರಕುಂಭವಿಲಗ್ನಸಾಂದ್ರಸಿಂ
ದೂರರಜಃಪಟಾವೃತದಿಶಾವಳಯಂ ಭರತಕ್ಷಿತೀಶ್ವರಂ ॥ ೬೦

ನೃಸುರಾಸುರಖೇಚರರಂ
ಬೆಸಕೆಯ್ಸಿದನೆಡಱುವಹಿತರಂ ಚಕ್ರಮೆ ಸಾ।
ಧಿಸಿದಪ್ಪುದು ನವನಿಧಿಗಳ್
ಪೊಸಯಿಸಿದಪ್ಪುವು ವಿಭೂತಿಯಂ ಪುರುಸುತನಾ ೬೧

ಎನ್ನಣುಗದಮ್ಮನಿಲ್ಲದೆ
ಬಿನ್ನನೆ ಸಾಮ್ರಾಜ್ಯಮಿನಿತುಮಾದೊಡಿಕಮುಮ।
ತ್ಯುನ್ನತಿಯಲ್ತೆನಗಾತಂ
ಮುನ್ನೆ ಬಗೆದೊಡೆಂದು ಬೆಸಸಿಯಟ್ಟಿದನೆನ್ನಂ ॥ ೬೨

ವಿನಯಂ ಸಹಜಂ ಕೃತ್ರಿಮ
ಮೆನಿಸಿದುವಪ್ಪು ಬೇಱೆವೇಱೆ ವಿದ್ವಜ್ಜನಮಂ।
ಮನದೆಗೊಳಸುವುವಿವೆರಡುಂ
ನಿನಗೊಳವಾರಾರ ಮನಮುಮಂ ರಂಜಿಸವೇ ॥ ೬೩

ವ॥ ಎಂಬುದುಂ ಬಾಹುಬಲಿಕುಮಾರಂ ದೂತವಚನಾಕರ್ಣನೋದೀರ್ಣಕ್ರೋಧೋದ್ಗಚ್ಛದಚ್ಛೇದಜಳಧಾರಾಸಾರಭೀಕರಾಲೋಹಿತಕಪೋಳತಳಮುಮುದ್ದೀಪನಪಿಂಡಪ್ರದೀಪ್ತಕಪೋಲೋಚ್ಛಳದತುಚ್ಛಮದಜಳಚ್ಛಟಾಟೋಪಭೀಷಣಾರುಣಗಂಡಸ್ಥಳಮುಮಪ್ಪ ಗಂಧಸಿಂಧುರೇಂದ್ರಮನೆನು ಕರಿಸಿ ಕೋಪಗರ್ಭಸ್ಮಿತಂ ಬೆರಸು,

ಮುನ್ನಂ ಸಾಮಮನೆಮ್ಮ ಮ
ನನ್ನೋಡಲ್ ನುಡಿದು ಭೇದಮಂ ದಂಡಮುಮಂ।
ನಿನ್ನ ಬಿವನಿತಂ ನುಡಿದೆಯಿ
ದೇನ್ನುಡಿಗಳೊ ಸಮಬಿಕೊಂಡ ನುಡಿಗಳ್ ನಿನ್ನಾ ॥ ೬೪

ಇನಿತೊಂದು ನುಡಿದ ಬಲ್ಮೆಯೆ
ನಿನಗಿಲ್ಲದೊಡೇಕೆ ನಿನ್ನನಾಳ್ದಂ ನಿನ್ನಂ।
ಮನವೊಲ್ದು ನಚ್ಚಿಯಟ್ಟಿದ
ನನಾಕುಳಂ ದೂತನಿಂತು ನುಡಿಯಲ್ವೇೞ್ಕುಂ ॥ ೬೫

ನೀ ನ್ನಿನ್ನ ನೃಪನ ದಿಗ್ವಿಜ
ಯೋನ್ನತಿಯಂ ಪೊಗೞ್ದು ಮೂರ್ಛೆನ್ದೋಪ್ಪೆ ಪೊಗೞ್ದಂ ।
ನೀನ್ನಿನ್ನ ಮನದೊಳಿಂತಿದು
ಬನ್ನಮನೆತ್ತುವವೊಲಾಯ್ತು ಸಿನ್ನವನಿಪನಾ ॥ ೬೬

ಮುಂದಿಟ್ಟ ಚಕ್ರಮಂ ತಿರಿ
ತಂದುದುಮಂ ಪೊಱದಿರ್ದ ಬಯ್ತಂಗೊಳ್ವಂ।
ದಂದದೆ ಕೊಂಡುದುಮನದೇ
ನೆಂದುನ್ನತಿಮಾಡಿ ಪೊಗೞ್ವೆಯೊಳಗಱಿಯದುದೇ ॥ ೬೭

ಪಸಿದುಣ್ಣಪಟ್ಟು ಬಿರ್ದಿ
ರ್ದು ಸಮುದ್ರದ ತಡಿಯೊಳುದಕಮಂತ್ರದ ಬಲದಿಂ ।
ನುಸುಳ್ದೊಡೆ ಜಳನಿಧಿಯಂ ಕರು
ಣಿಸಿ ಕೊಟ್ಟರ್ ಧನಮನಂಜಿ ಕೊಟ್ಟರೆ ದಿವಿಜರ್ ॥ ೬೮

ಧರೆಯೊಳ್ ಕುಲಾಲಚಕ್ರಂ
ತಿರಿವಂತಿರೆ ತಿರಿಯೆ ಚಕ್ರಮದಱಯೆ ಬಱಿಯಿಂ ।
ತಿರಿತಿರಿದು ಮಾಡಿದಂ ಕುಲ
ಧರಕುಲದೊಳ್ ಪಿಱಿದು ಮಹಿಮೆಯಂ ನಿಮ್ಮರಸಂ ॥ ೬೯

ಉತ್ತರಭರತದೊಳಾದಾ
ಪತ್ತಂ ನೀನಱಿಯೆಯುಕ್ಕುಮನಿತುಂ ಬಲಮಂ ।
ಮುತ್ತಿ ಬಳಾಕಾವರ್ತರ್
ಸುತ್ತುಲುಮೇಸಾಡಿ ಪಿರಿದು ತಿಣಿಕಂ ತಂದರ್ ॥ ೭೦

ಮೇಘಮುಖರೆನಿಸಿ ಸಂದರೆ
ಘೌಘದಿನಂದೋಘಮೇಘಮಾದೊಡೆ ಮಱೆ ಶೌ ।
ರ್ಯಾಘೌತಂ ನೆಗಱೆ ಬಳ
ವ್ಯಾಘೌತಂ ನಿನ್ನ ಪತಿಗದಾದುದು ಪುಸಿಯೇ ॥ ೭೧

ಬೇಡವಡೆ ಮುಸುಱಿ ಕೊಂಡೇ
ಸಾಡೆ ಸುರುಳ್ದಗಿದು ಕೊಡೆಯ ಚರ್ಮದ ಮಱೆಯೊಳ್ ।

ಗೂಡುಗೊಳುತಿರ್ದ ಶೌರ್ಯ
ಕ್ರೀಡೆಯ ದಿಗ್ವಿಜಯಮೆಸೆದುದೆಮ್ಮಗ್ರಜನಾ ॥ ೩೨

ಬರೆಯಿಸಿದಂ ಪೂರ್ವಮಹೀ
ಶ್ವರನಾಮಮನೆಯ್ದೆ ಕಳೆದು ವೃಷಭಾಚಲದೊಳ್ ।
ಭರತಂ ನಿಜನಾಮಮನೆನೆ
ಪರಿಹಸಿತಂ ಬುಧಜನಕ್ಕದಲ್ಲದೆ ಪೆಱತೇಂ ॥ ೩೩

ಧನಮೆಂಬುದು ವಿಭುಗೆ ಯಶೋ
ಧನಮದನಿಂತಳಿಪಿ ಕಳಿಪಿ ಕಿಡೆ ಮಾಡಿರ್ದಾ ।
ತನ ಪಡೆದ ಧನಮದೇತಱ
ಧನಮದಱಿಂ ನಿಧನಮೆಯ್ದಿದರ್ ಪಲರರಸರ್ ॥ ೩೪

ಪಿರಿಯಣ್ಣಂಗೆಱಗುವುದೇಂ
ಪರಿಭವಮೇ ಕೀಱು ನೆತ್ತಿಯೊಳ್ ಬಾಳಂ ನಿ ।
ರ್ನೆರಮೂಱಿ ಚಲದಿನೆಱಗಿಸ
ಲಿರೆ ಭರತಂಗೆಱಗುವೆಱಕಮಂಜಮೆಯಲ್ತೇ ॥ ೩೫

ವಿನಯಮುಮೆಱಕಮುಮಪ್ಪುದು
ಸನಾಭಿಗಳ್ ಸಂಗತಂಗಳಪ್ಪೊಡೆ ಪೆಸಗೊಂ ।
ಡನಿತಱೊಳೆನ್ನಂ ಸ್ವೈರಿಸ
ನೆನೆ ಭರತಂಗೆಱಗಿ ಲೋಕದಿಂ ನಗಿಸುವೆನೇ ॥ ೩೬

ಭರತಂ ಷಟ್ಖಂಡಭೂವಲ್ಲಭನೆನೆ ಸಿರಿಯಂ ಗೆಂಟಱೊಳ್ ಕೇಳ್ದು ರಾಗಂ
ಬೆರಸಿರ್ಪೀನನ್ನೆ ಸಾಲ್ಗುಂ ಕರೆದೊಡೆ ಬೆಸನೇನೆಂಬ ಜೀಯೆಂಬ ದೇವೆಂ।
ಬರಸೆಂಬಾಳೆಂಬ ದೈನ್ಯಕ್ಕೆಲವೊ ತನುವನಾನೊಡ್ಡುವಂತಾದಿದೇವಂ
ಪುರುದೇವಂ ದೇವದೇವಂ ಕುಡೆ ಪಡೆದ ನೆಲಕ್ಕಾರೊಳಂ ಪಂಥಮುಂಟೇ ॥

ಧರೆಯಂ ಕುಡುವಂದೆನಗಂ
ಗುರು ತನಗಂ ರಾಜನಾಮಮಂ ಕೊಟ್ಟೊಡೆ ನೋ ।
ಡಿರೆ ತನಗೀಗಳ್ ರಾಜಾ
ಧಿರಾಜನೆಂದಿಟ್ಟುಕೊಂಡನಡಕಿಲ್ಪೆಸರಂ ॥ ೩೮

ಚಕ್ರಂ ಪುಟ್ಟಿಗೊಡೀಗಳ್
ಚಕ್ರೇಶ್ವರನೆಂಬ ಪೆಸರುಮಾಯ್ತು ಕ್ಕವು ತಾಂ ।
ಚಕ್ರೇಶನಾಪೊಡಂ ತ
ನ್ನಾ ಕ್ರಮಣಮನೆನ್ನೊಳೀಕೆ ಕೆಮ್ಮನೆ ತೋರ್ಪಂ ॥ ೭೯

ದೊರೆಯಲ್ಲದಂಗೆ ನುಡಿವುದು
ಪುರುಳಿಲ್ಲದ ಮಾತನೆಮ್ಮೊಳಂ ನುಡಿವುದೆ ಪೇಟ್ ।
ಎರಲೆಗೆ ಪಾಡುವ ಗೋರಿಯು
ನರಣ್ಯದೊಳ್ ಮೃಗವಿರೋಧಿಗಂ ಪಾಡುವುದೇ ॥ ೮೦

ಪುರುತನಯರ್ ಭುಜಬಲಿಯುಂ
ಭರತನುಮೆನೆ ದೊರೆಗೆವಂದೊಡಾರಳವುಮನೀ ।
ಧರೆಯುಱಿಯಲೊಡಂ ತೂಗಲ್
ಧರೆಗೆ ತುಲಾದಂಡಮಲ್ತೆ ಮದ್ಭುಜದಂಡಂ ॥ ೮೧

ವ॥ ಅದಲ್ಲದೆಯುಮುದಾರವೀರಚರಿತನಿರತಕದನಕರ್ಕಶಕ್ಷತ್ರಿಯಂಗೆ ವಿಪಕ್ಷಕ್ಷತ್ರಿಯಪರಾಕ್ರಮಾಕರ್ಣನೋದೀರ್ಣಕ್ರೋಧದೊಳ್ ಅಳೀಕಭ್ರುಕುಟಿಯುಂ ಅನರ್ಘಲಲಾಟತ್ರಿಪತಾಕೆಯುಂ ಅಪಾರ್ಥವಿಲೋಹಿತವಿಲೋಚನರುಚಿಯುಂ ನಿರರ್ಥಕನಿಷ್ಠುರೋಷ್ಠಪುಟಸಂದಂಶಮುಂ ನಿಷ್ಪ್ರಯೋಜನಸ್ವೇದಜಳೋದ್ಗಮಮುಂ ನಿಷ್ಪಂದನಾಸಾಪ್ಸುರಿತಮುಂ ನಿಷ್ಕಾರಣಕಾಯಕಂಪನಮುಂ ನಿರಾಲಂಬನವಾಗಾಡಂಬರಮುಂ ತಕ್ಕುದಲ್ತು,

ನೆಗೞ್ದೀಷಟ್ಖಂಡಭೂಮಂಡಲಮನಸಿತುಮಂ ಗೆಲ್ದುಖಂಡಪ್ರತಾಪಂ
ನೆಗೞ್ದಂತಾಱುಂ ಬಲಂಗಳ್ಪರಸೊಡವಿದ ಸಂಗ್ರಾಮಸಂರಂಭದಿಂದಂ ।
ಬಗೆಯಂ ಪ್ರಾಣಪ್ರಿಯಸ್ತ್ರೀಜನತನಯಧನವ್ರಾತದೊಳ್ ಮಾಡದಾತಾ
ಜಿಗೆ ಬಂದೊಡ್ಡಲ್ಕೆ ಪೇೞ್ಸಂಗರನಿಕಷದೊಳೆಮ್ಮಂದಮಂ ನೀನೆ ಕಾಣ್ಬೈ ॥ ೮೨

ವ॥ ಎಂದು ಮನುನರೇಂದ್ರವೃಂದಾರಕಶಿಖಂಡಮಂಡನಮಣಿಯೆನಿಸಿದ ಬಾಹುಬಲಿಕುಮಾರಂ ಭರತೇಶ್ವರಚಕ್ರವರ್ತಿಯ ದೂತನಂ ಪೋಗಲ್ವೇೞ್ದಾಗಳನೇಕರಾಜನ್ಯಕಮುಕುಟಸಂಘಟ್ಟಿತೋಚ್ಛಳನ್ಮಣಿಮರೀಚಿಗಳ್ ವಿಳಯಾನಳವಿಸ್ಫುಲಿಂಗಂಗಳಂತೆ ದೆಸೆದೆಸೆಗೆ ಕೆದಱೆ,

ಕಿಸುಸಂಜೆವೆರಸು ಕಟ್ತಲೆ
ಪಸರಿಸಿದಪುದೆನಿಸಿ ಕಣ್ಣ ಕೆಂಪುಂ ಭ್ರೂಕುಟಿ ।
ಪ್ರಸರಾಂಧಕಾರಮುಂ ದೆಸೆ
ದೆಸೆಗೆಸೆದುವು ಬಾಹುಬಲಿನೃಪಾಸ್ಥಾಯಿಕೆಯೊಳ್ ೮೩

ವ॥ ಅನ್ನೆಗಂ ಚಕ್ರವರ್ತಿಯ ದೂತಂ ಸಾಕೇತಪುರಮನೆಯ್ದಿವಂದಾಸ್ಥಾನಮಂಟಪದೊಳ್ ಇರ್ದ ಚಕ್ರವರ್ತಿಯಂ ಕಂಡು ಪೊಡೆವಟ್ಟು,

ನಿನಗೀಷಟ್ಖಂಡಭೂಮಂಡಲಮೆಱಗಿದುದೇಂ ಸಾಲದೇ ಬೇಡದುದ್ವೃ
ತ್ತನೊಳನ್ನೇನೆಂದು ದೇವರ್ಕಡೆಗಣಿಸಿರೆ ಸೌಂದರ್ಯಮಂ ಕಾದ ಪೆಂಪೀ ।
ವನಧಿದ್ವೀಪಾಂತರಾಳಕ್ಷಿತಿಯೊಳೆಸಗುಮಾಕ್ಷೇಪಮಂ ಮಾಣ ನೀಂ ಕ್ರೋ
ಧನನಾಗಲ್ ನಿನ್ನ ತಮ್ಮಂ ನಿನಗೆಱಗನಿದಂ ನಂಬು ರಾಜಾಧಿರಾಜಾ ॥ ೮೪

ವ॥ ಅದಲ್ಲದೆಯುಂ ವಿಜಗೀಷುಬಳಾನಕಾನೀಕನಿನದಮನೆ ನಿಜಭುಜವಿಕ್ರಮೋತ್ಸವಕೋಳಾಹಳಮೆಂದುಂ ವಿದ್ವಿಷ್ಟಚಮೂಚಕ್ರಪಾಂಶುಪಟಳಮನೆ ನಿಜವಿಜಯಲಕ್ಷ್ಮೀಪರಿಣಯನೋತ್ಸವಪ್ರಾರಂಭಪಿಷ್ಟಾತಕಚೂರ್ಣಮೆಂದುಂ ವಿರೋಧಿಸಿಂಧುರಧ್ವಜಪಟಚ್ಛಾಯಾಪ್ರತಾನಮನೆ ನಿಜವೀರಪಟ್ಟಬಂಧೋತ್ಸವಸಮುಚ್ಛ್ರಿತಚ್ಛತ್ರಚ್ಛಾಯಾಮಂಡಳಮೆಂದುಂ ವಿಪಕ್ಷವಿಶಿಖಮೋಕ್ಷಹೂಂಕಾರಮನೆ ನಿಜವಿಜಯಲಕ್ಷ್ಮೀಯುದಗ್ರವೀರಗ್ರಹಸ್ತೋಭನಾಕ್ಷರಮೆಂದುಂ ಬಗೆವ ಬಾಹುಬಲಿಕುಮಾರಂ ವಿಜಗೀಷುವಿಜಯಯಾತ್ರಾಪಟಹರವಾಟೋಪನಿರ್ಭರಚರಿತಶ್ರವಣವಿವರನಾಗಿ ವಿಕ್ರಾಂತಕ್ಷತ್ರಚರಿತ್ರಂಗಳಂ ಕೇಳದವರ ಗಣನೆಯೊಳಂ ವಿರೋಧಿಧ್ವಜಿನೀಧೂಳೀಪಟಲಪಿಹಿತದೃಷ್ಟಿಗಳಾಗಿ ವೀರನರೇಂದ್ರಮಾರ್ಗಮಂ ಕಾಣದ ವಿದ್ವಿಷ್ಟರ ಸಭಾವನಿಯೊಳಂ ಅಹಿತಮತಂಗಜವಿಜಯಕದಳೀಕಾನನಬಹುಳಚ್ಛಾಯಾಚ್ಛನ್ನರಾಗಿ ಕುಳಕ್ರಮಾಯಾತಪ್ರತಾಪೋಷ್ಮಮಂ ಪತ್ತುವಿಡುವರಾತಿಗಳ ಸಂಖ್ಯೆಯೊಳಂ ವಿಪಕ್ಷಶರಾಸಾರಮೋಕ್ಷಹೂಂಕಾರಸ್ತಂಭನಾಕ್ಷರಸ್ತಂಭಿತಹೃದಯರಾಗಿ ರಾಜಪ್ರಸೂತವಿಜಯಯಶಶ್ಶರೀರಮಂ ಮೆಱೆವ ರಿಪುಗಳ ರೇಖೆಯೊಳಂ ಬಗೆಯದೆ ನಿಮ್ಮ ಬಗೆವ ಕಾರ್ಯಮಂ ಬಗೆಯಿಮೆಂದು ಬಿನ್ನಪಂಗೆಯ್ದಾಗಳ್,

ತುದಿಯೆಯ್ದಿತ್ತೆಮ್ಮ ವಿಶ್ವಕ್ಷಿತಿತಳಜಯಮಿಂತೆಮ್ಮ ದಾಯಾದನಂ ಕೋ
ಪದಿನೆನ್ನೊಳ್ ಕಾದಲೆಂದುಬ್ಬರಿಸಿದ ಸಮರಾಟೋಪದಿಂ ನಿಂದೊಡಂ ಮಾ ।
ಣ್ಬುದು ಸೋಲಲ್ತೆಮ್ಮ ಸಾಪತ್ನ್ಯನ ಭುಜಬಲಮಂ ನೋಳ್ಪೆವೆಂದಾಗಳಾಸ್ಥಾ
ನದಿನೆರ್ದಂ ಚಕ್ರಿರಾಜನ್ಯಕಮಕುಟಮಣಿಪ್ರೋಜ್ಜ್ವಳದ್ವ್ಯೋಮಚಕ್ರಂ॥

ವ॥ ಆಗಳ್ ದೂತಾಳಾಪವಿಳಯಸಮೀರಪ್ರೇರಿತಪ್ರಳಯಜಳನಿಧಿಪ್ರ
ಧ್ವಾನಾನುಕಾರಿಯಾಗಿ,

ಭುವನೇಶಂ ಕ್ಷತ್ರಪುತ್ರಾಗ್ರಣಿಯ ಭರತನಕ್ಷೋಹಿಣೀವೀರಕಂಠೀ
ರವಸಂದೋಹಕ್ಕೆ ರೋಮಾಂಚಮನೆ ಕವಚಮಂ ಮಾಡುತುಂ ವೀರಪತ್ನೀ
ನಿವಹಕ್ಕಾನಂದಬಾಷ್ಪಾವಳಿಯನೆ ಕುಚದೊಳ್ ಹಾರಮಂ ಮಾಡುತುಂ ಭೂ
ಭುವನಾಂತರ್ಭಾಗಮಂ ಪರ್ಬಿದುದು ಸಮರಸನ್ನಾಹಭೇರೀನಿನಾದಂ ॥೮೬

ವ॥ ಆಸಮರಸನ್ನಾಹಭೇರೀ ನಿನಾದಮಂಭೋಭಾರಗಂಭೀರಾಂಭೋಧ
ರಸ್ತನಿತಬಹುಸ್ನಿಗ್ಧಂಗಳಪ್ಪ ಮದಸ್ತಂಬೇರಮಬೃಂಹಿತಂಗಳಿಂದಂ ಯುಗ
ಪದಾಸ್ಫಾಲಿತಾನೇಕದುಂದುಭಿಧ್ವನಿಮಧುರಗೀತಂಗಳಪ್ಪ ಹಯಹೇಷಿತಂಗ
ಳಿಂದಂ ಸಂವಣಿಸಿ ಪೂರ್ಣಮಾಸ್ಯಕಾರ್ಣವಘೋಷಮಂ ಗೆಲ್ದು ಪೆರ್ಚುವಂತೆ
ಪೆರ್ಚೆ ವಿಜಯಪರ್ವತಗಜೇಂದ್ರದ ಬೆಂಗೆ ಪಂದು,

ಗಿರಿರಾಜೋದಗ್ರಸಿಂದೂರಿತಕರಟಿಘಟಾಟೋಪಮಂ ಕುಂಕುಮಾಂಭ
ಶ್ಛುರಿತಾಂಗೋತ್ತುಂಗವಲ್ಗತ್ತುರಗಬಲಮದೋದ್ದಾಮಮಂ ಚಿತ್ರನೇತ್ರಾಂ
ಬರನಾನಾಹೇತಿಹಸ್ತೋದ್ಭಟಭಟಪೃತನಾಜಾಳಮಂ ಚಿತ್ತದೊಳ್ ವೀ
ರರಸಂ ಕೈಗಣ್ಮಿ ಪೊಣ್ಮುತ್ತಿರೆ ನಿಜಬಲಮಂ ನೋಡಿದಂ ಸಾರ್ವಭೌಮಂ ॥

ವ॥ ಅಂತು ನೋಡಿ ಪೌದನಪುರಾಭಿಮುಖನಾಗಿ ನಡೆವಲ್ಲಿ,

ಪದಧೂಳೀಕ್ಷೋಭದಿಂ ದಿಗ್ಯುವತಿವದನಮಂ ಶ್ಯಾಮಳಂಮಾಡಿ ಮಾಣ್ದೆ
ರ್ದುದೆ ಕೋಪೋದ್ಧಿನ್ನಗಂಡಸ್ಥಳಕರಟಿಘಟಾವ್ಯೂಹನೀಲಾಂಬುದಾಟೋ ।
ಪದಿನತ್ಯುಗ್ರಾಸ್ತ್ರಶಸ್ತ್ರಪ್ರಕರಕಿರಣಸಂಘಾತತೀವ್ರಾತಪೋದ್ಯೋ
ತದಿನರ್ಧಶ್ಯಾಮಳಂ ಮಾಡಿದುದು ದಿನಮುಮಂ ಕೂಡೆ ರಾಜೇಂದ್ರಸೈನ್ಯಂ ॥

ವ॥ ಅಂತು ಬಂದು,

ರಜಮುಂ ದಿಗ್ಧೂಮಮುಂ ಸಂದಣಿಸೆ ಪರುಷವಾತಾಹತಿಪ್ರೋಚ್ಚಳತ್ಸಾ
ಮಜಸೇನಾಕುಂಭಸಿಂದೂರಮುಮೊದವಿದ ದಿಗ್ದಾಹಮುಂ ಕೂಡೆ ಭೂರಿ ।
ಧ್ವಜಿನೀಸಂಕ್ಷೋಭಮಾಕಂಪಮುಮಶುಭಮಹೀಕಂಪಮುಂ ತನ್ನೊಳೊಂದಾ
ಗೆ ಜಗಕ್ಕೇನಿಲ್ಲಿ ಪೇೞಾದಪುದೆನೆ ದೆಸೆ ಬರ್ಪಂತೆ ಬಂದೊಡ್ಡಿ ನಿಂದಂ ॥ ೮೯

ವ॥ ಅನ್ನೆಗಮಿತ್ತ ಬಾಹುಬಲಿಕುಮಾರನ ವಿಜಯಸೈನ್ಯದೊಳ್,

ಮಸೆಯಿಪ ಶಸ್ತ್ರಕೋಟಿ ಸಮಕಟ್ಟುವ ಸನ್ನಣಮುಟ್ಟಿಯಿಂದಮು
ರ್ಚಿಸುವ ತುರಂಗದಂತಿರಥಸಂಕುಳಮೇಱುವ ದರ್ಭಶಯ್ಯೆ ಪೂ ।
ಜಿಸುವ ಜಿನೇಂದ್ರಬಿಂಬಮೆಸೆವುಗ್ರರಣಾನಕರೌದ್ರಘೋಷಮೆ
ವೆರ್ಸಕಮನುಂಟುಮಾಡಿದುದು ಪಂದೆಗಮಂದಿನ ವೀರಗೋಷ್ಠಿಯೊಳ್ ॥

ವ॥ ಆಗಳಾಬಾಹುಬಲಿಕುಮಾರನುಂ ಸಂಗ್ರಾಮರಂಗಾಗ್ರೇಸರನಾಗಲ್ಬಗೆದು ವಿಜಯಕನ್ಯಕಾಸ್ವಯಂವರೋತ್ಪಳಮಾಲಾನುಕಾರಿನಾರಾಚಂಗಳಿಂದಂ ವಿಜಯರಾಜಮಹಿಷೀಮಾಯೂರಾತಪತ್ರಶಂಕಾವಹಸಂಕುಳಂಗಳಿಂದಂ ವಿಜಯಲಕ್ಷ್ಮೀಕರವಳಯವಿಭ್ರಮಕರಚಕ್ರಂಗಳಿಂದಂ ತೀವಿದ ಸಿಬಿಗೆಯೊಳೆಸೆದು ವಿಜಯಾಂಗನಾಚರ್ಚನೋಚಿತಮೃಗಮದಮುಂ ನಿಜಭುಜವಿಜಯಲಕ್ಷ್ಮೀಪರಿರಂಭಣಪ್ರಕಟನದಕ್ಷದಕ್ಷಿಣವಿಷಾಣವಿನ್ಯಸ್ತಹಸ್ತಮುಂ ದಾನಪ್ರಮೋದವಾಚಾಳಷಟ್ಚರಣಚಾರಣಗಣೋಚ್ಚಾರಝಂಕಾರಜಯಾಶೀರ್ಘೋಷಮುಮಪ್ಪ ವಿಜಯಗಜದ ಬೆಂಗೆ ವಂದು,

ಇರದೆಂಟುಂ ದಿಗ್ಗಜಂಗಳ್ ನೆಱೆದಿದಿರಿದಿರೊಳ್ ತಾಗೆಯುಂ ಮಂದರಕ್ಷ್ಮಾ
ಧರದೊಳ್ ಕೈಯ್ಯೂಗ್ಡಿ ಗೋತ್ರಾದ್ರಿಗಳೆ ಗಜಘಟಾರೂಪದಿಂ ತಾಗೆಯುಂ ಮ ।
ತ್ಕರಿತಾಂಗಲ್ ತಾನೆ ಸೊಲ್ಗುಂ ಮನುಜಗಜಘಟಾಬಂಧಮೇ ಬಂಧಮೆಂಬೊಂ
ದು ರಣೋತ್ಸಾಹಂ ಮನಕ್ಕುಬ್ಬರಿಸಿರೆ ಸಮರೋತ್ಸಾಹಸಂಪನ್ನನಾದಂ ॥

ವ॥ ಅಂತು ಕದನಲಕ್ಷ್ಮೀಕನ್ಯಕಾಪ್ರದಾನಪ್ರಥಮಪ್ರಸರದೋಂಕಾರಶಂಖಾಕಾರವಿಜಯಪ್ರಸ್ಥಾನನಾಂದೀಸಮಯನಿನದಾನಂದಿತದಿಕ್ಪಾಳಚಕ್ರನುಂ

ನಿಜವಿಜಯಶ್ರೀಪರಿವಾರಪರಿಣಯನೋತ್ಸವಾಲೋಕನಕುತೂಹಲಪ್ರಚಲಿತಸಮಸ್ತಸಾಮಂತಚಕ್ರನುಂ, ನಿಷ್ಕಂಟಕೀಕೃತಾಶೇಷಜಗದಕಾಂಡೋತ್ಥಿತಪ್ರಚಣ್ಡವಿಪಕ್ಷೋತ್ಪಾತಪ್ರಶಮನಶಾಸ್ತ್ರೀಯಕಥಾರಾಕಾರತತ್ಕ್ಷಣಕ್ಷರದಜಸ್ರದಾನಪ್ರವೋದಜಳಧಾರಾಭಿರಾಮಕರಟಿಘಟಾಚಕ್ರನುಂ ನಿಜವಿಜಯಪ್ರಯಾಣಪ್ರಾರಂಭಸಂಭೂತೋತ್ಸವಭೂದೇವತಾರ್ಯವಿಕೀರ್ಯಮಾಣಪಿಷ್ಟಾತಕಪಾಂಶುಪಟಲವಿಭ್ರಮನುಂ ಕರಿತುರಗಖುರಶಿಖರೋತ್ಪಾತಧೂಳೀಸ್ಥಳೀಕೃತಗಗನಚಕ್ರನುಂ, ಜಗತ್ಕಂಪಿತಾರಾತಿದರ್ಪತ್ವರಿತವಿಧ್ವಂಸನೋದ್ಭೂತಭಟಾನೀಕಚಾತಿಭೂಕಂಪಶಂಕಾವಹಮಹಾಪದಾತಿಪಾದಕ್ಷೋಭಾಂದೋಳಿತಮೇದಿನೀಚಕ್ರನುಮಾಗಿ ಚಕ್ರವರ್ತಿಯ ಬಲಮನಿದಿರ್ಚಲೆಂದು ಮೇಲೆತ್ತಿ ಬರ್ಪಾಗಳ್,

ನರಪಾಳವ್ರಜಮರ್ಮಜಾಳವಿಳಸನ್ಮಾಣಿಕ್ಯಮಾಳಾಂಶುಪಿಂ
ಜರಿತಂ ಪ್ರೇಂಖಳಶಂಖವಾಜಿವಿಳಸದ್ವ್ಯಾಳೀಚಯಂ ಮತ್ತಕಂ ।
ಜರಕುಂಭೀರಕುಳಂ ಚಳತ್ಕದಳಿಕಾಮಾಳಂ ಝುಷಾನೀಕಮು
ಚ್ಚರಿಯಂ ಬಾಹುಬಲೀಶ್ವರಂಗೆ ಪಡೆದತ್ತಾ ತ್ರೀಯಸೈನ್ಯಾರ್ಣವಂ ॥ ೯೦

ವ॥ ಅಂತು ಯುದ್ಧಭೂಮಿಗಭಿಮುಖನಾಗಿ ಬರ್ಪಾಗಳ್,

ಕದನಕ್ರೀಡಾರಸಪ್ರಸ್ಫುಟಮುದಿತಭಟಾವಿರ್ಭವತ್ಸಿಂಹನಾದೋ
ನ್ಮಾದಮುದ್ದಾಮಾಶ್ವಹೇಷಾವಿಗಳಿತನಿಗಳಂ ದಂತಿಸಂಘಟ್ಟಘಂಟಾ ।
ರುದಿತಸ್ವಚ್ಛಂದಮಾಯೋಧನಪಟಹರವೋಜ್ಜೃಂಭಿತಂ ಶ್ರೋತ್ರಮಂ ಮು
ಟ್ಟಿದುದೆತ್ತಂ ರಾಜರಾಜಪ್ರಬಳಬಲಪಯೋರಾಶಿಗಂಭೀರನಾದಂ ೯೩

ವ॥ ಆಗಳದು ವಿಪಕ್ಷಬಲಮೆಂದರಿದು ಕ್ಷುಭಿತಚಿತ್ತನಾಗಿ ಬಾಹುಬಲಿಕುಮಾರನುಭಯಪಾರ್ಶ್ವಾನದ್ಧಶರಧಿಸಾರಿಕಾಮಾದ್ಯೋತಬದ್ಧಗೋಧಾಂಗುಳಿತ್ರಾಣಾಯೋಧಸಿಂಧುರಘಟಾಸಂಘಟ್ಟಮುಂ ನಿಬಿಡನಿಪೀಡಿತಪ್ರಾಸಮುಷ್ಟಿದುರ್ಧರಾಶ್ವಾರೋಹಕತುರಂಗಬಲಾವಗಾಢಮುಂ ವಿವಿಧಾಯುಧಕರಾರಭಟೀರಭಸೋದ್ಭಟಸುಭಟವ್ಯಾಕೀರ್ಣಮುಮುದೂರ್ಧ್ವಯಮಾನಪ್ರಕೀರ್ಣಚಾಪಲಕ್ಷಿತಕ್ಷತ್ರಪುತ್ರನಿರಂತರಮುಮಪ್ಪ ನಿಜಬಲಂಬೆರಸು ಭರತೇಶ್ವರಚಕ್ರವರ್ತಿಯ ಸೈನ್ಯಕ್ಕೆ ಮುಟ್ಟುವರೆ,

ಕಿವಿಯಂ ಮುಟ್ಟಿತ್ತು ಮುನ್ನಂ ವಿವಿಧಲಯಗತಿಪ್ರೋಚ್ಛಳತ್ಕಾಹಳೌಘಾ
ರವಮಲ್ಲಿಂ ಪಿಂದೆ ಧೂಳೀಪಟಲಪಿಹಿತಕೇತುದ್ವಿಪಾನೀಕಘಂಟಾ ।
ನಿವಹವ್ಯಾಪಾರಮಲ್ಲಿಂ ಬಳಿಕ ಹಯಖುರಧ್ವಾನಮಲ್ಲಿಂ ಬಳಿಕಾಳ್ ಕಾ
ಹವರಾಗೋತ್ಸಾಹಚಂಚದ್ಭಟಚಯಚರಣಾಸ್ಫಾಲಿತಂ ಕ್ಷೋಣಿಘೋಷಂ ॥

ವ॥ ಅಂತುಭಯಬಲದ ಸೆರೆಗೋಲ್ಗಳೊಂದೊಂದಂ ಮುಟ್ಟುವಿನಮತ್ತ ರಾಜಾಧಿರಾಜನುಮಿತ್ತ ಯುವರಾಜನುಂ ನಿಂದಾಗಳ್,

ರಸೆ ಪತ್ತಿತ್ತಿತ್ತಮಾಕಾಶದೊಳನಿಲಪಥಂ ಧಾರಿಣೀಚಕ್ರದೊಳ್ ಕಾ
ಳಸೆಗೊಂಡತ್ತಂಬಿಸಂ ಮಂದಯಿಸಿ ನಿಜಪರಾಲೋಕನವ್ಯಗ್ರದೃಷ್ಟಿ ।
ಪ್ರಸರಕ್ಕಲ್ಲಿತ್ತು ಮಾರ್ಗಂ ಕುಲಿಶನಿಭಶಿಖಾಭೇದಿಬಾಣಂಗಳುಂ ಭೇ
ದಿಸವೆಂಬಂತಾಯ್ತು ತಿಕ್ಷೋಭದಿನುಭಯಬಲಕ್ಷೋಭಧೂಳೀಪ್ರತಾನಂ ॥

ವ॥ ಅಂತು ನೆಗೆದ ಧೂಳೀಪ್ರತಾನಮನನ್ಯೋನ್ಯಘಂಟಾಟಂಕಾರಶ್ರವಣದ್ವಿಗುಣಿತರಣರಭಸಕ್ಷೋಭಮಹಾಹವಸಂಭೂತಭೂರಿಮದಾಂಭಃಪ್ರವಾಹಸಹಸ್ರಂಗಳಿಂದಮಿತರೇತರಹೇಷಾರವಾಕರ್ಣನೋದೀರ್ಣರೋಷಹಯಹೂಂಕಾರನಿಷ್ಠುರದಶನಗ್ರಾಹಖಣಖಣಾಯಿತಖಲೀನಸಂಘಟ್ಟಸ್ಯಂದಮಾನಫೇನಸಲಿಲಸ್ರೋತಶ್ಶತಂಗಳಿಂದಮಾಕುಳಾಕುಳನಯನರಾಜತನೂಜಸಮಾಜವದನಾಭಿಮುಖಚಟುಳಸಂಚಾರ್ಯಮಾಣಚಾರುಚಾಮರನಿಚಯವಿಚಳದವಿರಳಾನಿಳಂಗಳಿಂದಂ ವಿರಳವಿರಳಮಾದಾಗಳ್,

ಬಲಧೂಳೀವ್ರಾತಮೇಘಪ್ರಕರತಿಮಿರದೊಳ್ ಶಸ್ತ್ರಜಾಳಾಂಶುವಿದ್ಯು
ತ್ಕಳವಿದ್ಯೋತಂಗಳಿಂದಂ ಬಲನಿವಹರಜಸ್ಸಂತತಿಧ್ವಾನ್ತದೊಳ್ ಭೂ ।
ತಳನಾಥಾನೀಕವರ್ಮೋತ್ಕರಖಚಿತಮಣಿಶ್ರೇಣಿರತ್ನಪ್ರದೀಪಾ
ವಳಿದೀಪ್ತಿವ್ರಾತದಿಂದಂ ದಿಟಮುಭಯಬಲಂ ಕಂಡುದೊಂದೊಂದನಾಗಳ್ ॥

ರೋದೋಂತಂ ಕೂಡೆ ರತ್ನೋಜ್ಜ್ವಳಗಿರಿಕುಳದಿಂ ತೂಂತನಿಟ್ಟಂತೆ ನೀಲಾಂ
ಭೋದಂಗಳ್ ಕೂಡೆ ವಿದ್ಯುದ್ವಳಯಮನೊಳಕೊಂಡಂತೆ ಪಾಠೀನಚಕ್ರ
ಕ್ಷೋದಪ್ರಕ್ಷೋಭಿತಂ ವಾರಿಧಿಯೆ ಗಗನಮಂ ಮುಟ್ಟೆ ನಿಂದಂತೆಗುರ್ವಿಂ
ದಾದಂ ಚೆಲ್ವಾಯ್ತು ಚಕ್ರಿದ್ವಿಪಘಟೆ ನಿಶಿತಾಸ್ತ್ರಾಂಶುಜಾಳಾವಲೀಢಂ ॥ ೯೭

ವ॥ ಅಂತೊಡ್ಡಿದ ಗಜಘಟಾಟೋಪದ ನಡುವೆ,

ಘನಮಾರ್ಗವ್ಯಾಪಿ ಜೈತ್ರಧ್ವಜವಿಜಯಗಜಾರೋಹನುಗ್ರಾರಿವಿತ್ರಾ
ಸನಸಂಗ್ರಾಮಾನಕೌಘಧ್ವನಿಬಧಿರಿತದಿಕ್ಚಕ್ರನುದ್ಧ್ವಂಸವಿಂಧ್ಯಾ ।
ವನಿಭೃನ್ಮೂರ್ಧಾಧಿರೋಹದ್ವಿಪಚಯಮದ ರವಂ ರಾಜಕಂಠೀರವಂ ತಾ
ನನೆ ವೀರಕ್ಷತ್ರಚೂಡಾಮಣಿ ಭರತನೃಪಂ ನೋಂಕಲುದ್ಯುಕ್ತನಾದಂ ॥ ೯೭

ವ॥ ಅನ್ನೆಗಮಿತ್ತಂ ಯುವರಾಜನಾವಿಜಿಗೀಷುಬಲಾನಕಾನೀಕನಿನದಮನೆ ನಿಜಭುಜವಿಕ್ರಮೋತ್ಸವಕೋಳಾಹಳಮೆಂದುಂ, ವಿದ್ಯುಚ್ಚಮೂಚಕ್ರಪಾಂಸುಪಟಲಮನೆ ನಿಜವಿಜಯಲಕ್ಷ್ಮೀಪರಿಣಯನೋತ್ಸವಪ್ರಾರಂಭಪಿಷ್ಟಾತಕಚೂರ್ಣಮೆಂದುಂ, ವಿರೋಧಿಸಿಂಧುರಧ್ವಜಪಟಲಚ್ಛಾಯಾಪ್ರತಾನಮನೆ ನಿಜವೀರಪಟ್ಟಬದ್ಧೋತ್ಸವಸಮುಚ್ಛ್ರಿತಚ್ಛತ್ರಚ್ಛಾಯಾಮಂಡಳಮೆಂದುಂ, ವಿಪಕ್ಷವಿಶಿಖಮೋಕ್ಷಟಂಕಾರಮನೆ ಜಗದುದಗ್ರನಿಜವೀರಗ್ರಹಸ್ತೋಭನಾಕ್ಷರಮೆಂದುಂ, ಬಗೆದಭಿನಿಷಾದಿಯುಮಂ ಪಶ್ಚಿಮನಿಷಾದಿಯುಮಂ ನಿಜವಿಜಯಸಿಂಧುರಮುಮಂ ತಿಣ್ಣಂ ನೋಂಕಲುಮಪ್ಪುಂಕಲುಂ ಬೆಸೆಸಿ ವಿಜಯಲಕ್ಷ್ಮೀವಿಲಾಸಿನೀಭ್ರೂಲತಾವಿಭ್ರಮಾನುಕಾರಿಯೆನಿಪುದಂ ಮಧ್ಯಮನಿಷಾದಿಯ ಕೈಯಂ ಕೊಂಡು,

ವನಧಿದ್ವೀಪಸಮೀಪವರ್ತಿವಸುಧಾಂತರ್ವರ್ತಿಯಾಗಿರ್ದರಾ
ತಿನಿಕಾಯಕ್ಕಿದು ಯಾಮಿನೀಸಮುದಿತಂ ದೇವೇಂದ್ರಚಾಪಂ ದಲೆಂ ।
ಬಿನೆಗಂ ಬಾಹುಬಲೀಶನೇಱಿಸಿದನಾನಮ್ರಾಟನೀನಾದಸಂ
ಜನಿತಾರಾತಿಕುಲಾಂಗನಾಜನಮನಸ್ಸಂತಾಪಮಂ ಚಾಪಮಂ ॥ ೯೮

ವ॥ ಆಪ್ರಸ್ತಾವದೊಳ್,

ಇಸಲೆಂದಿರ್ದ ಧನುರ್ಬಲಂ ಪೊಳೆವ ಬಾಳಾಳ್ಕಂಗಳಂ ಪೋಲೆ ಪಾ
ಯಿಸಲೆಂದಿರ್ದಳವಂ ಪೊದಳ್ದೆಸೆವ ಚಕ್ರಾರಾವಮೋರಂತೆ ಚೋ ।
ದಿಸಲೆಂದಿರ್ದ ರಥಂ ಕನಲ್ದು ಮುಳಿಸಿಂ ಮಾರಾನಲೆಂದಿರ್ದ ಜ
ಗ್ಗಿ ಸಮಂ ತೋರ್ಮೆಯೆ ನೋಂಕಲಿರ್ದ ಘಟೆ ನೋಟಕ್ಕೇನಗುರ್ವಾದುದೋ

ವ॥ ಆಗಳುಭಯಬಲಮನ್ತ್ರಿಮುಖ್ಯರಿವರಿರ್ಬರರಸುಗಳಪ್ಪೊಡೆ ಚರಮದೇಹಧಾರಿಗಳಿವರ ಯುದ್ಧಮೆಂಬುದತಿಕ್ರೂರಗ್ರಹಯುದ್ಧದಂತೆ ಸಕಳಪ್ರ

ಜಾವಿನಾಶಕರಮಲ್ಲದೆ ಪೆಱತಲ್ತು ; ಚತುರಂಗಬಲಯುದ್ಧದೊಳಲ್ಲದೆ ಗೆಲ್ಲ ಸೋಲವೆಂಬುದಿಲ್ಲ ; ಸಮಸ್ತಜನಸಂಹರಣಕಾರಣಮಪ್ಪ ರಣದೊಳೀವಂ ದಪ್ಪುದೆಂದು ಧರ್ಮಯುದ್ಧಮನೆ ತಮ್ಮೊಳ್ ಸಮಕಟ್ಟಿ ಮುನ್ನಂ ಭರತೇಶ್ವರ ಚಕ್ರವರ್ತಿಯಲ್ಲಿಗೆ ವಂದು,

ಜಯಮಂ ಕೈಕೊಳ್ವುದು ದೃ
ಷ್ಟಿಯುದ್ಧಜಳಯುದ್ಧಮಲ್ಲಯುದ್ಧದೊಳ್ ಜನ ।
ಕ್ಷಯಕರಣದೊಳೇಂ ಪಾಪಮು
ಮಯಶಮುಮಪ್ಪನಿತೆ ದೇವ ಕಡೆಗಣಿಪುದಿದಂ ॥ ೧೦೧

ಉಱಿವುದು ಭುಜಬಲದಳವಂ
ಘೞಿಲನೆ ಕೊಳೆ ಹೀನಬಲನನಧಿಕಬಲಂ ತೊ ।
ತ್ತುಱದುಳಿದನೆಂಬ ಲೋಕದ
ಪೞಿ ಪೊರ್ದದೆ ಮಾಣೆ ಧರ್ಮಯುದ್ಧದೊಳೆಸಗಿಂ ॥ ೧೦೨

ವ॥ ಎನೆ ಭರತೇಶ್ವರಚಕ್ರವರ್ತಿಯಿಂತಾದೊಡೆಮಗೆ ಬಾಹುಬಲಿಯು ಸಮರಸಂಘಟ್ಟದೋಹಳಮಿದು ದರಿದ್ರಂಗೆ ಹೀನಗರ್ಭದೋಹಳದಂತಾದುದೆಂದು ರಾಜ್ಯಲಕ್ಷ್ಮೀಲೀಲಾಲಂಬನಮೆನಿಸಿದ ಬಿಸುಗೆಯ ಮತ್ತಾಲಂಬನಮನವಳಂಬಿಸಿ ಸಿಂಧುರಸ್ಕಂಧಪೀಠದೊಳ್ ಸುಖಾಸೀನನಾಗಿರ್ದಾಗಳ್, ಬಾಹುಬಲಿಕುಮಾರನಲ್ಲಿಗೆ ಮಂತ್ರಿಗಳ್ ಬಂದು ಪೂರ್ವೋಕ್ತಕ್ರಮದೊಳ್ ಧರ್ಮಯುದ್ಧವ್ಯತಿಕರಮಂ ಬಿನ್ನಪಂಗೆಯ್ದಾಗಳ್,

ಎನ್ನ ಚತುರಂಗಬಲಮನಿ
ದನ್ನರರಾಂಪನ್ನರೆಂಬ ನಿಮ್ಮರಸನ ಗ ।
ರ್ವೋನ್ನತಿಯುಮಡುಕುಮನಿನಿಸಾ
ನು ನ್ನೋಡಿಂ ಧರ್ಮಯುದ್ಧಮಕ್ಕೆಮ ಬೞಿಯಂ ॥ ೧೦೩

ವ॥ ಎಂದು ನಿಜಭುಜದಂಡೋಚ್ಚಂಡಚಾಪಟಂಕಾರಮಂ ಭರತರಾಜಸೈನ್ಯಕ್ಕೆ ಕುಪಿತಕೃತಾಂತಹೂಂಕಾರಶಂಕಾವಹಂ ಮಾಡಲ್ಪಡೆಯೆದೆಯುಂ ಅನ್ಯದುರ್ಧರನಿಜಧನುರ್ದಂಡಮಂ ತದ್ಧ್ವಜಿನಿಗೆ ಕೋಪಕುಟಿಲದಕ್ಷಿಣದಿಕ್ಪಾಲಭ್ರುಕುಟೀವಿಭ್ರಮಮಂ ಮಾಡಲ್ಪಡೆಯೆದೆಯುಂ ಅನವರತಪ್ರಮು

ಚ್ಯಮಾನಪ್ರಚುರನಿಜನಾರಾಚರಾಜಿಯಿಂದಮವಿರಳಮದಜಳತೈಲಪಾಕ ದುರಾಲೋಕಂಗಳಪ್ಪ ತದ್ಬಲಕರಟಿಕಟಂಗಳನಲ್ಪತುಚ್ಛಚ್ಛಿದ್ರಂಗಳ್ಮಾ ಡಲ್ಪಡೆಯುದೆಯುಂ, ಆಕರ್ಣಾಕೃಷ್ಟೋತ್ಸೃಷ್ಟನಿಜವಿಕೀರ್ಣಾಟಂಕಂಗಳಿಂದಂ ತತ್ಪತಾಕಿನೀಕುಂಜರಶಿರಃಶಿಲಾಪಟ್ಟಕಂಗಳನಿರ್ಬಗಿವಮಾಡಲ್ಪಡೆಯುದಯುಂ, ನಿಜವಿಜಯಗಜಕರೋನ್ಮುಕ್ತಂಗಳಪ್ಪ ಮುಕ್ತಾಮುಕ್ತವಿನಿರ್ದಳಿತವೀರ ಯೋಧರ ರುಧಿರವಾರಾಶೀಕರಂಗಳನುದಗ್ರಕೋಪಾನಳನನಾಱಿಸಲ್ಪಡೆ ಯುದೆಯುಂ, ಈಷದ್ವಿಷಣ್ಣವದನನಾಗಿರ್ದ ಬಾಹುಬಲಿಕುಮಾರನಂ ಮ ನ್ತ್ರಿಪುಂಗವರ್ ನೋಡಿ,

ಬಿಸುಡುವುದಸದಾಗ್ರಹಮಂ
ಪ್ರಸನ್ನಗಂಭೀರಚಿತ್ತದಿಂದಿದನವಧಾ।
ರಿಸುವುದು ಯುವರಾಜ ಮನಂ
ಬಸದೊರ್ವಗೆ ಸಲಿಪುದೆಮ್ಮ ಮುದುಗಣ್ತನಮಂ ॥ ೧೦೪

ವ॥ ಎಂದು ನುಡಿದೊಡಂಬಡಿಸಿ ಧರ್ಮಯುದ್ಧಮನುಭಯಬಲಂಗಳೊ ಳಮಾನಂದಭೇರಿಯಂ ಪೊಯಿಸಿ ಘೋಷಿಸಲ್ವೇಳ್ದು ಬಾಹುಬಲಿಕುಮಾ ರನ ಭರತೇಶ್ವರನ ಪಕ್ಷದ ರಾಜಲೋಕಮನೆರಡುಂ ದೆಸೆಯೊಳಂ ಮಧ್ಯ ಸ್ಥರಾಗಿ ಮಿಡುಕದೆ ನೋಡುತ್ತಿರ್ಪಂತು ನಿಯಮಿಸಿದಾಗಳಿರ್ಬರುಂ ನೀಲ ನಿಷಧಗಿರಿಗಳೊಂದೊಂದಱೊಳ್ ಬಂದು ಪೊಣರ್ದು ನಿಲ್ವಂತೆ ನಿಂದೊರ್ವ ರೊರ್ವರೆಮೆಯಿಕ್ಕದೆ ನೋಡುವಲ್ಲಿ,

ಲಲಿತಮುಖಸರಸಿಜಂ ನಿ
ಶ್ಚಳಪಕ್ಷ್ಮಂ ಸ್ತಿಮಿತತಾರಕಂ ಭುಜಬಲಿ ಕ।
ಣ್ಣೊಳೆ ತವೆ ಪೀರ್ವವೊಲೀ ನಿ
ಶ್ಚಳತನು ನಡೆನೋಡೆ ಭರತರಾಜಂ ಸೋಲ್ತಂ ೧೦೫

ವ॥ ಅಂತು ಬಾಹುಬಲಿತೇಜಃಪುಂಜಮಂ ಕಣ್ಣೊಳಾಳ್ಕಿವಂತೆ ಸೈರಿಸದೆ ಮೆಯಿಕ್ಕಿ ದೃಷ್ಟಿಯುದ್ಧದೊಳ್ ಸೋಲೆ ಮತ್ತಮಿರ್ವರುಂ ಬಂದು,

ಕರಿಯೂಥಪತಿಗಳೆರಡುಂ
ಸರಸೀಜಳಮಂ ವಿಳಾಸದಿಂ ಪುಗುವವೊಲಾ ।

ದರದಿಂದೆ ಪೊಕ್ಕು ತುಳುಂಕಿದ
ರರವಿಂದರಜಃಪಿಶಂಗಿತಾಭಿಷ್ಕೋದಕಮಂ ‖ ೧೦೬

ಭರತನಮುಖದೊಳ್ ಪರ್ವಿದ
ಖರಕೋಪಾನಳನನೆಯ್ದೆ ನಂದಿಸುವವೊಲಾ ।
ಮರಕತವರ್ಣಂ ಕರಿಕರ
ಪರಿಘದಿನೊಡನೊಡನೆ ತುಳುಂಕಿದಂ ತಿಳಿನೀರಂ ‖ ೧೦೭

ವ॥ ಭರತೇಶ್ವರಂ ಪಂಚಶತಶರಾಸನೋತ್ಸೇಧನಪ್ಪುದಱಿಂ ಪಂಚವಿಂಶತ್ಯುತ್ತರಪಂಚಶತಶರಾಸನೋತ್ಸೇಧನಪ್ಪ ಬಾಹುಬಲಿಕುಮಾರನ ಮೇಗೆ,

ಭರದಿಂದಂ ತುಳುಂಕಿದ ನೀ
ರುರದೊಳ್ ಹಾರಾಂಶುರುಚಿಯನಿರ್ಝರಿಗೊಳ್ ಮು ।
ರ್ಧರಜಳಯುದ್ಧಮುಮಾದಮ
ಪರಿಭವಮಂ ಚಕ್ರವರ್ತಿಗಿತ್ತತ್ತಾಗಳ್ ‖ ೧೦೮

ವ॥ ಅಂತು ಬಾಹುಬಲಿಯು ಸುರಕರಿಕರಾನುಕಾರಿಯಪ್ಪ ಬಾಹುಗಳಿಂದಂ ತುಳ್ಕಿದ ನೀರ್ಗೆ ಮೊಗಮನೊಡ್ಡಿ ಮೊಗಂ ಸೋಲ್ವುದುಂ, ಕುಮಾರಂಗೆ ಘೋಷಿಸುವ ಜಯಘೋಷಣೆಯಂ ಕೇಳಲಾಱದೆ ಮಣಿಮಯಕಿರೀಟೋದಗ್ರವಿಸ್ಫುರಿತಸಂಚಳಕಾಕನಕಾಚಳಮನೆ ಪೋಲ್ತು ಮಲ್ಲಯುದ್ಧದೊಳ್ ಬಂದು ಪೊಣರ್ದರ್,

ಮರಕತಮಣಿಶೈಲಮನನು
ಕರಿಸುವ ಭುಜಬಲಿಯೊಳಿರದೆ ಪೊಣರ್ದುಮಾಗಳ್ ।
ಸುರವಿದ್ಯಾಧರನರಬಲ
ಮೆರಡುಂ ದೆಸೆಯೊಳ್ ತೆರಳ್ದು ನೋಡಿತ್ತೆತ್ತಂ ‖ ೧೦೯

ಕರಣಂಗಳ್ ಗಾಯಂಗಳ
ಪರಿಣತಿಯಂ ಮೆಱೆದು ಪೊಣರ್ದರ್ ಸಂದೊಂದೆಡೆಯೊಳ್ ।
ಭರತನನವಯವದೊಳ್ ಮಣಿ
ಕಿರೀಟರುಚಿ ಬೆಳಗೆ ದೆಸೆಗೆ ಬೀಸಿದನಾಗಳ್ ‖ ೧೧೦

ಕನಕಾಚಳವಂ ಪೊತ್ತುದು
ಘನಮರಕತಶೈಲಮೆನಿಸಿ ಭುಜಬಲಿ ಸಕಳಾ ।
ವನಿತಳವಲ್ಲಭನಂ ಭೋಂ
ಕೆನೆತ್ತಿ ಪೊತ್ತಿರ್ದನಿಕ್ಕಲೊಲ್ಲದೆ ನೆಲದೊಳ್ ॥ ೧೧೧

ಭರತಾವನೀಶ್ವರಂ ಗುರು
ಪಿರಿಯಣ್ಣಂ ಚಕ್ರವರ್ತಿ ಮಹಿಮಾಕರನೀ ।
ದೊರೆಯನುಮಳವಟಿಯೆ ಮಸುಂ
ಧರೆಯೊಳ್ ತಂದಿಕ್ಕಿ ಭಂಗಮಂ ಮಾಡುವೆನೇ ॥ ೧೧೨

ಎಂದೊಯ್ಯನಿಟಿಪೆ ನೆಲದೊಳ್
ದುಂದುಭಿರವದೊಡನೆ ವಿಜಯಘೋಷಣೆ ನೆಗೞ್ದ ।
ತ್ತಂದು ಭುಜಬಲಿಯ ಬಲದೊಳ್
ಕುಂದು ಕರಂ ಪಿಱಿದುಮಾಯ್ತು ಭರತನ ಬಲದೊಳ್ ॥ ೧೧೩

ಚರಮತನುಸಾರ್ವಭೌಮಂ
ಪುರುಪರಮೇಶ್ವರತನೂಜನಂತತಿಭಂಗಂ ।
ದೊರೆಕೊಂಡುದಿಂದು ಭರತೇ
ಶ್ವರಂಗೆ ಹುಂಡಾವಸರ್ಪಿಣೀವಿಳಸನದಿಂ ॥ ೧೧೪

ನೆರೆದೆರೆಡುಂ ಬಲದರಸುಗ
ಳರೆ ಪರಿಭವಮಂತು ತನಗೆ ಬರೆ ಮುಳಿಸಿನ ದ ।
ಳ್ಳುರಿಗಳನುಗುೞುತ್ತುಂ ಚ
ಕ್ರರತ್ನಮಂ ಬಗೆದು ಬೆಸಸಿದಂ ಭರತೇಶಂ ॥ ೧೧೫

ವ॥ ಆಗಳಾಪುರುಪರಮೇಶ್ವರತನೂಭವರ ಯುದ್ಧಾಡಂಬರೋಪಸರ್ಗದೊಳಮಾಕುಳವ್ಯಾಕುಳರಾಗಿ ತತ್ಪ್ರಶಮನಪ್ರತೀಕಾರಮಾಗೆ ನಾಕಲೋಕಸೌಂದರಿಯರೊಡನೆ,

ಅನಿಮೇಷರ್ ನೂತನಪ್ರಸ್ತುತಸುರಭಿಸುಧಾಕ್ಷೀರಧಾರಾಭಿಷೇಕಾ
ರ್ಚನೆಯಂ ಸದ್ಯಸ್ತನಾಖಂಡಳವನಸುಮನೋಮಾಲಿಕಾಲಂಬಲೀಲಾ ।
ರ್ಚನೆಯಂ ಪ್ರತ್ಯಗ್ರಚಿಂತಾಮಣಿಮಯರಚನಾಶ್ಚರ್ಯನಿಶ್ಶೇಷಭೂಷಾ
ರ್ಚನೆಯಂ ಸರ್ವಜ್ಞಬಿಂಬಾವಳಿಗೆಪರಸಿದರ್ ಮಸ್ತಕನ್ಯಸ್ತಹಸ್ತರ್ ॥ ೧೧೬

ವ॥ ಅಪ್ರಸ್ತಾವದೊಳ್,

ಬೆಸಸಿದೊಡದು ಮಾರ್ಕೊಳ್ಳದೆ
ಬೆಸನಂ ಬಲವೆಂದು ಬಾಹುಬಲಿಯನಣಂ ಛೇ ।
ದಿಸಲಾಱದುದಱಿನಿರ್ದುದು
ಮಸುಳ್ದಿಸಕಂಗೆಟ್ಟು ಬಲದ ಮುಯ್ಪಿನ ಕೆಲದೊಳ್ ॥ ೧೧೭

ವ॥ ಆಗಳ್,

ಧರೆಯುಂ ಪರ್ಬಿದುದೀಬಾಹುಬಲಿನೃಪಯಶೋದುಂದುಭಿಧ್ವಾನವೆಂಬಂ
ತಿರೆ ದೇವಾನೀಕಿನೀದುಂದುಭಿರವಮುಮರೀವೃಂದಮಾಂಗಲ್ಯಗೇಯು ।
ಸ್ವರದೊಳ್ ಕೈಗೂಡಿ ಪೊಣ್ಮುತ್ತಿರೆಮುದಿತಸುರಾನಂದಬಾಷ್ಪೋದಬಿಂದೂ
ತ್ಕರವೆಂಬಂತಾಗೆ ತಂದತ್ತರಲ ಮಪೆಗಳಂ ಪುಷ್ಪವೋಷಪ್ರತಾನಂ ॥ ೧೧೮

ತನಗಲ್ಲದುದಂ ಮಾಡಿದ
ನಿನಸಂ ಚಕ್ರೇಶನೆಂಬ ಕುಲವೃದ್ಧರ ಭೂ ।
ವನಿತಾಧೀಶರ ನುಡಿಗ
ಳ್ಗೆ ನಾಣ್ಚಿದಂ ಭರತರಾಜನವನತಮುಕುಟಂ ॥ ೧೧೯

ಬಾಹುಬಲಿ ತನ್ನ ದಕ್ಷಿಣ
ಬಾಹುವ ಕೆಲದಲ್ಲಿ ನಿಂದ ಚಕ್ರಮುನಾಗಳ್ ।
ಸಾಹಸರಸಿಕಂ ಕಂಡೀ
ಸಾಹಸಮುಂ ನೆಗೆಟ್ದಿನೆನ್ನೊಳಂ ಭರತೇಶಂ ॥ ೧೨೦

ಕಳೆದಿಡುವುದೆ ಕಷ್ಟಂ ಭೂ
ತಳರಾಜ್ಯವಿಮೋಹಮುಚಿರರುಚಿಸಂಚಳಮಿಂ ।
ತಳವುಗಿಡಿಸಿದುದು ಮನುಕುಲ
ತಿಳಕನುಮಂ ಖಳಮಹೀಶರುಟಿದವರಳವೇ ॥ ೧೨೧

ಸೋದರರೊಳ್ ಸೋದರರಂ
ಕಾದಿಸುವುದು ಸುತನ ತಂದೆಯೆಡೆಳ್ ಬಿಡದು ।
ತ್ಪಾದಿಸುವುದು ಕೋಪಮುನಳ
ವೀದೊರೆತೆನೆ ತೊಡವುದೆಂತು ರಾಜ್ಯಶ್ರೀಯೊಳ್ ॥ ೧೨೨

ವ॥ ಅವಲ್ಲದೆಯುಮಶೇಷವಿದ್ಯಾನದೀಶೋಷಣಗ್ರೀಷ್ಮಾಂಶುಮಾಲಿಯುಮೂ
ಶವಶಾಲೆಯುಮುಪಶಮಾಂಭೋರಾಶಿಪ್ರಳಯಬಾಡಬಾನಳಜ್ವಾಲೆಯುಂ
ವಿನಯಸೂನೃತಮರೀಚಿಸಂಛಾದನಾಂಭೋದಸಂತತಿಯುಮುಭಯಲೋಕವಿ
ವೇಕವಿರೋಚನಾಸ್ತಮಯವೇಳೆಯುಂ ಧರ್ಮದ್ರುಮಚ್ಛೇದಪರಶುಧಾರೆ
ಯುಂ ವಿಷಯವಿಷದ್ರುಮಕಂದಳಿಯುಮಿಂದ್ರಿಯಲುಬ್ಧಕಸ್ವಚ್ಛಂದವಿಹಾ
ರಗಹನಭೂಮಿಯುಂ ದುರ್ಯಶಃಪಾಂಶುಪ್ರಸರಮಹಾವಾತ್ಯೆಯುಮಪ್ಪ

ಪಾತಕಿಯೊಳ್ ಲಕ್ಷ್ಮಿಕ್ರಯೊಳತಿ
ಕಾತರಕಾಪುರುಷಗಣಸಿಯೊಳ್ ನೆರೆಯಳ್ಕಿಂ ।
ತೀತನೆ ಬಗೆಗಾಂ ಪುರುತನು
ಜಾತರ ಬಗೆದುದನೆ ಬಗೆವೆನಳಿಪಂ ಬಗೆಯೆಂ ೧೨೩

ವಿಷಧಿಗಳೊಳಗೊಯ್ದುರ್ವ
ವಿಷಮರಣಾಂಗಣಮನಿರದೆ ಪುಗಿಸುವ ನಾನಾ
ವಿಷಯಂಗಳಂ ತೊಡುಕುರ್ವ
ವಿಷಯಸುಖಂಗಳೊಳೆ ತೊಡರ್ದು ಬಿರ್ದಪುದು ಜಗಂ ॥ ೧೨೪

ಇನಿಯವು ಮೊದಲೊಳ್ ನಂಜಿನ
ಪನಿವೊಲ್ ಬಳಿಕೆಯ್ದೆ ಮುಳಿದು ಕೊಂದಿಕ್ಕುವುವಿಂ ।
ತೆನೆಯೆನೆ ವಿಷಯಸುಖಾಸ್ವಾ
ದನದೊಳ್ ಲಂಪಟರಿದೇಕೆಯೋ ನರಪಶುಗಳ್ ॥ ೧೨೫

ಕಿವಿ ಮೆಯ್ ಕಣ್ ನಾಲಗೆ ಮೂ
ಗಿವು ಶಬ್ದಸ್ಪರ್ಶರೂಪರಸಗಂಧಸಮು ।
ದ್ಭವಸುಖದೊಳ್ ತೊಡರ್ವುದೆ ಸುಖ
ಮವಿಲ್ಲದಂದಿಲ್ಲದರ್ಕತೀಂದ್ರಿಯಮೆ ಸುಖಂ ॥ ೧೨೬

ಕಿಡುವೊಡಲ ಕಿಡುವ ರಾಜ್ಯದ
ಪಡೆವಾತುಗೊಳಲ್ಕಮೆನ್ನ ಮೆಯ್ಯ್ಯಾಗಿದಪುದೀ ।
ಗಡೆ ಜೈನದೀಕ್ಷೆಯಂ ಕೊಂ
ಡಡಿಗೆಱಗಿಸುವೆಂ ಸಮಸ್ತಸುರಸಮುದಯಮಂ ॥ ೧೨೭

ಎಂದಿಂತು ಬಗೆದು ಭರತನ
ನೆಂದಂ ಚಕ್ರೇಶ ಸಿಗ್ಗನುೞಿ ಮುಳಿಸಿಂ ನೀ ।
ನೆಂದಿಂಗಂ ಬಿಸುಡೀತ
ವ್ಮಂದಿರೊಳಿಂತಿಂತು ಕಟ್ಟುವರ್ಪುದು ಪೆಂಪೇ ॥ ೧೨೮

ನಿನ್ನೀಬೆಸಸಿದ ಚಕ್ರಮ
ದೆನ್ನೀದೇಹಾದ್ರಿಯಂ ಗೆಲಲ್ ನೆಱಿಯದು ನೀಂ ।
ಬಿನ್ನನಿದೇಕಿರ್ಪೆಯದೆಂ
ತೆನ್ನ ಗೆಲಲ್ ವಜ್ರಗಿರಿಯನಾರ್ಕುವೆ ವಜ್ರಂ ॥ ೧೨೯

ನೆಲಸುಗೆ ನಿನ್ನ ವಕ್ಷದೊಳೆ ನಿಷ್ಠುಳವಿಾಭಟಖಡ್ಗಮಂಡಲೋ
ತ್ಪಲವನವಿಭ್ರಮಭ್ರಮರಿಯಪ್ಪ ಮನೋಹರಿ ರಾಜ್ಯಲಕ್ಷ್ಮಿ ಭೂ ।
ವಲಯಮನಯ್ಯನಿತ್ತುದುಮನಾಂ ನಿನಗಿತ್ತೆನಿದೇವುದಣ್ಣ ನೀ
ನೊಲಿದ ಲತಾಂಗಿಗಂ ಧರೆಗೆಮಾಟಿಸಿದಂದು ನೆಗೞ್ತೆ ಮಾಸದೇ ॥ ೧೩೦

ಅವಧರಿಸದೆ ನಿನ್ನೊಳ್ ಪಿರಿ
ದವಿನಯಮಂ ನೆಗೞ್ದೆ ದೋಷಮಂ ತಪದೊಳ್ ನೀ ।
ಗುವೆನಸದಾಗ್ರಹಮಂ ಬಿಸು
ಡುವುದೊರ್ವಂಗೆ ಮಱೆವುದೆನ್ನ ದುರ್ವಿಳಸನಮಂ ॥ ೧೩೧

ವ॥ ಎಂದು ಬಾಹುಬಲಿಕುಮಾರಂ ತಪಶ್ಚರಣನಿಶ್ಚಳನಿಶ್ಚಯಮನನಾ
ದಾಗಳ್,

ಮನದೊಳ್ ಮುಂ ಪುದಿದಿರ್ದ ಕೋಪಮನಿತುಂ ತೂಳ್ದಾಗಳೆತ್ತೆತ್ತಗೆ
ಯ್ದೆನಿದಂ ತಮ್ಮನೊಳಿಂಬುದೊಂದುಪಶಮಂ ಕೈಗಣ್ಮೆ ನೀನೊರ್ವನೈ ।
ಮನುವಂಶಕ್ಕೆ ಲಲಾಮನಪ್ಪನುಜನೈ ಬೇಡಮ್ಮ ನೀನುಂ ತಪೋ
ವನಮಂ ಸಾರ್ವುದುಮಾನದಾರ್ಗೆ ಮೆಱೆವೆಂ ಮತ್ಪ್ರಾಜ್ಯಸಾಮ್ರಾಜ್ಯಮಂ ॥

ವ॥ ಎಂದು,

ನಿಜಪಾದಾಂಬುರುಹಕ್ಕೆ ಪಾದ್ಯವಿಧಿಯಂ ನೇತ್ರಾಂಬುವಿಂ ಮಾಡುವ
ಗ್ರಜನತ್ಯುನ್ನತಮಪ್ಪ ಮಸ್ತಕದ ಮೇಗೋರಂತೆ ಘಾಯ್ವಾತ್ಮಬಾ ।

ಸ್ಪೃಹಳೌಘಂಗಳನೆಂದು ಬಾಹುಬಲಿ ತನ್ನಿಂದಂ ನಿಧೀಶಂಗೆ ಸಂ
ಶಯರಾಜ್ಯಾಭಿಷೇಕೋತ್ಸವಂ ನೆಗೞ್ದೆಂಬಾಶಂಕೆಯುಂ ಮಾಡಿದಂ ೧೩೩

ವ॥ ಅಂತು ಭರತೇಶ್ವರನಂ ಬಾಹುಬಲಿಕುಮಾರನೆಂತಾನುಮೊಡಂಬಡಿಸಿ ಮಹಾಬಲಿಯೆಂಬ ನಿಜತನೂಜನನಾತ್ಮೀಯಪದವಿಯೊಳ್ ನಿಱಿಸಿ,

ಕ್ಷಿತಿತಳದೊಳ್ ನೆಗೞ್ದರ್ದ
ಪ್ರತಿಮಲ್ಲನನಿಕ್ಕಿ ಮುಯ್ಯನಣಮಾಸದೆ ದ |
ರ್ಪಿತಮರಿತಮಲ್ಲನುಮಸುಡಿ
ವ ತಕ್ಕಿನಿಂ ಸಭೆಗೆ ನಡೆವನಿಂದ್ರಾರ್ಚಿತನಾ ॥ ೧೩೪

ವ॥ ಅಂತು ನಡೆಯೆ,

ಮಂದಾರವರ್ಷನವಮ
ರಂದರಜೋಗಂಧಬಂಧುವಿವಿಧಪತಾಕಾ |
ಸಂದೋಹಾಂದೋಳನಪಟು
ಬಂಧಾಱಿಸಿದತ್ತು ಸಮವಸರಣವಿಹಾರಂ ೧೩೫

ದಿವಿಜನಿಕಾಯದ ಜಯಜಯ
ರವದಿಂದಂ ಪೂರಿತವಿಜಯಮಂ ತಮಗೆ ಮಹೋ |
ತ್ಸವದಿನಱಿಪುತ್ತುಮಿದಿರ್ಗೊ
ಳ್ವವೊಲೆಸೆದುದು ಸಮವಸರಣದುಂದುಭಿನಿನದಂ ॥ ೧೩೬

ವ॥ ಅಂತು ಭಗವದಾಸ್ಥಾನಾರವಿಂದಿನಿಯಂ ರಾಜಹಂಸನಂತಳಂಕರಿಸುತ್ತುಂ ಬಂದು ಭಗವತ್ಪಾದಪೀಠೋಪಕಂಠದೊಳ್ ಸರ್ವಾಂಗೋಪನತನಾಗಿ ನಿಂದಾಗಳ್,

ಪುರುಪರಮೇಶ್ವರಮುಖಚಂ
ದ್ರರಶ್ಮಿಯಿಂ ಚೋದ್ಯಮಿನ್ನವಿಲ್ಲೆಂಬಿನೆಗಂ |
ಕರವದನಹೃದಯಕಮಳದೊ
ಳೆರಡಲರ್ದುವದೊಂದು ಮುಗಿದುದಾಭುಜಬಲಿಯಾ ॥ ೧೩೭

ವ॥ ಅಂತು ನಿಟಿಲತಟಘಟಿತಕರಕುಶೇಶಯಕುಟ್ಮಲನಾಗಿ,

ಮೊದಲೊಳ್ ದೇವರ ಪಯೊಗೆ
ಯ್ದುದಲ್ತೆ ಯುವರಾಜಪದವಿಯೆನಗೀಗಳುಮ |
ಭ್ಯುದಯಕರಪ್ರವ್ರಜ್ಯದ
ಪದವಿಯು ಯುವರಾಜಪದವಿಯುಂ ಪಯೊಗೆಯಿಸಿಂ ॥ ೧೩೮

ಗುರುಪದಪದ್ಮಾಂತಿಕದೊಳ್
ಪರಮೇಶ್ವರದೀಕ್ಷೆಯುಂ ಮನಂಬಿಡೆ ಕೊಂಡೀ |
ಧರೆಯುಂ ಪೊಗೞಿಸಿದನಿದೇಂ
ಪುರುಪರಮೇಶ್ವರಸುತರ್ ಪರಿಚ್ಛೇದಿಗಳೋ ॥ ೧೩೯

ವ॥ ಅಂತು ಜೈನದೀಕ್ಷೆಯಂ ಕೈಕೊಂಡು ಗುರುವಿನನುಮತದಿಂ ದ್ವಾದಶಾಂಗಚತುರ್ದಶಪೂರ್ವಂಗಳಂ ಕಲ್ತು ತದನುಮತದೊಳ್ ಬೞಿಯುಮೇಕವಿಹಾರಿಯಾಗಿ ಸಂವತ್ಸರಾವಧಿವರಂ ಪ್ರತಿಮಾಯೋಗದೊಳ್ ನಿಲೆ,

ಅಡಿವಿಡಿದಿಟ್ಟ ಪುತ್ತುಗಳ ನೆತ್ತಿಗಳಿಂ ನಿಮಿರ್ದಿರ್ದ ಬಳ್ಳಿಗ
ಳ್ವಿಡಿದು ವಿಷೋರಗಪ್ರತತಿ ನೋೞ್ಪೊಡಗುರ್ವಿಸೆ ಸುಯ್ವ ಸುಯ್ಗಳಿಂ |
ಕಿಡಿ ಪೊಱಪೊಣ್ಮೆ ಬಾಹುಬಲಿಯೋಗಿಯ ಘೋರತಪೋಮಹಾಗ್ನಿಯಿಂ
ಸುಡೆ ಸುೞಿದುಣ್ಮುತಿರ್ಪ ಕಿಡಿಗಳ್ಗೆಣೆಯಾದುವು ತತ್ಪ್ರದೇಶದೊಳ್ ॥ ೧೪೦

ವಿಜಯಶರಾಸನಗುಣಘಾ
ತಜಾತಕಾಳಿಕೆಯನೆತ್ತಮಗ್ಗಳಿಸಿದುದಾ |
ಭುಜಬಲಿಯ ಭುಜದ್ವಯದೊಳ್
ಭುಜಂಗನಿಶ್ವಾಸಧೂಮವೇಣೀನಿಕರಂ ॥ ೧೪೧

ಬಳೆದ ಜಡೆ ನಿಮಿರ್ದ ಬಳ್ಳಿಗ
ಳೊಳೆ ಪೆಣೆದು ವಿಷೋರಗಾನಳಾರ್ಚಿಗಳಿಂದಂ |
ಮಿಳಿರ್ದುವು ಮುನಿಪಧ್ಯಾನಾ
ನಳನಿರ್ಯದ್ಧೂಮವೇಣಿಕಾನಿಕರದವೊಲ್ ॥ ೧೪೨

ಪರಮಮುನಿತನುವನಡರ್ದು
ಸುರದ್ರುಮಂಗೆತ್ತು ಯುವತಿರೂಪದಿನೆಂದಾ |

ದರದಿಂ ಬಿಡಿಸಿವರನಘನ
ಸಿರವಡರ್ವ ಲತಾಪ್ರತಾನಮಂ ಖೇಚರಿಯರ್ ॥ ೧೪೩

ವ॥ ಅಂತುಗ್ರೋಗ್ರತಪದೊಳಮಾಬಾಹುಬಲಿಮುನೀಂದ್ರಂಗೆ ಕೇವಲಜ್ಞಾನಾವಾಪ್ತಿಯಾಗದುದರ್ಕೆ ಭರತೇಶ್ವರಂ ವಿಸ್ಮಯಮುತ್ತು ಪೋಗಿ ವೃಷಭನಾಥನಂ ಬೆಸಗೊಳೆ ತಪದೊಳ್ ನಿಂದುಂ ನಿನ್ನ ನೆಲದೊಳ್ ನಿಂದೆವೆಂಬ ಮಾನಕಷಾಯಮವರ್ಗಿನ್ನುಂ ಪತ್ತುವಿಟ್ಟುವಲ್ತು ದಱಿಂ ಕೇವಲಜ್ಞಾನೋತ್ಪತ್ತಿಯಾಗದಿರ್ದುದು. ನೀಂ ಪೋಗಿ ಕಾಲ್ಗೆಱಗಿಱಿದಂ ಕೇವಲಜ್ಞಾನಮಕ್ಕುಮೆಂದು ಬೆಸಸಿದೊಡೆ ಲಬ್ಧೋಪದೇಶನಾಗಿ ವಿವಿಧಾರ್ಚನಾಸಮಗ್ರಪರಿಜನಪರಿವೃತಂ ರಾಜರಾಜಂ ಮುನಿರಾಜಚರಣಾಂಭೋಜದೊಳ್ ಬಂದೆಱಗಿ ವಿವಿಧಾರ್ಚನೆಗಳಿಂದಮರ್ಚಿಸಿ,

ನಿನ್ನ ಮಡಗೊಪ್ಪೆಲಾ ಮಾ
ನೋನ್ನತ ನೀನೀಯೆ ಬಂದುದೆನಗಿದನೆನತಂ ।
ದೇನ್ನಿನಗೆ ಬಗೆಯಲಪ್ಪುದೆ
ನಿನ್ನನೆ ನೀಂ ಬಗೆಯ ಬಗೆಯದಿರ್ ಪೆಱಪೆಱತಂ ॥ ೧೪೪

ಎನಲೊಡಮಂತಃಕರಣದೊ
ಳನಿಸಾನುಂ ನಿಂದುದೊಂದು ಮಾನಕಷಾಯಂ ।
ಮುನಿಪತಿಗೆ ಪೋಗೆ ಪುಟ್ಟಿದು
ದನಂತವಸ್ತುಪ್ರಕಾಶಿಕೇವಳಬೋಧಂ ॥ ೧೪೫

ಆಗಳ್ ದೊರೆಕೊಂಡಿರೆ ದೇ
ವಾಗಮಮೇಕಾತಪತ್ರಮೆಸೆದಿರೆ ಕರಮಿಂ ।
ಬಾಗಿರೆ ಚಾಮರಯುಗ್ಮಮ
ದಾಗಳೆ ಸಿಲೆ ದಿವ್ಯವಿಷ್ಟರಂ ಮಣಿಖಚಿತಂ ॥ ೧೪೬

ಜಯನಿನದಂ ಸುರದುಂದುಭಿ
ಚಯನಿನದಂ ಪುಷ್ಪವರ್ಷಮೊರ್ಮೆಯೆ ಸಕಲೋ।
ರ್ವಿಯನೆಯ್ದೆ ಪರ್ವುತಿರೆ ಚಿ
ತ್ತೆಯ ಸರಿಯಂತೆಱಗಿ ಪೋದುದಮರಸಮಾಜಂ ॥ ೧೩೪

ವ॥ ಅಂತು ಬಾಹುಬಲಿಕೇವಳಿಯುಂ ನಾನಾದೇಶವಿಹಾರದೊಳ್ ವಿಶ್ವಜನವುಂ ನಿಜವಚೋಮೃತದಿಂ ಭವ್ಯಜನಸಾರ್ಥಮುಂ ತಣಿಪಲೆಂದು ಬಂದು ಕೈಲಾಸಶೈಲದೊಳಾದಿದೇವರ ಸನ್ನಿಧಿಯೊಳಿರ್ದಂ. ಇಂತು ಭರತೇಶ್ವರನುಮಾಮುನೀಶ್ವರನಂ ಪೂಜಿಸಿ,

ಪಿಸಗರ್ಗಂ ತೇಜಕ್ಕವೆಂದೋಜೆಗೆವುಹಿತವುಹೀಪಾಳ ಕರ್ಬೆಕ್ಕೆ ಬಾಯ್ಕೀ
ಳಿಸಿ ಹೈಮಕ್ಷ್ಮಾಚಳೇಂದ್ರಂಬರೆಗಮಖಿಳಷಟ್ಖಂಡಭೂಭಾಗಮಂ ಷ ।
ಷ್ಟಿಸಹಸ್ರಾಬ್ದಂಗಳಿಂ ದಿಗ್ವಿಜಯದೊಳೆಣೆಗೆದಾನಂದಭೇರೀರವಂ ಘೂ
ರ್ಣಿಸೆ ಸಾಕೇತಕ್ಕೆ ವಂದಂ ಸುಕವಿಜನಮನೋಮಾನಸೋತ್ತಂಸಹಂಸಂ ॥

ವ॥ ಅಂತು ನಿರ್ವರ್ತಿತಾಶೇಷದಿಗ್ವಿಜಯಸಾಹಸಾಶ್ಚರ್ಯಾವಲೋಕನನಿರತಪುರಜನಾಶೀರ್ವಾದಶೇಷಾಕ್ಷತಂಗಳನಾಂತುಕೊಂಡು,

ವನಧಿಧ್ವಾನಮನೊಡ್ಡಿ ಸುತ್ತಿರೆ ನದದ್ಗಂಭೀರಭೇರೀಬೃಹ
ದ್ಧ್ವನಿ ನಾನಾವಿಧಮಂಗಳಾನಕರವಂ ಕೈಗಣ್ಮೆ ಸಂಘನವಂ ।
ದನಮಾಳಾಲಲಿತಾಂಶುಕಧ್ವಜವಿಳಾಸಾಕೀರ್ಣಮಂ ಮೆಚ್ಚಿ ಪೊ
ಕ್ಕನಯೋಧ್ಯಾಪುರಮಂ ಮಹಾವಿಭವದಿಂ ಸಂಸಾರಸಾರೋದಯಂ ॥ ೧೪೯

ಗ॥ ಇದು ದೇವೇಂದ್ರಮುನೀಂದ್ರವಂದ್ಯಪರಮಜಿನೇಂದ್ರಮುಖ
ಚಂದ್ರನಾಶ್ಚಂದ್ರಿಕಾಪ್ರಸರಪ್ರಸಾದೋದೀರ್ಣಸೂಕ್ತಿ
ಕಲ್ಲೋಲಮಾಲಾಕೀರ್ಣಕವಿತಾಗುಣಾರ್ಣವ
ಪ್ರಣೀತಮಪ್ಪಾದಿಪುರಾಣದೊಳ್
ದಿಗ್ವಿಜಯಧ್ವಜಾರೋಹಣಂ
ಚತುರ್ದಶಾಶ್ವಾಸಂ.
ಸಂಪೂರ್ಣಂ.

ಶ್ರೀದಯಿತಂ ಮನುಕುಲಗಗ
ನಾದಿತ್ಯಂ ಹಿಮವಮನೆಯ್ದೆ ಷಟ್ಖಂಡಮುಮಂ ।
ಸಾಧಿಸಿ ಜಿತದಿಙ್ಮಂಡಲ
ನಾದ ಮಹಾತ್ಮಂ ಸರಸ್ವತೀಮಣಿಹಾರಂ ॥ ೧

ವ॥ ತದನಂತರಮೆ ಮಾಗಧಾಮರತನುಪ್ರಭಾಸಾಮರವಿಜಯಾರ್ಧಕುಮಾರಕೃತಮಾಲಾನಾದ್ಯಮಾಲಾಹಿಮವತ್ಕುಮಾರದಿವಿಜರಿಂದಂ ಗಂಗಾಸಿಂಧುದೇವೀಪ್ರಮುಖದೇವೀನಿವಹದಿಂ ಲವಣಜಲಧಿಗಂಗಾಸಿಂಧುನದ್ಯಾದಿತೀರ್ಥಜಲಪರಿಪೂರಿತವಿವಿಧೌಷಧಿರತ್ನಗರ್ಭಮಂಗಳಭೃಂಗಾರುಜಳಂಗಳಿಂದಭಿಷಿಕ್ತನಾದಾಗಳ್,

ಗಣಬದ್ಧಾಮರಖೇಚರ
ಗಣಭೂಚರನಿಕರಮಾಗಧಾದ್ಯಮರಶಿರೋ ।
ಮಣಿರುಚಿ ಪುದಿಯೆಯುಮಿನಿಸುಂ
ಮಣಿಯದೆ ಬೆಳಗಿದುವು ಭರತನೃಪನಖರುಚಿಗಳ್ ॥ ೨

ವ॥ ಅಂತು ಚಕ್ರಾಭಿಷೇಕೋತ್ಸವಾನಂತರಂ,

ಮನುಕುಳತಿಳಕಂ ವೃಷಭಾ
ಗ್ರನಂದನಂ ರಾಜರಾಜನಧಿರಾಜಂ ಚ ।
ಕ್ರನಿಧೀಶನಾದಿಭೂಭುಜ
ನೆನೆ ನೆಗಳ್ದಂ ಭರತಚಕ್ರಿ ವಿಶ್ವಂಭರೆಯೊಳ್ ॥ ೩

ವ॥ ಅಂತು ಷಟ್ಖಂಡಭರತಮಂಡಳಮನುಂಡಿಗೆ ಸಾಧ್ಯಂಮಾಡಿ ಪದಿನೆಂಟುಕೋಟಿ ಜಾತ್ಯಶ್ವಂಗಳುಮೆಂಭತ್ತುನಾಲ್ಕುಲಕ್ಕೆ ಗಂಧಸಿಂಧುರಂಗಳಪ್ಪ ಭದ್ರಹಸ್ತಿಗಳುಮೆಂಭತ್ತುನಾಲ್ಕುಲಕ್ಕೆ ಸಮರಸನ್ನಾಹಯೋಗ್ಯಂಗಳಪ್ಪ ರಥಂಗಳುಮೆಂಭತ್ತುನಾಲ್ಕುಕೋಟಿವೀರಭಟನಿಕರಮುಂ ಮೂವತ್ತಿರ್ಛಾಸಿರಮುಕುಟಬದ್ಧರುಂ ಮೂವತ್ತಿರ್ಛಾಸಿರ್ವರ್ ಮೆಯ್ಗಾಪಿನ ಗಣಬದ್ಧದೇವರುಂ ಮೂವತ್ತಿರ್ಛಾಸಿರ್ಬರುಭಯಕುಲವಿಶುದ್ಧಮಕುಟಬದ್ಧರ ತನೂಜಯೆರಪ್ಪ ಕುಲಲಲನೆಯರುಂ ಮೂವತ್ತಿರ್ಛಾಸಿರ್ಬರ್ ಪ್ರತ್ಯಂತರಾಜತ

ನೂಱೆಯರುಂ ಮೂವತ್ತಿರ್ಛಾಸಿರ್ಬರವರೋಧವಧೂನಿವಹಮುಂ ಅಂತು ತೊಂಭತ್ತಾಱುಸಾಸಿರಮಂತಃಪುರಮುಂ ಮೂಱುಕೋಟಿಯುವತಿಬಂಧುವರ್ಗಮುಂ ಮೂವತ್ತಿರ್ಛಾಸಿರಸಂಗೀತಕಸಂಗತನಾಟ್ಯಶಾಲೆಗಳುಂ ಮತ್ತಂ ಲೌಕಿಕಶಾಸ್ತ್ರನಿವರ್ತನಂ ಬೆಱಸು ಪಲವುಂ ತೆಱದ ಪಱೆಗಳುಂ ಷಟ್ಕರ್ಮಸಾಧನದ್ರವ್ಯಂಗಳುಂ ದಿವ್ಯಶಯ್ಯಾಸನನಾನಾಸದನಂಗಳುಂ ಶಾಲಿವ್ರೀಹಿಯವಗೋಧೂಮಾದಿಧಾನ್ಯಸಿಱಿಯದೊಡನನೇಕಧಾನ್ಯಸದನಂಗಳುಂ ಕ್ಷೌಮದುಕೂಲಾದಿದಿವ್ಯವಸನವಿವಿಧಪ್ರಾವರಣವಿಶೇಷಂಗಳುಂ ನೀತಿಶಾಸ್ತ್ರಂಗಳೊಡನನೇಕಶಾಸ್ತ್ರಂಗಳುಂ ಸ್ತ್ರೀಪುರುಷಯೋಗ್ಯಮಣಿಮುಕ್ತಾಭರಣಂಗಳುಂ ಚಕ್ರವರ್ತಿಯಾಜ್ಞೆಯಿಂದಂ ನೆಲನೆಲ್ಲಂ ಬಂದುಕೊಳ್ವೆಡಂ ತವದ ಕನಕರಾಶಿಯುಂ ಮರಕತಪದ್ಮರಾಗವಜ್ರವೈಡೂರ್ಯಮುಕ್ತಾಫಳಾದಿನವರತ್ನಂಗಳುಮನುಕ್ರಮದಿಂದಂ ಶ್ರೀಗೃಹದೊಳ್ ಪುಟ್ಟಿದ ಕಾಳಮಹಾಕಾಳನೈಸರ್ಪಪಾಂಡುಕಪದ್ಮಪಿಂಗಳಮಾಣವಕಶಂಖಸರ್ವರತ್ನಂಗಳೆಂಬನವನಿಧಿಗಳುಂ ಆಯುಧಾಗಾರದೊಳ್ ಪುಟ್ಟಿದ ಚಕ್ರಾಸಿದಂಡಚ್ಛತ್ರರತ್ನಂಗಳುಂ ಶ್ರೀಗೃಹದೊಳ್ಪುಟ್ಟಿದ ನಿಧಿಮಣಿಚರ್ಮ ಕಾಕಿಣೀರತ್ನಂಗಳುಂ, ವಿಜಯಾರ್ಧಪರ್ವತದೊಳ್ ಪುಟ್ಟಿದ ಗಜಾಶ್ವಸ್ತ್ರೀರತ್ನಂಗಳುಂ, ಸಾಕೇತನಗರದೊಳ್ ಪುಟ್ಟಿದ ಸೇನಾನಾಯಕಪುರೋಹಿತಗೃಹಪತಿತಕ್ಷಕರತ್ನಂಗಳುಂ ಅಂತುಪದಿನಾಲ್ಕು ತೆಱದ ಜೀವಾಜೀವರತ್ನಂಗಳುಂ ಕ್ಷಿತಿಸಾಗರಮೆಂಬ ಪ್ರಾಕಾರದೊಳಂ ಸರ್ವತೋಭದ್ರಮೆಂಬ ಗೋಪುರದೊಳಂ ಕೂಡಿದ ವೈಜಯಂತಿಯೆಂಬ ದಿವ್ಯಪ್ರಾಸಾದಮುಂ ದಿಕ್ಸ್ವಸ್ತಿಕಮೆಂಬ ಸಭಾಭೂಮಿಯುಂ ನಂದ್ಯಾವರ್ತಮೆಂಬ ಶಿಬಿರನಿವೇಶಮುಂ ಗಿರಿಕೂಟಮೆಂಬ ದಿಗವಲೋಕನಗೃಹಮುಂ ವರ್ಧಮಾನಮೆಂಬೀಕ್ಷಣಪ್ರಿಯಪ್ರೇಕ್ಷಾಗೃಹಮುಂ ಮಹಾಘರ್ಮಾಂತಮೆಂಬ ಧಾರಾಗೃಹಮುಂ ಗೃಹಕೂಟಮೆಂಬ ವರ್ಷಾವಾಸಮುಂ ಪುಷ್ಕಳಾವತಿಯೆಂಬ ಶಯನಸದನಮುಂ ಕುಬೇರಕಾಂತಮೆಂಬ ತವದ ಭಂಡಾರಮುಂ ವಸುಧಾರಕಮೆಂಬ ಕೋಶಾಗಾರಮುಂ ಜೀಮೂತಮೆಂಬ ಮಜ್ಜನಗೃಹಮುಂ ಅವತಂಸಿಕೆಯೆಂಬ ರತ್ನಮಾಲೆಯುಂ ದೇವರಮ್ಯಮೆಂಬ ಪಟಕುಟಿಯುಂ ಸಿಂಹವಿಧೃತಮಪ್ಪ ಸಿಂಹವಾಹಿನಿಯೆಂಬ ಮೃದುಶಯ್ಯೆಯುಂ ಮೇರುಕಂತೋಪಮಮೆಂಬ ಸಿಂ

ಹಾಸನಮುಂ, ಯಕ್ಷಕರವಿಧೂಯಮಾನಮಪ್ಪನುಪಮಮಂಗಳಮೆಂಬ
ಮೂವತ್ತೆರಡುಚಾಮರಂಗಳುಂ ಸೂರ್ಯಪ್ರಭಮೆಂಬಾತಪತ್ರಮುಂ ವಿದ್ಯು
ತ್ಪ್ರಭಮೆಂಬ ಮಣಿಕುಂಡಲಯುಗಳಂಗಳುಂ ವಿಷಮೋಚಿಕೆಗಳೆಂಬ ಪಾ
ವುಗೆಗಳುಂ ಅಭೇದ್ಯಮೆಂಬ ಕವಚಮುಂ ಅಜಿತಂಜಯಮೆಂಬ ರತ್ನರಥ
ಮುಂ ವಜ್ರಕಾಂಡಮೆಂಬ ಬಿಲ್ಲುಂ ಅಮೋಘಮೆಂಬ ಶರನಿಕರಮುಂ
ವಜ್ರದಂಡಮೆಂಬ ಶಕ್ತಿಯುಂ ಸಿಂಹಾಟಕಮೆಂಬ ಕುಂತಮುಂ ಲೋಹ
ವಾಹಿನಿಯೆಂಬ ಸುರಿಗೆಯುಂ ಮನೋವೇಗಮೆಂಬ ಕಣೆಯುಂ ಸೌನಂ
ದಕಮೆಂಬ ಬಾಳುಂ ಭೂತಮುಖಮೆಂಬ ಖೇಟಕಮುಂ ಸುದರ್ಶನಮೆಂ
ಬ ಚಕ್ರರತ್ನಮುಂ ಚೂಡಾಮಣಿಯೆಂಬ ಮಣಿರತ್ನಮುಂ ಚಿಂತಾಮಣಿ
ಯೆಂಬ ಕಾಕಿಣೀರತ್ನಮುಂ ಅಯೋಧ್ಯನೆಂಬ ದಂಡನಾಯಕನುಂ ಬುದ್ಧಿ
ಸಾಗರನೆಂಬ ಪುರೋಹಿತನುಂ ಕಾಮವೃಷ್ಟಿಯೆಂಬ ಭಂಡಾರಿಗನುಂ
ಭದ್ರಮುಖನೆಂಬ ತಕ್ಷಕಪತಿಯುಂ ವಿಜಯಾರ್ಧಪರ್ವತಮೆಂಬ ಯಾ
ನಹಸ್ತಿಯುಂ ಪವನಂಜಯಮೆಂಬ ತುರಗರತ್ನಮುಂ ಸುಭದ್ರೆಯೆಂಬ
ಸ್ತ್ರೀರತ್ನಮುಂ ದ್ವಾದಶಯೋಜನಸಂಸರ್ಪನ್ನಿನಾದಂಗಳಪ್ಪಾನಂದಿಗಳೆಂ
ಬ ಪನ್ನೆರಡುಂ ಮಹಾಭೇರಿಗಳುಂ ವಿಜಯಘೋಷಂಗಳೆಂಬ ಪನ್ನೆರ
ಡು ಪಟಹಂಗಳುಂ ಪುಣ್ಯಾಬ್ಧಿಸಂಭವಂಗಳಾಗಿ ಗಂಭೀರಾವರ್ತಂಗಳೆಂ
ಬಿಪ್ಪತ್ತುನಾಲ್ಕುಂ ಶಂಖಂಗಳುಂ ನಾಲ್ವತ್ತೆಂಟುಕೋಟಿ ಪತಾಕೆಗಳುಂ
ತಟಿದ್ವಳಯವಿಳಸಿತಂಗಳಾಗಿ ನಿಜಪ್ರಕೋಷ್ಠನಿಷ್ಠಿತಂಗಳಪ್ಪ ವೀರಾಂಗ
ದಂಗಳೆಂಬ ಕಟಕಂಗಳುಂ ಮಹಾಕಲ್ಯಾಣಕಾರಮೆಂಬ ದಿವ್ಯಾಹಾರಮುಂ
ಅಮೃತಗರ್ಭಂಗಳೆಂಬ ಸದ್ಯೋಘೃತಮುಂ ಅಮೃತಪರಿಮಳಾಮೋದ
ಮೆಂಬ ದಧಿಯುಂ ಅಮೃತರಸಾಯನಮೆಂಬ ಪಾನಮುಂ ಮತ್ತಂ ಮೂವ
ತ್ತಿರ್ಛಾಸಿರವಿಷಯಂಗಳುಂ ಎಪ್ಪತ್ತಿರ್ಛಾಸಿರಪ್ರೊೞಲ್ಗಳುಂ ತೊಂಭತ್ತಾಱು
ಕೋಟಿಗ್ರಾಮಂಗಳುಂ ತೊಂಭತ್ತೃಸಾಸಿರದ್ರೋಣಾಮುಖಂಗಳುಂ ನಾ
ಲ್ವತ್ತೆಣ್ಸಾಸಿರ ಪಟ್ಟಣಂಗಳುಂ ಪದಿನಾಱುಸಾಸಿರಖೇಡಂಗಳುಂ ಪದಿನಾ
ಱುಸಾಸಿರ ಸಂವಾಹನಂಗಳುಂ ಐವತ್ತಾಱಂತರದ್ವೀಪಂಗಳುಂ ಏಕಕೋ
ಟಿಪ್ರಮಾಣಸ್ಥಾಯಿಗಳುಂ ಶತಸಹಸ್ರಕೋಟಿಹಲಂಗಳುಂ ಮೂಱುಕೋ
ಟಿಗೋಮಂಡಳಮುಂ ಪ್ರತ್ಯಂತವಾಸಿಗಳಪ್ಪೇೞ್ನೂಱುಕುಕ್ಷಿನಿವಾಸಿಗಳುಂ

ಎಪ್ಪತ್ತಿರ್ಛಾಸಿರದುರ್ಗಾಟವಿಗಳುಂ ಪದಿನೇಣ್ಛಾಸಿರಮ್ಲೇಚ್ಛರಾಜರುಂ ಆತ್ಮೀಯಸಾಮ್ರಾಜ್ಯಪರಿಚ್ಛೇದಮಾಗೆ ವಜ್ರವೃಷಭನಾರಾಚಶರೀರಸಂಹನನಸಾಮರ್ಥ್ಯನುಂ ಸಮಚತುರಶ್ರಸಂಸ್ಥಾನನುಂ ನಿಷ್ಟಪ್ತಕನಕವರ್ಣನುಂ ಸ್ವಸ್ತಿಕನಂದ್ಯಾವರ್ತಾದಿಚತುಷ್ಷಷ್ಟಿಲಕ್ಷಣಧರನುಂ ತಿಳಮಸೂರಿಕಾದ್ಯನೇಕವ್ಯಂಜನನಿಧಿಯುಂ ಅಪಾರವೀರ್ಯನುಂ ಪಂಚಶತಚಾಪೋತ್ಸೇಧನುಂ ಚತುರಶೀತಿಲಕ್ಷಣಪೂರ್ವಾನಪವರ್ತ್ಯಾಯುಷ್ಯನುಂ ಅಪ್ರತಿಹತಶಾಸನನುಮಾಗಿ,

ಹಿಮದಿಂದಂ ಲವಣಾಂಬುರಾಶಿವರೆಗಂ ಷಟ್ಖಂಡಭೂಮಂಡಳಂ
ನಿಮಿರ್ದಾಜ್ಞಾಪ್ರಸರಕ್ಕಗುರ್ವುಗೊಳೆಯುಂ ವಿದ್ಯಾಧರರ್ ಮಾಗಧಾ ।
ದ್ಯಮರರ್ ತನ್ನನೆ ನಿಚ್ಚಮೋಲಗಿಸೆಯುಂ ಚಕ್ರೇಶ್ವರಂ ಕೀರ್ತಿವಿ
ಭ್ರಮದಿಂ ಪಜ್ಜಳಿಪನ್ನಮುಜ್ಜಳಿಸಿದಂ ವ್ಯೋಮಾವನೀಭಾಗಮಂ ॥ ೪

ವ॥ ಅಂತು ಭರತಂ ಭರತಮಂಡಳಮನೇಕಚ್ಛತ್ರಚ್ಛಾಯೆಯಿಂದಂ ಪ್ರತಿಪಾಲಿಸುತ್ತಮಿರೆಯಿರೆ,

ಪುರನಿಧಿಶಯ್ಯಾಸನರಾ
ಜ್ಯರತ್ನವಾಹನವರೂಥಿನೀನಾಟ್ಯಸಭಾ ।
ಪರಿಕರಸಹಿತಂ ಭರತೇ
ಶ್ವರಂಗೆ ಸಮಸಂದುದೀದಶಾಂಗಂ ಭೋಗಂ ॥ ೫

ವ॥ ಇಂತಯೋಧ್ಯಾಸಿಂಹಾಸನಾಸೀನನುಮುದಿತೋದಿತಸಾಮ್ರಾಜ್ಯಸುಖಾನುಭವನುಂ ಕೃತಕೃತ್ಯನುಮಪ್ಪ ಸಕಲಚಕ್ರವರ್ತಿ,

ಜಿನಪೂಜೋತ್ಸವಮಂ ಮಹಾಮಹಮುಮಂ ತಾಂ ಮಾಡಿ ಸಲ್ವನ್ನೆಗಂ
ಧನಮಂ ತಕ್ಕವರ್ಗೀಯಮೇಬ್ಬುದದನಂತೀಗೆಯ್ದುಮೊಲ್ಲರ್ ತಪೋ ।
ಧನರಾರಾಧ್ಯಗೃಹಸ್ಥರಾದರೊಳಮಿನ್ನಾರ್ ತಕ್ಕರಾರ್ಗೆನೆಯೊ
ಯ್ಯನುಪಾಯಾಂತರದಿಂದಮೊಂದೊಸಗೆಯಂ ತದ್ವ್ಯಾಜದಿಂ ಮಾಡಿದಂ ॥ ೬

ವ॥ ಅಂತು ಮಾಡಿ,

ಹರಿತಾಂಕುರಫಳಪುಷ್ಪೋ
ತ್ಕರಂಗಳಂ ಪೊಸತೆ ಮೊಳೆತ ಧಾನ್ಯಂಗಳನಾ ।

ಧರಣೀಶಂ ಕೆದಱಿಸಿದಂ
ನಿರಂತರಂ ರಾಜಗೇಹದೊಳಗಂ ಪೊಱಗಂ ॥ ೭
ಕೆದಱಿಸಿ ಬೞಿಯಂ ಬರವೇ
ೞ್ಪುದುಮಲ್ಲಿ ಕೆಲರ್ ವಿವೇಕರಹಿತರ್ ಬಂದರ್ ।
ವೊದಲೊಳೆ ಪೊಕ್ಕರ್ ಬ್ರತಮಿ
ಲ್ಲದವರ್ ತುಳಿಯುತ್ತುಮಂಕುರಂಗಳನಾಗಳ್ ॥ ೮
ಸಾವದ್ಯಭೀರುಗಳ್ ಕೆಲ
ರಾವಿವಿಧಫಲಪ್ರಸೂನಪಲ್ಲವತತಿಯಿಂ ।
ತೀವಿದ ರಾಜಾಂಗಣಮನಿ
ಳಾವಂದ್ಯರ್ ಮೆಟ್ಟಲೊಲ್ಲದಲ್ಲಿಯೆ ನಿಂದರ್ ॥ ೯
ನಿಲಲೊಡಮನಿಬರುಮಂ ಭೂ
ತಲಪತಿ ಬೞಿಯಟ್ಟೆ ಬರಿಸೆ ಪೆಱತೊಂದೆಡೆಯೊಳ್ ।
ಮಲರಹಿತರ್ ಬಂದು ಧರಾ
ಲಲನಾಧೀಶಂಗೆ ವಿನತಮಸ್ತಕರಾದರ್ ॥ ೧೦

ವ॥ ಆಗಳ್ ಭರತೇಶ್ವರಚಕ್ರವರ್ತಿ ನೀಮನಿಬರುಮಿವರ್ ಬಂದ ಮಾರ್ಗ ದೊಳ್ ಬಾರದೆ ಪೆಱತೊಂದು ಮಾರ್ಗದೊಳೇಕೆ ಬಂದಿರೆಂದು ಬೆಸಗೊಳೆ

ಫಳಕುಸುಮಪ್ರವಾಳಹರಿತಾಂಕುರರಾಜಿಯೊಳಲ್ಲಿ ಜೀವಸಂ
ಕುಳಮಳವಲ್ಲದುಂಟದಱಿನಾಗದು ಪರ್ವದಿನಂಗಳೊಳ್ ಬ್ರತಂ ।
ಗಳನೊಡಗೂಡಿ ನಿಂದೆಮಗೆ ಮೆಟ್ಟಲಿಳೇಶ್ವರ ಕೇಳ್ದಮಾವಿದಂ
ತಿಳಿಯೆ ಗಣಾಧಿಪರ್ ಬೆಸೆಸೆ ರುಂದ್ರಜಿನೇಂದ್ರಸಭಾಂತರಾಳದೊಳ್ ॥ ೧೧

ವ॥ ಅದಱಿಂ ಪ್ರವಾಳಪತ್ರಪುಷ್ಪಾಂಕುರಂಗಳಿಂದಂ ಸಂಕೀರ್ಣಮಪ್ಪ ರಾ ಜಾಂಗಣಮಂ ಮೆಟ್ಟದೆ ಪೆಱತೊಂದು ಬಟ್ಟೆಯೊಳ್ ಬಂದೆವೆಂಬುದುಂ ನಾಭಿ ನಂದನನಂದನನವರ ದೃಢವ್ರತಕ್ಕೆ ಮೆಚ್ಚಿ ದಾನಸನ್ಮಾನಯೋಗ್ಯರಪ್ಪರೆಂ ದು ಪದ್ಮನಿಧಿಯೆಂಬ ನಿಧಿಯಂ ತರಿಸಿ ತಪನೀಯಸೂತ್ರದೊಳೇಕಾದ್ಯೇ ಕೋತ್ತರದಶಾಂತಂಬರಮವರವರ ನೆಲೆಗಳೊಳ್ ಬ್ರಹ್ಮಸೂತ್ರಾಭಿಧಾನಯ ಜ್ಞೋಪವೀತದಿಂ ಪವಿತ್ರಗಾತ್ರರ್ಮಾಡಿ,

ಏನಭಿಮತಮುಪವರ್ಗವರ್ಗದ
ನೇನುಂ ತೊದಳಿಲ್ಲದಿತ್ತು ಮನ್ನಿಸಿದಂ ಸ।
ನ್ಮಾನಪುರಸ್ಸರಮಂತುಟೆ
ನಾನಾವ್ರತಯುತರನಾರುಮೇಂ ಮನ್ನಿಸರೇ ॥ ೧೦

ಬ್ರತಹೀನರನನಿಬರುಮಂ
ಕ್ಷಿತಿಪತಿ ಬೇಱಿರಿಸಿ ಪೂಜ್ಯರಂ ಮನ್ನಿಸೆ ತ।
ದ್ವ್ರತಹೀನರುಮಂದಖಿಳ
ಬ್ರತಮಂ ಕೈಕೊಳ್ವ ಬಗೆಗೆ ಬಗೆಯಂ ತಂದರ್ । ೧೩

ವ॥ ಭರತೇಶ್ವರಂ ತಾನುಂ ಮುನ್ನೆ ಭಟ್ಟಾರಕರ ಸಮಕ್ಷದೊಳ್ ಸಮಾಕರ್ಣಿತೋಪಾಸಕಾಧ್ಯಯನನಪ್ಪುದಱಿಂದಮಾರೇನಂಬೇಡಿ ರವರ್ಗದನಿಕೊಟ್ಟು ಚಕ್ರವರ್ತಿಗಳ್ ಮಾಳ್ಪ ಕಲ್ಪವೃಕ್ಷಮುಂ ಮಹಾಮಂಡಳಿಕಪ್ರಮುಖಮಕುಟಬದ್ಧರ್ ಮಾಳ್ಪ ಚತುರ್ಮುಖಮುಂ ಅರ್ಧಮಂಡಳಿಕರ್ ಮಾಳ್ಪ ಸರ್ವತೋಭದ್ರಮೆಂಬ ಪೆಸರನೊಡನೆಯ ಮಹಾಮಹಮುಂ ಇಂದ್ರರ್ ಮಾಳ್ಪ ಇಂದ್ರಧ್ವಜಮುಂ ಸಮಸ್ತಭವ್ಯಜನನಿರ್ವರ್ತ್ಯಮಾನಾಷ್ಟಾಹ್ನಿಕಮುಂ ಚೈತ್ಯಾಲಯನಿರ್ಮಾಣನಿಮರ್ಾಪಣಶಾಸನಾರೋಪಿತಗ್ರಾಮಕ್ಷೇತ್ರವಿತರಣಮುಂ ಮುನಿಜನಪೂಜಾನ್ನದಾನಾದಿಕರಣಜಿನಗೃಹಜನಸತತೋಪನೀಯಮಾನಪಾದ್ಯಗಂಧಾಕ್ಷತಕುಸುಮಚರುಧೂಪದೀಪಫಲಾದ್ಯರ್ಚನಾತ್ಮಕಮಪ್ಪ ನಿತ್ಯಮಹಮುಂ ಶಾಂತಿಕಪೌಷ್ಟಿಕಾದಿಗಳುಮಂ ಬಗೆದು ಮಾಳ್ಪ ಬಗೆಯುಂ ಘೃತಕ್ಷೀರದಧಿನಾಳಿಕೇರತೋಯಾಮ್ರರಸೇಕ್ಷುರಸಗಂಧೋದಕಾದಿಗಳಿಂ ಮಾಡುವ ಸವನಮುಂ ಮೂಱುಂ ಪೊತ್ತುಮರ್ಚನಾಪುರಸ್ಸರಂ ಧೂಪೋದ್ಧಾರಂಗೆಯ್ವ ನಿರಂತರತ್ರಿಸಂಧ್ಯಾಸೇವೆಯುಮೆಂದೆಂಟುಂ ತೆಱದ ಪೂಜೆಯುಮನರ್ಚಪೂಜೆಯುಮಂ ಮನ್ನಿಸಿ ಅಸಿಮಷಿಕೃಷಿವಣಿಗ್ವಿದ್ಯಾಶಿಲ್ಪಕರ್ಮಂಗಳಿಂ ಶುದ್ಧವೃತ್ತಿಯಿಂದರ್ಥೋಪಾರ್ಜನಂಗೆಯ್ವ ವಾರ್ತೆಯುಂ ತ್ರಿಶುದ್ಧಿಯಿನನುಕಂಪವೆರಸು ನಮಸ್ತಪ್ರಾಣಿಗಳ್ಗೆ ಭಯಂಗುಡುವ ದಯಾತಿದ್ತಯುಂ ತ್ರಿಯಾಮಾತ್ರಿತಯಂಗಳಿಂದಮಾತ್ಮಸಮಾನಶ್ರಾವಕಾಗ್ರಣಿಗಳ್ಗೆ ಕನ್ಯಾಭೂಮಿಸುವರ್ಣಹಸ್ತ್ಯಶ್ವರಥರತ್ನಾದಿಗಳಂ ಕುಡುವ ಸಮದತ್ತಿಯುಂ ಪರಮತಪಶ್ಚರಣನಿರತಯತಿಸಮಿತಿಗೆಲ್ಲಂ ಪ್ರತಿಗ್ರಹಾದಿಪುರಸ್ಸರಂ ನಿರವದ್ಯಾ

ಹಾರಾದಿವಿತರಣರೂಪಪಾತ್ರದತ್ತಿಯುಂ ನಿಜಾನ್ವಯೋದ್ಧರಣಸಮರ್ಥನಪ್ಪ ಗ್ರತನೂಭವಂಗಾತ್ಮೀಯಧರ್ಮಧನಬಂಧುಗಳಂ ಸಮರ್ಪಿಪ ಸಕಳದತ್ತಿಯುಂ ಬೆರಸು ಚತುರ್ವಿಧಮಪ್ಪ ದತ್ತಿಯುಂ ಉಪಾಸಕಾಧ್ಯಯನಾಧ್ಯಾಪನಾನಂತರಂ ಸಕಳಶಾಸ್ತ್ರಂಗಳನೋದುವೋದಿಸುವ ನೆನೆವ ಬರೆವ ಪರಮಸ್ವಾಧ್ಯಾಯಮುಮಂ ಪಂಚಾಣುವ್ರತಾದಿಪ್ರವರ್ತನಸ್ವಭಾವಸಂಯಮಮುಮಂ ಅನಶನವೃತ್ತ್ಯಾದಿತಪೋನುಷ್ಠಾನಮುಮಂ ಬೆರಸಾರ್ಯಷಟ್ಕರ್ಮಂಗಳಂ ನಿಮಗಿವು ಕುಲಾಚಾರಂಗಳೆಂದಱಿಯೆ ಪೇೞ್ದು ಕೈಕೊಳಿಸಿ,

ಆಱುಂವೃತ್ತಿಗಳನಿವಂ
ಮೀಱಿದರಲ್ಲರ್ ದ್ವಿಜನ್ಮರೀವೃತ್ತಿಗಳಿಂ ।
ಬೇಱಾದರ್ ದ್ವಿಜರುಂತೇಂ
ಬೇಱುಂಟೆ ಮನುಷ್ಯಜಾತಿ ತಾನೊಂದೆ ವಲಂ ॥ ೧೪

ವ್ರತಸಂಸ್ಕಾರದಿನಾದರ್
ವಿತತಗುಣರ್ ಬ್ರಾಹ್ಮಣರ್ ಕ್ರಿಯಾಸಂತತಿಸಂ ।
ಯುತರುಚಿತಸತ್ಕ್ರಿಯಾವಿರ
ಹಿತನಾತಂ ನಾಮಧಾರಕಂ ದ್ವಿಜನಲ್ಲಂ ॥ ೧೫

ವ॥ ಎಂದವರನಾತ್ಮೀಯಾನ್ವಯೋಚಿತವ್ರತಂಗಳೊಳ್ ದೃಢವ್ರತರಂಮಾಡಿ ಮತ್ತಂ ದ್ವಾದಶಾಂಗಂಗಳೊಳ್ ಪೇೞ್ದ ದಾನಪ್ರೀತಿಸುಪ್ರೀತಿಧೃತಿಮೋದಪ್ರಿಯೋದ್ಭವನಾಮಕರ್ಮಬಹಿರ್ಯಾನನಿಷದ್ಯಾನಪ್ರಸಾದನವ್ಯುಷ್ಟಿಕೇಶವಾಪಲಿಪಿಸಂಖ್ಯಾನಸಂಗ್ರಹೋಪನಯನವ್ರತಚರ್ಯಾವ್ರತಾವತರಣವಿವಾಹವರ್ಣಲಾಭಕುಲಾಚಾರ್ಯಗೃಹೀತ್ವಪ್ರಶಾಂತಿಗೃಹತ್ಯಾಗದೀಕ್ಷಾಜಿನರೂಪಮೌನಾಧ್ಯಯನವೃತ್ತತೀರ್ಥಕೃದ್ಭಾವನಾಗುರುಸ್ಥಾನಾಭ್ಯುಪಗಮಗಣೋಪಗ್ರಹಸ್ವಗುಣಸ್ಥಾನಸಂಕ್ರಾಂತಿನಿಸ್ಸಂಗತ್ವಾತ್ಮಭಾವನಾಯೋಗನಿರ್ವಾಣಸಂಪ್ರಾಪ್ತಿಯೋಗನಿರ್ವಾಣಸಾಧನೇಂದ್ರೋಪಪಾತಾಭಿಷೇಕವಿಧಿಸುಖೋದಯೇಂದ್ರತ್ಯಾಗಾವತಾರಹಿರಣ್ಯಗರ್ಭೋತ್ಕೃಷ್ಟಜನ್ಮಮಂದರಾದ್ರೀಂದ್ರಾಭಿಷೇಕಗುರುಪೂಜೋಪಲಾಭಯುವರಾಜ್ಯಚಕ್ರಲಾಭದಿಗ್ವಿಜಯಚಕ್ರಾಭಿಷೇಕಸಾಮ್ರಾಜ್ಯಪರಿನಿಷ್ಕ್ರಮಣಯೋಗಸನ್ಮಹಾರ್ಹಂತ್ಯವಿಹಾರಯೋಗತ್ಯಾಗನಿರ್ವೃತಿಯೆಂಬಯ್ವತ್ತುಮೂಱು ಗರ್ಭಾದಿನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳಂ,

ಮೊದಲಿಂ ತಗುಳ್ದು ತುದಿವರ
ಮಿದರ್ಕಿದಾಚರಣಮಿದಱ ವಿಧಿಯಿಂತುಟು ತ।
ಪ್ಪದೆ ಮನ್ತ್ರಪೂರ್ವಕಂ ನೆಗ
ೞ್ಪುದೆಂದು ಚಕ್ರಾಧಿಪಂ ಮನಂಗೊಳೆ ಪೇೞ್ದಂ॥ ೧೬

ವ॥ ಮತ್ತಮವತಾರವೃತ್ತಿಲೋಭಗಣಗ್ರಹಣಪೂಜಾರಾಧ್ಯಪುಣ್ಯಯಜ್ಞಾದೃಢಚರ್ಯೋಪಯೋಗತ್ವಮೆಂಬೆಂಟುಂ ಬೆರಸುಂ ಪೂರ್ವೋಕ್ತೋಪನಯನಾದಿಚತ್ವಾರಿಂಶತ್ಕ್ರಿಯೆಗಳೊಡನೆನಾಲ್ವತ್ತೆಂಟುದೀಕ್ಷಾನ್ವಯಕ್ರಿಯೆಗಳುಮಂ ಸಜ್ಜಾತಿಸದ್ಗೃಹತ್ವಪರಿವ್ರಾಜ್ಯಪದಸುರೇಂದ್ರತ್ವಸಾಮ್ರಾಜ್ಯಪರಮಾರ್ಹಂತ್ಯಪರಿನಿರ್ವಾಣಮೆಂಬೇೞುಂ ಪರಮಸ್ಥಾನನಾಮಕ್ಕೃತಾನ್ವಯಕ್ರಿಯೆಗಳನತಿಬಾಲವಿದ್ಯಾಕುಲಾವಧಿವರ್ಣೋತ್ತಮತ್ವಪಾತ್ರತ್ವಸೃಷ್ಟ್ಯಧಿಕಾರಿವ್ಯವಹಾರದಂಡ್ಯತ್ವಮಾನಾರ್ಹತ್ವಪ್ರಜಾಸಂಬಂಧಾಂತರಮೆಂಬ ಪತ್ತುಮಧಿಕಾರಂಗಳುಮನಱಿಪಿ, ಮತ್ತಂ ಗರ್ಭಾನ್ವಯಾದಿಕ್ರಿಯೆಗಳನನುಷ್ಠಿಸುವಾಗಳ್ ವಿನೇಯಜನತಾಸತತಾರ್ಚಿತಜಿನಭವನದೊಳಮಾತ್ಮೀಯಗೃಹಾಭ್ಯಂತರಪ್ರಶಸ್ತಪ್ರದೇಶಂಗಳೊಳಂ ಪ್ರಶಸ್ತವೃತ್ತಿಕಾವಿರಚಿತೋನ್ನತವೇದಿತಳಾಷ್ಟಮಹಾಪ್ರಾತಿಹಾರ್ಯಸಮನ್ವಿತಜಗತ್ಪೂಜ್ಯಪೂಜಿತಾರ್ಹತ್ಪ್ರತಿಮೆಗಳ ನಿಱಿಸಿ ಯಥಾಶಕ್ತಿ ಸ್ನಪನಪೂಜಾಪುರಸ್ಸರಂ ಬಹುವಿಧಾರ್ಚನೆಗಳಿಂದರ್ಚಿಸಿ ಧರ್ಮಚಕ್ರಚ್ಛತ್ರತ್ರಿತಯಂಗಳ ಬಳಸಿಯುಮುಪಾಶ್ರಯಂಬಡೆಯೆ ನಿಱಿಸಿ ತೀರ್ಥಕರಗಣಧರಾನಗಾರಕೇವಳಿಗಳ ಪರಿನಿರ್ವಾಣಕ್ಷೇತ್ರದೊಳ್ ಶರೀರಸಂಸ್ಕಾರಾದಿಗಾರ್ಹಪತ್ಯದಕ್ಷಿಣಾಗ್ನ್ಯಾಹವನೀಯಮೆಂಬ ಪೆಸರಂ ಪಡೆದಗ್ನಿತ್ರಯಂಗಳೊಳಗರ್ಹದರ್ಚನಾಭಿಷೇಕಘೃತತಿಳಾಜ್ಯಾಹುತಿಗಳಿನುಪಾಸಕಾಧ್ಯಯನಗದಿತಸಮಸ್ತಪ್ರಕಾರಪಿಪೀಲಿಕಾಜಾತ್ಯಾದಿಮಂತ್ರಂಗಳಿಂ ಕ್ರಿಯಾನುಯುಕ್ತಮಾಗೆ ಪೇೞ್ದು ಪೂರ್ವಾಪರವಿದೇಹಂಗಳೊಳ್ ಅವ್ಯವಚ್ಛಿನ್ನರೂಪದಿಂ ಭರತೈರಾವತಂಗಳೊಳ್ ನಿಜೋಚಿತಕಾಲಕಾಲಾರಂಭಾವಸಾನರೂಪದಿಂ ನೆಗೞ್ದೀಕ್ರಿಯಾವಿಶೇಷಂಗಳನಿಲ್ಲಿಂದಿತ್ತಡೆಯುಡುಗದೆ ನಡೆಯಿಸುವುದು ಈಕ್ರಿಯೆಗಳನುಷ್ಠಾನಮಂತ್ರಶೂನ್ಯಂಗಳಾದಂದು,

ದೊರೆಕೊಳಿಸುವ ತತ್ಕ್ರಿಯೆಯೊಳ್
ಪರಿಣಮಿಸುವ ಫಳಮನಸ್ತ್ರಶಸ್ತ್ರತನುತ್ರೋ।

ತ್ಕರರಹಿತಂಗೆಸಹಾಯಂ
ಗರಾತಿಬಳಜಯಮನಳವು ದೊರೆಕೊಳಿಸುವವೋಲ್ ॥ ೧೭

ಅದಱಿಂದಂ ಸಕಳಾಗಮ
ವಿದರಿದನಿಂ ತಪ್ಪದಂತು ನೆಗೞಿಂ ನೆಗೞ್ದಿಂ ।
ದುದಿತೋದಿತಪರಮಸುಖಾ
ಸ್ಪದಕ್ಕೆ ಬಗೆದಂತೆ ನೀಮೆ ಮೊದಲಿಗರಪ್ಪಿರ್ ॥ ೧೮

ಇದನಾದಿಪ್ರಭವಂ ಭವಭ್ರಮಣದುಃಖೋಗ್ರಾಗ್ನಿಯೊಳ್ ಮಗ್ನದ
ಪ್ಪದು ಜೀವಂಗಳನೆಂಬಿನಂ ಬಳಸದೀಮಿಥ್ಯಾತ್ವಬಂಧಂ ಕಳ ।
ಲ್ದದಿರುತ್ತಿರ್ಪಿನೆಗಂ ಚತುರ್ದಶಗುಣಸ್ಥಾನಂಗಳಂ ನಂಬಿ ಪೊ
ರ್ದಿದವರ್ ಪೊರ್ದಿದರಲ್ತೆ ಮುಕ್ತಿವನಿತಾಕಾಂಚೀಗುಣಸ್ಥಾನಮಂ ॥ ೧೯

ಪರಮಬ್ರಹ್ಮತನೂಭವರ್ ದ್ವಿಜವರರ್ ವರ್ಣೋತ್ತಮರ್ ಲೋಕಪೂ
ಜ್ಯರಿಳಾವಲ್ಲಭಮಾನ್ಯರುನ್ನತಗುಣರ್ ಚಾರಿತ್ರಶುದ್ಧರ್ ಧರಾ ।
ಮರರೀಬ್ರಾಹ್ಮಣರೆಂದು ಕೊಂಡುಕೊನೆದಾಷಟ್ಖಂಡಭೂಮಂಡಲೇ
ಶ್ವರನೋರಂತೆ ನೆಗೞ್ಚೆ ಕೂಡೆ ನೆಗೞ್ದತ್ತತ್ತಂ ದ್ವಿಜನ್ಮಾನ್ವಯಂ ॥ ೨೦

ಎಂದಿಂತು ನಾಭಿನಂದನ
ನಂದನನಾನಂದದಿಂದಮಂದವರಂ ತ ।
ನ್ನೆಂದಂದದಿಂದೆ ನಡೆಯಿಸಿ
ದಂ ದಾನಂಗುಡುವದೊಂದಲಂಪಿನ ಪೆಂಪಿಂ ॥ ೨೧

ವ॥ ಅಂತು ಭರತೇಶ್ವರಂ ಭರತಕ್ಷೇತ್ರದೊಳ್ ತಾನೆ ಮಾಡಿದ ತನ್ನ ಕೊಂಡಾಟದಿನತಿಪ್ರಸಿದ್ಧಮಾದ ವಿಪ್ರಸಂತತಿ ಕೆಲವುಕಾಲಂ ನಡೆವನ್ನೆಗ ಮೊಂದುದಿವಸಂ ತ್ರಿಯಾಮಾವಿರಾಮದೊಳ್ ಆಶ್ಚರ್ಯಭೂತಂಗಳುಂ ದೂರಾರಿಷ್ಟಫಲಸೂಚಕಂಗಳುಮಪ್ಪ ಸ್ವಪ್ನಂಗಳಂ ಕಂಡು ಬೆರ್ಚಿದಂತೆದುರ್ವಿಪಾಗಳಿನ್ನ ಕಂಡಕನಸುಗಳೀಯುಗದ ಕಡೆಯೊಳ್ ಪ್ರಜೆಗಳ್ಗೆ ವಿವಿಧೋಪದ್ರವಸೂಚಕಂಗಳಾಗಿ ತೋರ್ಕುಮೆಂದನುಮಾನಿದಿನಸ್ಪಷ್ಟರೂಪದಿನಱಿದು ಭಗವದರ್ಹತ್ಸಮೀಪಕ್ಕೆ ಪೋಗಿ ಯುಗಪತ್ಸಕಳಪದಾರ್ಥಯಥಾರ್ಥಾವಭಾಸಿಯಪ್ಪ ಕೇವಲಜ್ಞಾನದಿಂ ವಿಶೇಷನಿಶ್ಚಯಮಂ ಮಾಡುವನೆಂದು ಸಕ

ಳಪ್ರಾಭಾತಿಕಕ್ರಿಯೆಯುಂ ನಿರ್ವರ್ತಿಸಿ ಮುಕುಟಬದ್ಧಪರಿವೃತನಾಗಿ ಬಂದು ಕೈಳಾಸಗಿರೀಂದ್ರಸ್ಥಿತಸಮವಸೃತಿಯಂ ಸಂಸೃತಿಲತಾವಿಚ್ಛೇದಿಯಂ ಪೊಕ್ಕು ಗಂಧಕುಟಿಯಂ ಮೂಱುಸೂೞು ಬಲವಂದು ದೇವದಾನವಗಂಧರ್ವವಿದ್ಯಾಧರಾರಾಧ್ಯನಂ ವೃಷಭನಾಥನನರ್ಥಾನುಗತಾಷ್ಟೋತ್ತರಸಹಸ್ರನಾಮಾಂಕಿತಸ್ತುತಿಗಳಿಂ ಸ್ತುತಿಯಿಸಿ ದಿವ್ಯಾರ್ಚನೆಗಳಿಂದರ್ಚಿಸಿ ಗಣಧರಾದಿಯತಿಸಮಿತಿಗೆಱಗಿ ನಿಜೋಚಿತಸ್ಥಾನದೊಳ್ ಕುಳ್ಳಿರ್ದಾಗಳ್,

ಪರಿಣಾಮಶುದ್ಧಿ ದೊರೆಕೊಳೆ
ಪುರುಪರಮೇಶ್ವರಪದಾಬ್ಜಭಕ್ತಿಯಭರದಿಂ ।
ಭರತಂಗೆ ಶಾಸ್ತ್ರಲಕ್ಷಣ
ಪರಿಕರದಿಂ ತೊಟ್ಟನವಧಿ ಪುಟ್ಟಿತ್ತಾಗಳ್ ॥ ೧೧

ವ॥ ಅಂತುತ್ಪನ್ನಾವಧಿಬೋಧಂ, ಧರ್ಮಾಮೃತಾಸ್ವಾದನಪರನಾಗಿ ಕಿಱಿದು ಪೊತ್ತಿರ್ದು ನಿಜಮನೋಗತಕಾರ್ಯವಿಜ್ಞಾಪನಮುಖರಮುಖನಾಗಿ,

ಆದಿಬ್ರಹ್ಮನೆನಲ್ ಮೊದ
ಲಾದುದಱಿಂ ದೇವ ಮಾಡ್ಪ ನೀನಿರ್ದಂತಾ ।
ನಾದ ಮರುಳ್ತನದಿಂದು
ತ್ಪಾದಿಸಿದೆಂ ಬ್ರತಸಮೇತವಿಪ್ರಾನ್ವಯಮಂ ॥ ೧೨

ಗುಣಭೂಮಿವಿಭಾಗದೊಳಾ
ದೆಣಿಕೆಯೊಳೊಂದಾದಿಯಾಗೆ ಪನ್ನೊಂದುವರಂ ।
ಗುಣವದ್ವ್ರತಚಿಹ್ನಂ ಗುಣ
ಮಣಿಭೂಷಣ ಸೂತ್ರಮಮರ್ದುದವರ್ಗೆನ್ನಿಂದಂ ॥ ೧೩

ಇದಱೊಳ್ ಗುಣಮೋ ದೋಷಮೊ
ಪೊದಱ್ದು ನಿಂದಪುದಯುಕ್ತಮೋ ಯುಕ್ತಮೊ ಪೇ ।
ೞಿದು ಹಾನಿಯೊ ವೃದ್ಧಿಯೊ ತಾ
ನದಾವುದಂ ಪೊರ್ದಿ ನಿಲ್ಕುಮಘವಿಘಟಪಟೂ ॥ ೧೪

ವ॥ ಅದಲ್ಲದೆಯುಮಿಂದಿನ ದಿನಂ ಬೆಳಗಪ್ಪ ಜಾಮದೊಳ್ ಪದಿನಾಱು ಕನಸುಗಳಂ ಕಂಡೆನಾಕನಸುಗಳನಿಷ್ಟಫಲಸೂಚಕಂಗಳೆಂಬುದಂ ಸಾಮಾ

ನ್ಯದಿನುಪಲಕ್ಷಿಸಿದೆನವಱ ಫಲಮುಮನೆನಗಱಿಯೆ ಬೆಸಸಿವೆಂದವಧಿಜ್ಞಾನ ದಿಂ ತಾನಾಕನಸುಗಳನಱಿವನಾಗಿಯುಂ ಸಭಾಜನಕ್ಕವಂಱಿಪಲೆಂದು ಬೆಸ ಗೊಳ್ವುದುಂ ಪ್ರಶ್ನಾನುಕ್ರಮದಿಂ ತ್ರಿಲೋಕಗುರುವಿಂತೆಂದು ಬೆಸಸಿದಂ ನೀನಾದ್ವಿಜನ್ಮಜಾತಿಯಂ ಬಳ್ಳಿತಂವಾಡಿದೆಯಾದೊಡಂ,

ಧರೆಯೊಳ್ ಧರ್ಮಾರ್ಥದಿಂ ನೀಂ ಸೃಜಿಯಿಸಿ ನೆಗೞ್ದೀವಿಪ್ರಸಂತಾನದೊಂದಾ
ಚರಣಂ ನೀನೆಂದ ಪಾಂಗಿಂ ಕೃತಯುಗದೊಳೆ ದಲ್ಸಲ್ಗುಮಿನ್ನತ್ತ ನಷ್ಟಾ ।
ಚರಣಂ ಸನ್ಮಾರ್ಗದೊಳ್ ಮಚ್ಚರಿಸಿ ಕಲಿಯುಗಾಭ್ಯರ್ಣದೊಳ್ ದ್ರವ್ಯಲೋಭಾ
ತುರರುನ್ಮಾರ್ಗೋಪದೇಶೋದ್ಯತಮತಿಗಳತಿಕ್ರೂರರಪ್ಪರ್ ದ್ವಿಜನ್ಮರ್ ॥

ಮಧುಮದ್ಯಮಾಂಸಲೋಲುಪ
ರಧಾರ್ಮಿಕರ್ ಪರವಧೂರತಿಪ್ರಿಯರಧಮರ್ ।
ವಧನಿರತರ್ ಪಾಪಿಗಳನ್ಯ
ತಧನರ್ ದ್ವಿಜರಿನ್ನರಪ್ಪರಾಕಲಿಯುಗದೊಳ್ ॥ ೨೫

ವ॥ ಆದೊಡವಿಗಳವರ್ ಸದಾಚಾರರಪ್ಪುದಱಿಂ ಅವರನಾವಾಜ್ಞೆಯೊಳೆ ನಡೆಯಲೀಯದೆ ಮಾಡಿ ಕಿಡಿಸಿದೊಡೆ ನಿನಗೆ ಪಿರಿದುಂ ದೋಷಕ್ಕುಮೆಂದು ಪೇೞ್ದು ಮತ್ತಮಾತನ ಕಂಡ ಷೋಡಶಸ್ವಪ್ನಸೂಚಿತಫಲಂಗಳನಿಂತೆಂದು ಬೆಸಸಿದರ್,

ಭರತಮಹೀತಳಮನಳಂ
ಕರಿಸಿರ್ದಿರ್ಪತ್ತು ನಾಲ್ಕು ಕೇಸರಿಗಳನಾ ।
ದರದಿಂ ಕಂಡುದಱಿಂದನಿ
ಬರೆ ತೀರ್ಥಕರರ್ಕಳಪ್ಪರವರ ವಿಹಾರಂ ॥ ೨೬

ಧರೆಯೊಳ್ ಸಲೆ ಪಾಷಂಡಿಗ
ಳರೆಬರ್ ಪುಟ್ಟಿಯುಮಡಂಗುವರ್ ಮತ್ತಂ ಕೇ ।
ಸರಿಗಳ ಬಳಸಿಯುಮನುಕೂ
ಲರೂಪದಾಡುವ ಮೃಗಂಗಳಂ ಕಂಡುದಱಿಂ ॥ ೨೭

ಪರಮಜಿನತೀರ್ಥರೊಳ್ ಪಲ
ಬರುಮಾಗಿಯುಮೇಕಲಿಂಗಿಗಳ್ ವಿಕೃತಿಗಳಂ ।

ವಿರಹಿತರಪ್ಪರ್ ಮದಸಿಂ
ಧುರಭಾರಮನಾನಲಾಱದಳ್ವಿಂ ಬೆನ್ನಂ ‖ ೩೭

ನೆಳದಳದು ನಡೆವ ಹಯದಳಿ
ಯುಳವಂ ಕಂಡುದಱಿನಧಿಕಬಲಮುನಿಪಥ್ವೃತಾ ।
ತುಳಗುಣಭಾರಮನಾಂಪನಿ
ತಳವಿಲ್ಲದೆ ಕಿಡುವರಲ್ತೆ ದುಷ್ಷಮಯತಿಗಳ್ ‖ ೩೮

ನೆರೆದೊಂದಿನಿಂದ ಶಾಕ್ಯರ
ವರಯೂಥಮನವನಿನಾಥ ಕಂಡುದಱಿಂದೊ ।
ರ್ವರೆ ವಿಹರಿಪ್ಪುದಂ ಬಿಸಟಂ
ಬರಾಂಬರರ್ ತಮ್ಮ ಸಮುದಯಂಬೆಱಸಿರ್ಪರ್ ‖ ೩೯

ಮುಸುಱಿದ ಮುಗಿಲ್ಗಳಿಂದಣ
ಮೆಸೆಯದೆ ನಿಂದರ್ಕಬಿಂಬಮಂ ಕಂಡುದಱಿಂ ।
ದೆಸೆಯದು ದುಷ್ಷಮಕಾಲದೊ
ಳ ಸದೃಶಕೈವಲ್ಯಬೋಧದಿನಕರಬಿಂಬಂ ‖ ೪೦

ಕಳಿಕಾಂಕುರಕುಸುಮೋತ್ಕರ
ಫಳಪಲ್ಲವರಹಿತಮಹಿಜಮಂ ಕಂಡುದಱಿಂ ।
ದಳವಿಲ್ಲದನರನಾರೀ
ಕುಳಮನುಪಮಸತ್ಯಶೌಚವಿರಹಿತಮಕ್ಕುಂ ‖ ೪೧

ಹರಿತಾಂಕುರಪಲ್ಲವಪ
ತ್ರರಾಜಿಯಂ ಬಿಸುಟು ಶುಷ್ಕಪತ್ರಂಗಳನಾ ।
ದರದಿಂ ಮೇವಜಕುಳಮಂ
ದೊರೆಕೊಳೆ ನೀಂ ಸ್ವಪ್ನಕಾಲದೊಳ್ ಕಂಡುದಱಿಂ ‖ ೪೨

ಸಮಯಿಗಳುಂ ಚಾತುರ್ವ
ರ್ಣ್ಯಮುಮುಚಿತಚರಿತ್ರಮಂ ಬಿಸುಟ್ಟಿದಂ ಪ್ರೊ ।
ಲ್ಲಮೆಯೊಳ್ ಸಲೆ ನಡೆವರ್ ದು
ಷ್ಷಮಮೆಂಬಯ್ದನೆಯ ಕಾಲದೊಳ್ ಭರತನೃಪಾ ‖ ೪೩

ಕರಿಪತಿಯುನೇಱಿ ಕೋಡಗ
ಮಿರೆ ಕಂಡುದಱಿಂದಮಾದಿಭೂಪರ್ ಕಿಡೆ ಬೇ ।
ಡರುಮಕುಲೀನರುಮತಿದು
ಶ್ಚರಿತ್ರರುಂ ಭೂಪರಪ್ಪರನ್ಯಾಯಪರರ್ ॥ ೩೪

ಕಾಗೆಗಳಿಂದಂ ಬಳಸಿದ
ಗೂಗೆಗಳಂ ಕಂಡೆಯಪ್ಪ ಕಾರಣದಿಂ ಜೈ ।
ನಾಗಮವಿದರಂ ಸಾರದೆ
ಪೋಗಿ ಕುಲಿಂಗಿಗಳನೀಜನಂ ಸೇವಿಸುಗುಂ ॥ ೩೫

ಆಡುವ ಮರುಳ್ಗಳಂ ನಡೆ
ನೋಡಿದುದಱಿನಿಂತು ಕನಸಿನೊಳ್ ಮಕ್ಕಳ್ಗಂ ।
ಕೂಡೆ ಪೆಸರಿಟ್ಟು ಸಲೆ ಕೊಂ
ಡಾಡಿದಪರ್ ವ್ಯಂತರರ್ಕಳಂ ಜಡಮತಿಗಳ್ ॥ ೩೬

ಕಡೆವಿಡಿದು ಬಳಸಿ ನೀರಿರೆ
ನಡುಬತ್ತಿದ ಕೆಱೆಯನಿಂತು ಕಂಡುದಱಿಂದಂ ।
ನಡುನಾಡೊಳಱಂ ನೆಲಸದೆ
ಕಡೆಯೊಳ್ ನೆಲೆಗೊಳ್ಗುಮಿಲ್ಲಿ ಸಂದೆಯಮುಂಟೇ ॥ ೩೭

ಧೂಳೀಧೂಸರವರರ
ತ್ನಾಳಿಗಳಂ ಕಂಡ ದೂಸಱಿಂದಂ ಧರಣೀ ।
ಪಾಳಕಮುನಿಪರ್ ಪಂಚಮ
ಕಾಳದೊಳಣಮಾಗರಲ್ತೆ ಋದ್ಧಿಪ್ರಾಪ್ತರ್ ॥ ೩೮

ಕೊರಲೊಳ್ ಕಟ್ಟಿದ ಮಾಲೆಯು
ಸಿರಿಖಂಡದ ತಳ್ಕುವೆರಸು ಬಿಡುನಾಯ್ಬೆರಸಾ ।
ದರದಿಂದನರ್ಘ್ಯಮಣಿವಿ
ಷ್ಟರದೊಳ್ ಕಳ್ಕಿರ್ದ ಸರುಗನುಣೆ ಕಂಡುದಱಿಂ ॥ ೩೯

ವ್ರತಹೀನರ್ ಸನ್ಮಾರ್ಗ
ಪ್ರತಿಕೂಲರ್ ವ್ಯಸನವಶಗತರ್ ಪಾಪಿಗಳಂ ।

ತತ್ರಿಕಷ್ಟರಪ್ಪರವನಿಯೊ
ಳತಿಥಿಯೊಳನ್ನನ್ನದಾನವುಂ ಕಃ ಸುವತೆಯೊಳ್ ॥ ೪೦

ತರುಣವೃಷಂ ಕೆಲೆದು ತೊಳ
ಲ್ತರೆ ಕಂಡುದಱಿಂದೆ ಜೈನದೀಕ್ಷೆಗೆ ಪೊಯ್ಯಂ ।
ತರುಣಜನಂಗಳ್ ತರ್ಪರ್
ಪರಿಣತವಯಸರ್ಕಳಪ್ಪವರ್ ಪೊಯ್ದಾರರ್ ॥ ೪೧

ಪರಿವೇಷಂಗೊಂಡಾಖರ
ಕರನಂ ಕಂಡುದಱಿನಂದು ಮುನಿನಿಕರಕ್ಕಾ ।
ದರೆದವಧಿಮನಃಪರ್ಯ್ಯಯ
ಮೆರಡುಮಣಂ ಪುಟ್ಟವೆಂದು ನಂಬು ನರೇಂದ್ರಾ ೪೨

ಪುದಿದ ತಱಗೆಲೆಗಳಂ ಕಂ
ಡುದಱಿಂದಂ ಧಾನ್ಯಸಮಿತಿ ನೀರಸಮಕ್ಕುಂ ।
ತುದಿಯೊಳ್ ಮನುಜಪ್ರತತಿಗ
ಮದೆ ದಲ್ ಭೋಗೋಪಭೋಗಕಾರಣಮಕ್ಕುಂ ॥ ೪೩

ಇವು ದೂರಫಲಂಗಳ್ ಸ್ವ
ಪ್ನವಿಶೇಷಂಗಳ್ ತನೂಜ ಕೊಕ್ಕರಿಸದಿರಿ ।
ನ್ನಿವಱಿಡೆಗೆ ನಿನಗೆ ಸಲೆ ಮಾ
ಳ್ಕೆ ವಿಶ್ವವಿಘ್ನೋಪಶಾಂತಿಯುಂ ಜಿನಧರ್ಮ್ಮಂ ॥ ೪೪

ವ॥ ಎಂಬುದುಂ ಭರತೇಶ್ವರಂ ಪ್ರಸನ್ನಮನನಾಗಿ ವೃಷಭಸೇನಾದ್ಯನು ಪಮಪರ್ಯ್ಯಂತಗಣಧರದೇವಚರಿತಾಕರ್ಣ್ಣನಮನೆ ತನಗೆ ಕರ್ಣ್ಣಪೂರಂಮಾ ಡಿ ಭಗವತ್ಸಿಂಹಾಸನರತ್ನರಶ್ಮಿಚ್ಛಟಾತಿಪೂತಭೂತಳಕ್ಕೆ,

ಕುಸುಮೋಪಹಾರಮೆಸೆವಂ
ತೆಸೆವಿನಮಾನಮ್ರಮೌಳಿಶೇಖರವಿಗಳ ।
ತ್ಕುಸುಮೋತ್ಕರಮರ್ಘ್ಯಯಶಃ
ಕ್ಕುಸುಮಿತದಿಗ್ಲತಿಕನೆಱಗಿದಂ ಭರತೇಶಂ ॥ ೪೫

ವ॥ ಅಂತು ಪುರುಪರಮೇಶ್ವರಂಗೆಱಗಿ ಬಂದಯೋಧ್ಯಾಪುರಮಂ ಪೊಕ್ಕು ದುಸ್ಸ್ವಪ್ನದರ್ಶನಕರ್ಷಣಾರ್ಥಮಾಗಿ ಕಲ್ಪವೃಕ್ಷಮಹಾಮಹಿಮಾಪುರಸ್ಸರಂ ಭಗವದರ್ಹದಭಿಷೇಕಮುನಿಪೂಜನಸತ್ಪಾತ್ರದಾನಪ್ರಾಣಿಯುಪ್ರೀಣನಮಾಹಾರವಿತರಣಗೋದೋಹಪ್ಲವಾವನೀತಳಸಂತರ್ಪಣಾದಿಶಾಂತಿಕಕ್ರಿಯೆಗಳಂ ನೆಗಱ್ದು,

ವಿವಿಧದ್ವೀಪಂಗಳೊಳ್ ಮಂದರಗಿರಿತಟದೊಳ್ ಜ್ಯೋತಿರಾವಾಸದೊಳ್ ದೇ
ವವಿಮಾನಾನೀಕದೊಳ್ ಶೋಭಿಸುವ ಜಿನಗೃಹವ್ರಾತಮಂ ಗೆಲ್ದು ರತ್ನ ।
ಚ್ಛವಿಯಿಂ ದಿಗ್ಭಿತ್ತಿಯಂ ಚಿತ್ರಿಸುವ ಜಿನನಿಕೇತಂಗಳಂ ಮಾಡಿಸುತ್ತಂ
ದಿವಿಜೇಂದ್ರಸ್ತುತ್ಯನಾದಂ ಸುಕವಿಜನಮನೋಮಾನಸೋತ್ತಂಸಹಂಸಂ ॥

ವ॥ ಅಂತಯೋಧ್ಯಾಪುರೋಪಾಂತಕಾಂತಪ್ರದೇಶಂಗಳೊಳಂ ಕೈಲಾಸೋದಗ್ರಕೂಟಂಗಳೊಳಂ ಷಟ್ಖಂಡಮಂಡಳಪ್ರಸಿದ್ಧರಾಜಧಾನಿಗಳೊಳಂ,

ದೆಸೆಗಳ್ ಪೆರ್ಚಿದೆ ಮೊಟ್ಟನಾದುವಗಲಕ್ಕೆಂಬನ್ನೆಗಂ ನೀಳಮಾ
ಗಸಮೊಳ್ ಕಾಳಸೆಗೊಂಡುದೆಂಬಿನಗಮದ್ರೀಂದ್ರಂಗಳಂ ತಂದು ಕೀ ।
ಲಿಸಿದಂ ನಿಶ್ಚಳಮಪ್ಪಿನಂ ವಸುಧೆಗಾಕಲ್ಪಾಂತಮೆಂಬಂತು ಮಾ
ಡಿಸಿದಂ ಜೈನಗೃಹಂಗಳಂ ಪಲವುಮಂ ಸಂಸಾರಸಾರೋದಯಂ ॥ ೪೩

ಗ॥ ಇದು ದೇವೇಂದ್ರಮುನೀಂದ್ರವಂದ್ಯಪರಮಜಿನೇಂದ್ರಮುಖಚಂದ್ರ
ವಾಕ್ಚಂದ್ರಿಕಾಪ್ರಸರಪ್ರಸಾದೋದೀರ್ಣಸೂಕ್ತಿಕಲ್ಲೋಲ
ಮಾಲಾಕೀರ್ಣಕವಿತಾಗುಣಾರ್ಣವ
ಪ್ರಣೀತಮಪ್ಪಾದಿಪುರಾಣದೊಳ್
ಉಪಾಸಕಾಧ್ಯಯನವರ್ಣನಂನಾಮ
ಪಂಚದಶಾಶ್ವಾಸಂ
ಸಂಪೂರ್ಣಂ.

ಶ್ರೀರಮಣೀನಿಳಯಜಿನಾ
ಗಾರಂಗಳ್ ತನ್ನ ಜನದವೊಲ್ ವಸುಧೆಗಳಂ ।
ಕಾರಂಗಳಾಗೆ ಪೂರ್ಣಮ
ನೋರಥನಾದಂ ಸರಸ್ವತೀಮಣಿಹಾರಂ ॥ ೧

ವ॥ ಅಂತು ತನ್ನ ಮಾಡಿಸಿದ ಚೈತ್ಯಾಲಯಂಗಳೊಳ್ ಆದಿಭಟ್ಟಾರಕಾದಿಯಾಗೆ ಭವಿಷ್ಯತ್ತೀರ್ಥಕರಪ್ರತಿಕೃತಿಗಳಂ ಪಂಚರತ್ನಮಯಂಗಳಂ ಮಾಡಿಸಿ ಮಾಣಿಕ್ಯದೇವರೆಂದು ಕೊಂಡಾಡಿ ತತ್ಪೂಜಾಕರಣಪುಣ್ಯವಾಸರಂಗಳೊಳ್ ಉಪವಾಸನಿರತನಪರಿಮಿತಾಜ್ಯಕ್ಷೀರದಧಿನಾಳಿಕೇರಸಹಕಾರಪೂಗೀಫಲಪುಂಡ್ರೇಕ್ಷುರಸಂಗಳಿಂದಂ ಗೋಶೀರ್ಷಚಂದನಕರ್ಪೂರಪರಿಮಳಸುರಭಿಗಂಧೋದಕಗಳಿಂದಮಭಿಷೇಕಂಗೆಯ್ದು,
ಫಳದೊಳ್ ದೇವೇಂದ್ರನುದ್ಯಾನದ ವಿವಿಧಫಲಂ ಪೂಗಳೊಳ್ ಕಲ್ಪವೃಕ್ಷಂಗಳ ಪೂಗಳ್ ದೀಪದೊಳ್ ಪನ್ನಗಪತಿಯ ಫಣಾರತ್ನದೀಪಂ ವಿತಾನಾ ।
ವಳಿಯೊಳ್ ದಿವ್ಯಂ ವಿತಾನಂ ತುಱುಗಿದುವಮರೇಂದ್ರಾರ್ಚನಕ್ಕಿಂತಿದಾಯ್ತ
ಗ್ಗಳಮೆಂಬಂತಾಗೆ ದಿವ್ಯಾರ್ಚನೆಯೊಳೆ ಮೆಱೆದಂ ಭಕ್ತಿಯಂ ಚಕ್ರನಾಥಂ

ವ॥ ಅಂತರ್ಚಿಸಿ ನಿರ್ಭರಪ್ರಣಾಮಾಂಜಲಿಪ್ರಣಯಯುಕ್ತತೋತ್ತಮಾಂಗನಾಗಿ,

ಕಮಳಾಳಂಕೃತಮಪ್ಪ ಹೇಮಕಮಳಂ ಮಾಣಿಕ್ಯಭಟ್ಟಾರಕ
ದ್ಯುಮಣಿಜ್ಯೋತಿಯಿನೊಯ್ಯನುಳ್ಳಲರ್ದವೊಲ್ ಚೆಲ್ವೆಂಬಿನಂ ಭವ್ಯಹೃ ।
ತ್ಕಮಳಕ್ಕಂ ಮುದಮಂ ಜಪಾಪ್ರಸವರಕ್ತಾಶೋಕಬಂಧೂಕಶೋ
ಣಮಣಿಜ್ಯೋತಿಗಳೆಕ್ಕೆಯಿಂ ಕುಡೆ ಜಯಂ ಭದ್ರಂ ಶುಭಂ ಮಂಗಳಂ ॥ ೩
ಕಣಿ ರತ್ನತ್ರಿತಯಕ್ಕಿದೇಂ ಪಿರಿದೆನಲ್ ರತ್ನಾಕರಂ ರತ್ನತೋ
ರಣರತ್ನಾಸನರತ್ನ ವಿಭ್ರಮಣರತ್ನಾಶೋಕರತ್ನಪ್ರಭಾ ।
ಮಣಿರತ್ನಾತಪವಾರಣತ್ರಿತಯದಿಂ ತ್ರೈಲೋಕ್ಯಸಾಮ್ರಾಜ್ಯಭೂ
ಷಣಮಾಣಿಕ್ಯಜಿನೇಂದ್ರಬಿಂಬಮೆ ಜಯಂ ಭದ್ರಂ ಶುಭಂ ಮಂಗಳಂ ॥ ೪
ಪರಿಪೂರ್ಣೋಜ್ಜ್ವಲಚಂದ್ರಬಿಂಬರುಚಿಯಿಂ ಚಂದ್ರಪ್ರಭಾಪುಷ್ಪದಂ
ತರೆನಲ್ ಗಾರುಡನೀಲಶೋಣಮಣಿಹೇಮಚ್ಛಾಯೆಯಿಂದಿರ್ಪತಿ ।

ರ್ಬರೆನಲ್ ಸಂದೊಡಮೇಕರೂಪಮೆ ಜಗಕ್ಕಾಶ್ಚರ್ಯಮಂ ಪುಟ್ಟಿಸು
ತ್ತಿರೆ ಮಾಣಿಕ್ಯಜಿನೇಂದ್ರಬಿಂಬಮೆ ಜಯಂ ಭದ್ರಂ ಶುಭಂ ಮಂಗಳಂ ॥ ೫

ಸ್ಫುರಿತೋದ್ಯತ್ಕನಕಪ್ರಭಾಪ್ರಸರದಿಂ ಪೀತಾಂಬರಂ ಪದ್ಮವಿ
ಷ್ಟರದಿಂ ಪಂಕಜವಿಷ್ಟರಂ ನತವಿನೇಯವ್ರಾತಚೇತಸ್ತಮೋ ।
ಹರನಾಗಿರ್ದಱಿಂ ಹರಂ ಭವಹರಂ ಮಾಣಿಕ್ಯದೇವಂ ವಸುಂ
ಧರೆಗಿಂತೊರ್ಬನೆ ದೇವನಾಗಿರೆ ಜಯಂ ಭದ್ರಂ ಶುಭಂ ಮಂಗಳಂ ॥ ೬

ವಿಪಿನೋಲ್ಲಂಘನಸಿಂಧುಯಾನನಗಕೂಟಾರೋಹಣಕ್ಲೇಶಮಂ
ತ್ರಪದಧ್ಯಾನಬಿಳಪ್ರವೇಶರಸವಾದಾಯಾಸದೊಳ್ ಬಾರ್ತೆ ತೀ ।
ರ್ದಪುದೇ ಪೊರ್ದಲೊಡಂ ವಿನೇಯಜನಸಂಘಾತಕ್ಕೆ ಮಾಣಿಕ್ಯದೇ
ವಪದಾಂಭೋಜವರಪ್ರಸಾದಮೆ ಜಯಂ ಭದ್ರಂ ಶುಭಂ ಮಂಗಳಂ ॥ ೭

ಸಕಳಕ್ಷ್ಮಾಚರಖೇಚರಾಂಚಿತಮಹಾಮಾಣಿಕ್ಯಗಾಣಿಕ್ಯಹಾ
ಸ್ತಿಕರತ್ನೋರ್ಜಿತಚಕ್ರವರ್ತಿವಿಭವಂ ಮುನ್ನಂ ಬೞಿಕ್ಕೈಂದ್ರಮೈ ।
ಹಿಕಪಾರತ್ರಿಕಭೋಗಮಂ ಕುಡುವಿನಂ ಮಾಣಿಕ್ಯಭಟ್ಟಾರಕಾಂ
ತಿಕಮಂ ಸಾರೆ ವಿನೇಯರಾಜಿಗೆ ಜಯಂ ಭದ್ರಂ ಶುಭಂ ಮಂಗಳಂ ॥ ೮

ಕುಪಿತಾನೇಕಪದಂದಶೂಕದವದೈತ್ಯಾರಾತಿಚೋರಾಂಧಕಾ
ರಪತದ್ವಜ್ರವಿಷಾಭಿಚಾರಿಕಜರಾತಂಕಾದಿಭೇದಂಗಳ ।
ಪ್ಪುಪಸರ್ಗಂಗಳ ನೋವನಾವೆಡೆಯೊಳಂ ಕೈಗಾವ ಮಾಣಿಕ್ಯದೇ
ವಪದಾಂಭೋಜಮೆ ಭವ್ಯಕೋಟಿಗೆ ಜಯಂ ಭದ್ರಂ ಶುಭಂ ಮಂಗಳಂ ॥ ೯

ಸಿತದೂರ್ವಾಂಕುರಮಾತುಲುಂಗನಳಿನೀಭೃಂಗಾರಗೋರೋಚನಾ
ಕ್ಷತದಧ್ಯಾದಿವಿಡಂಬಮಂಗಳದೊಳೇಂ ಸಂಸಾರಮಂ ದಾಂಟುವೂ ।
ರ್ಜಿತಪುಣ್ಯಂಗಪವರ್ಗಲಕ್ಷ್ಮಿವರೆಗಂ ಸಂಸಾರಸಾರೋದಯೋ
ದಿತಮಾಣಿಕ್ಯಜಿನಸ್ತವಾವಳಿ ಜಯಂ ಭದ್ರಂ ಶುಭಂ ಮಂಗಳಂ ॥ ೧೦

ನಮೋವೃಷಭನಾಥಾಯ ತಸ್ಮೈ ವಿಸ್ಮಯಕಾರಿಣೇ
ಪುರಾಣೋಪ್ಯದ್ವಿತೀಯಸ್ಸ್ವ ಯುಗಭಾರಂ ಬಭಾರ ಯಃ ॥ ೧೧

ನಮೋಽಜಿತಾಯ ನಾಕಸ್ತ್ರೀನೇತ್ರೋತ್ಪಲವನೇಂದುನಾ ।
ದೂರೀಕೃತಸ್ಸ್ಮರೋ ಯೇನ ನ ದೇವಚರಿತಂ ಚರೇತ್ ॥ ೧೨

ನಮೋಽಪುನರ್ಭವಪ್ಲುಷ್ಟ ಕಂದರ್ಪಾಯ ತಪೋಗ್ನಿನಾ ।
ಬೋಧದೃಷ್ಟಿಭುವಾಽಶ್ಚರ್ಯಧಾಮ್ನಾ ಸಂಭವಶಂಭವೇ ॥ ೧೩
ನಮಸ್ತ್ವಮಸ್ತು ಜಗತಾಮತ್ಯಂತಸ್ವಾಸ್ಥ್ಯಹೇತವೇ ।
ಧರ್ಮಚಕ್ರಪವಿತ್ರಾಭಿರಭಿನಂದನವಿಷ್ಣವೇ ॥ ೧೪
ನಮಸ್ಸುಮತಿನಾಥಾಯ ವಿದ್ಯಾನಾಮಾದ್ಯವೇಧಸೇ ।
ಸ್ವಾತ್ಮೋಪಲಬ್ಧಮಾರ್ಗಸ್ಯ ಸ್ವಯಂಬೋಧಾತ್ಸ್ವಯಂಭುವೇ ॥ ೧೫
ನಮಃ ಪದ್ಮಪ್ರಭೇಶಾಯ ತಸ್ಮೈ ಪದ್ಮಪ್ರಥಾಯಿನೇ ।
ಜಗನ್ನಮತಿ ಕಿಂ ಚಿತ್ರಂ ಜನೋದಾತ್ತ ವಿರಜ್ಯತೇ ॥ ೧೬
ನಮಃ ಸುಪಾರ್ಶ್ವನಾಥಾಯ ಯಃಪಾರ್ಶ್ವದ್ವಯಚಾಮರೈಃ ।
ಮುಕ್ತಿಲಕ್ಷ್ಮೀಕಟಾಕ್ಷೈರ್ವಾ ರೇಜೇ ದುಗ್ಧಚ್ಛಟೋಜ್ಜ್ವಲೈಃ ॥ ೧೭
ನಮಃ ಪ್ರಕ್ಷೀಣರಾಗಾಯ ಲಬ್ಧಾತಿಶಯ ಶುದ್ಧಯೇ ।
ಸತ್ಪಥೋದ್ಯೋತಿನೇ ನಿತ್ಯಂ ಚಂದ್ರಪ್ರಭಜಿನೇಂದವೇ ॥ ೧೮
ನಮಸ್ಸುವಿಧಯೇ ಯಸ್ಯ ಜಗದ್ಗಹನಜೃಂಭಿತಃ ।
ಸ್ಯಾದ್ವಾದಸಿಂಹನಾದೋಽಭೂತ್ ಸಂಕುಚದ್ವಾದಿಕುಂಜರಃ ॥ ೧೯
ನಮಶ್ಶೀತಳನಾಥಾಯ ಯತ್ಸೂಕ್ತಾಮೃತಪಾಯಿನಾಂ ।
ಪ್ರಾಣಿನಾಂ ವಿಪ್ರಲಂಭಾಯ ನ ಭೋಗಮೃಗತೃಷ್ಣಿಕಾ ॥ ೨೦
ನಮಶ್ಶ್ರೇಯೋಜಿನೇಂದ್ರಾಯ ಯತ್ಪಾದಾಶ್ರಯವರ್ತಿನಾಂ ।
ಶ್ರೇಯಾಂಸಿ ಬಹುವಿಘ್ನಾನೀತ್ಯುಕ್ತೇರರ್ಥೋ ನಿರಾಶ್ರಯಃ ॥ ೨೧
ನಮಃ ಶ್ರೀವಾಸುಪೂಜ್ಯಾಯ ಭಜತಾಂ ಭಾವಪೂಜಯಾ ।
ಯೋ ಭವೇದ್ವರದಸ್ಸತ್ಯಂ ಭಕ್ತ್ಯಾ ತುಷ್ಯಂತಿ ದೇವತಾಃ ॥ ೨೨
ನಮೋ ವಿಮಲನಾಥಾಯ ಯದ್ಬೋಧಸ್ಯ ಸಮಃ ಕಥಂ ।
ಸಾಕ್ಷಾದ್ವಿಭಾವಭಾವಸ್ಯ ದರ್ಪಣಪ್ರತಿಮಾರ್ಪಣಂ ॥ (?) ೨೩
ನಮೋಽನಂತಜಿತೇಽನಂತಜನ್ಮಕಾಂತಾರಭಾರಜಂ ।
ರಜೋ ಯೇನ ಕ್ಷಣಾದ್ಧೌತ ಮಾಧ್ಯಾತ್ಮಧ್ಯಾನವಾರಿಣಾ ॥ ೨೪
ನಮೋ ಧರ್ಮಾಯ ಯೋ ನೋಚ್ಚೈರ್ಜಿತದುರ್ಜಯಕರ್ಮಣಾ ।
ಧರ್ಮೋ ಜಯತಿ ನಾಧರ್ಮ ಇತ್ಯಮೋಘೀಕೃತಂ ವಚಃ ॥ ೨೫

ನಮಃ ಶ್ರೀಶಾಂತಯೇ ತಸ್ಯ ಮೋಹಶಾಂತಿಃ ಕಿಮುಚ್ಯತೇ ।
ಷಟ್ಖಂಡರಾಜ್ಯಮತ್ಯಾಕ್ಷೀದ್ಯೋಽನಂತೈಶ್ವರ್ಯಕಾಂಕ್ಷಯಾ ॥ ೧೬

ನಮಶ್ಶ್ರೀಕುಂಥವೇ ಯೇನ ಮಹಾರಾಜ್ಯಂ ಮಹಾತ್ಮನಾ ।
ತ್ಯಕ್ತಂ ಮಹಾಮಹಾರ್ಹೇಣ ಸರ್ವಂ ಹಿ ಮಹತಾಂ ಮಹತ್ ॥ ೧೭

ನಮೋಽಸ್ತ್ವರಾಯ ಸಂಪ್ರಾಪ್ತಮುಕ್ತಿಸಾಮ್ರಾಜ್ಯಸಂಪದೇ ।
ವಾಚಾ ಸಹಾದ್ಭುತಂ ಚಕ್ರೇ ಚಕ್ರಾಂಕಕಮಲೋತ್ಸವೇ ॥ ( ? ) ೧೮

ನಮೋನಿರ್ಮಲನಿಸ್ಪೃಷ್ಟಕರ್ಮಮಲ್ಲಾಯ ಮಲ್ಲಯೇ ।
ಬಂಧಮೋಕ್ಷವಿಧಿಜ್ಞಾಯ ದದತೇಽನಂತವೀರ್ಯತಾಂ ॥ ೧೯

ನಮಸ್ಸುವ್ರತನಾಥಾಯ ಯೋಽಭೂದ್ವ್ರತಗುಣೈಃ ಭವಾತ್ ।
ಉದ್ಧರ್ತುಂ ಜಗತಾಂ ತ್ಯಕ್ತ್ವಾ ಕಾ ನೋಹಾನಿರಿತಿ ಸ್ಥಿತಃ ॥ ೨೦

ನಮೋ ನಿಮಿಜಿನೇಂದ್ರಾಯ ಯತ್ಪದಾಂಬುರುಹದ್ವಯಂ ।
ಉತ್ತಂಸಿತಮಹೀಂದ್ರೇಣ ಮಂದಾರಗಳಿತಾದರಂ ॥ ೨೧

ನಮಶ್ಶ್ರೀ ನೇಮಯೇ ಯೇನ ಹರಿತಲ್ಪಾಹಿಭೋಗವತ್ ।
ಶ್ರೀಭುಜಂಗೇ* ಮಹಾಭೋಗೋ ನ ತೃಣಾಯ ಜಘನ್ಯತೇ ॥ ೨೨

ನಮಃಪಾರ್ಶ್ವಾಯ ಸಾಮ್ರಾಜ್ಯಮೇಕಚ್ಛತ್ರೇ ಜಗತ್ತ್ರಯೇ ।
ಯಸ್ಯಾಖ್ಯಾತೀವ ವರಣಂ ಸ್ತ್ರೀಧೃತಾತಪವಾರಣಂ ॥ ೨೩

ನಮಸ್ತ್ರೈಲೋಕ್ಯದುರ್ವಾರಮಾರವೀರಮದಚ್ಛಿದೇ ।
ಮಹಾವೀರಾಯ ಭೂಪೇಂದ್ರಸ್ತೂಯಮಾನಜಯಶ್ರಿಯೇ ॥ ೨೪

ಸವಹತಿ ಕವಿತಾಗುಣಾರ್ಣವಾಖ್ಯಾಂ
ನನು ಭುವನತ್ರಿತಯೇಽಪ್ಯನನ್ಯರೂಢಾಂ ।
ನ ವಿಷಯಮಮುತಿರ್ಯದೀಯಚಿಂತಾ
ಚತುರಧಿಕಾ ಜಿನವಿಂಶತಿಶ್ಶುಭಾಯ ॥ ೨೫

ನಯವಿನಯಧಿಯಃ ಸಮಂತಭದ್ರಾಃ
ವಿದಧತ ವಾಙ್ಮಯದಾಮ ಪೂಜ್ಯಪಾದಾಃ ।

---

*ಸ್ತ್ರೀಭುಜಂಗೀಮಹಾಭೋಗಂ ನತೃಣಂಯಾನ್ಯಮನ್ಯಥಾ

ಗಮುಯತಿ ಪರಮಾಕ್ಷರದ್ವಯುಂ ತೇ
ಮಮು ಜಿನತತ್ವದಮುಕ್ಷರಂ ಜಿನೇಂದ್ರಾ॥ ( ? ) ೩೬

ವ॥ ಎಂದನೇಕಸ್ತವನಂಗಳಂ ಸ್ತುತಿಯಿಸಿ ತದನಂತರಸಮಯದೊಳ್,

ಭರತಂ ಕಾಯೋತ್ಸರ್ಗದೊ
ಳಿರೆ ಚಿತ್ತನಿರೋಧದಿಂ ಸಡಿಲ್ದೊಡೆ ತನು ಭಾ।
ಸುರರತ್ನಾಭರಣಂಗಳ್
ಶರೀರದಿಂದುದಿದರ್ಮಮರತರುಕುಸುಮದವೊಲ್ ॥ ೩೭

ವ॥ ಮತ್ತಂ ಸಾಕೇತನಗರಮಂ ಬಳಸಿದ ಕನಕಪ್ರಾಕಾರದ ಬಾಗಿಲ್ವಾಡಂಗಳೊಳಂ ರಾಜಮಂದಿರದ ಗೋಪುರದ್ವಾರಂಗಳೊಳಂ ತನ್ನ ಪುರದ ಪೋಪಬರ್ಪ ರಾಜಮಾರ್ಗದೊಳಂ ಚತುರ್ವಿಂಶದರ್ಹತ್ಪ್ರತಿಮಾವಿರಾಜಮಾನಹೇಮದಾಮವಿಳಂಬಿತಮಣಿಘಂಟಾಸಮನ್ವಿತವಂದನಮಾಲೆಗಳೊಳಂ

ಪುಗೆ ಪೊಱಮಡೆ ತನ್ನ ಮನಂ
ಬುಗುವಂತಿರೆ ತನ್ನ ಮಕುಟಶಿಖರಮನವು ನೆ।
ಟ್ಟಗೆ ತಾಗುವಂತುಮಾಗಿರೆ
ಜಗದಧಿಪನುದಾತ್ತಭಕ್ತಿಯಿಂ ಮಾಡಿಸಿದಂ ॥ ೩೮

ತನಗೆ ಭರತೇಶ್ವರಂ ವಂ
ದನಾರ್ಥದಿಂ ಸಮೆದ ಮಾಲೆ ಭರತದೊಳದು ವಂ।
ದನಮಾಲೆಯೆಂಬ ಪೆಸರಂ
ತನಗೆ ಪೆಸರ್ಮಾಡಿ ಕೊಡೆ ಸಂದಪುದಿನ್ನುಂ ॥ ೩೯

ಪ್ರಿಯಧರ್ಮನ್ನೃಪತಿಯುಂ ನೋ
ಡಿ ಯಥಾ ರಾಜಾ ತಥಾ ಪ್ರಜಾಎಂಬವೊಲೋ।
ಜೆಯೊಳೋಜೆಗೊಂಡು ಧರ್ಮ್ಮ
ಪ್ರಿಯರಾದರ್ ಪ್ರಜೆಗಳುಂ ಸಮಸ್ತಾವನಿಯೊಳ್ ॥ ೪೦

ವ॥ ಮತ್ತಿತ್ತ ವೃಷಭನಾಥನುಂ ವೃಷಭಸೇನನುಂ ಕುಂಭ ದೃಢರಥ ಶತಧನು ದೇವಶರ್ಮ ದೇವಭಾವ ದೇವಧರ ನಂದನ ಸೋಮದತ್ತ ಸೂರದತ್ತ ಯಜ್ಞದತ್ತ ವಾಯುಶರ್ಮ ಯಶೋಬಾಹು ದೇವಾಗ್ನಿ ಅಗ್ನಿದೇವ

ಅಗ್ನಿಗುಪ್ತ ಚಿತ್ರಗುಪ್ತ ಚಿತ್ರಾಗ್ನಿ ಹಳಧರ ಮಹೀಧರ ಮಹೇಂದ್ರ ವಾಸುದೇವ ವಸುಂಧರಾಚಳ ಮೇರುಧರ ಮೇರುಭೂತಿ ಸರ್ವಯಶ ಸರ್ವಜ್ಞ ಸರ್ವಗುಪ್ತ ಸರ್ವ್ವಪ್ರಿಯ ಸರ್ವ್ವದೇವ ಸರ್ವ್ವವಿಜಯ ವಿಜಯಗುಪ್ತ ವಿಜಯಮಿತ್ರ ವಿಜಯ ಅಪರಾಜಿತ ವಸುಮಿತ್ರ ವಿಶ್ವಸೇನ ಚಾರುಷೇಣ ಸತ್ಯದೇವದೇವಸತ್ಯ ಸತ್ಯಗುಪ್ತ ಸತ್ಯಮಿತ್ರ ಶರ್ಮಾಳಿ ವಿನೀತ ಸವರ ಮುನಿಗುಪ್ತ ಮುನಿದತ್ತ ಮುನಿಯಜ್ಞ ಮುನಿದೇವ ಗುಪ್ತಯಜ್ಞ ಮಿತ್ರಯಜ್ಞ ಸ್ವಯಂಭು ಭಗದೇವ ಭಗವತ್ತ ಭಗಫಲ್ಗು ಮಿತ್ರಫಲ್ಗು ಪ್ರಜಾಪತಿ ಸರ್ವಸಿಂಹ ವರುಣ ಧನಪಾಲ ಮಘವ ತೇಜೋರಾಶಿ ಮಹಾವೀರ ಮಹಾರಥ ವಿಶಾಲ ಮಹಾಪೀಠ ಸುವಿಶಾಲ ವಜ್ರ ವಜ್ರಶಾಳ ಚಂದ್ರಚೂಡ ಮೇಘಸ್ವರ ಮಹಾಸ್ವರ ಕಚ್ಛ ಮಹಾಕಚ್ಛ ನಮಿ ವಿನಮಿ ಬಳ ಅತಿಬಳ ವಜ್ರಬಳ ಬಳಾರಾತಿ ಭದ್ರಬಳ ನಂದಿಬಳ ಮಹಾಭೋಗ ನಂದಿಮಿತ್ರ ಕಾಮದೇವ ಅನುಪಮರೆಂಬೆಣ್ಬತ್ತುನಾಲ್ವರ್ ಗಣಧರದೇವರುಂ, ನಾಲ್ಸಾಸಿಱದೇೞ್ನೂಱಯ್ವದಿಂಬರ್ಸಕಳಪೂರ್ವಧರರುಂ, ನಾಲ್ಸಾಸಿರದೈನೂಱಯ್ವದಿಂಬರ್ ಶಿಕ್ಷಕರುಂ ಒಂಬೈಸಾಸಿರ್ವರವಧಿಜ್ಞಾನಿಗಳುಂ ಇರ್ಪತ್ತುನಾಲ್ಸಾಸಿರ್ವರ್ಕೇವಳಜ್ಞಾನಿಗಳುಂ ಇರ್ಪತ್ತಾಱುಸಾಸಿರ್ಬರ್ ವಿಕ್ರಿಯರ್ಧಿಪ್ರಾಪ್ತರುಂ ಪನ್ನಿರ್ಛಾಸಿರದೇೞ್ನೂಱಯ್ವದಿಂಬರ್ ಮನಃಪರ್ಯಯಜ್ಞಾನಿಗಳುಂ ಅನಿಬರಿವಾದಿಗಳುಂ ಮೊದಲಾಗೆ ಎಣ್ಬತ್ತನಾಲ್ಸಾಸಿರದೆಣ್ಬತ್ತನಾಲ್ವರ್ ಮುನಿಪತಿಗಳುಂ ಮೂಱುಲಕ್ಕೆಯುಮಯ್ವತ್ತುಸಾಸಿರಬ್ರಹ್ಮಿಮುಖ್ಯಾರ್ಯಿಕಾಗಣಮುಂ ಮೂಱುಲಕ್ಕೆದೃಢಬ್ರತಾಧಿಶ್ರಾವಕರುಂ ಅಯ್ದುಲಕ್ಕೆಸುವ್ರತೆ ಮೊದಲಾಗೆ ಪರಮಶ್ರಾವಕಿಯರುಂ ಅಯ್ದುಲಕ್ಕೆ ಭವನಾಮರಾದಿಚತುರ್ವಿಧದೇವಸಿಕಾಯಮುಂ ಪಕ್ಷಿಚತುಷ್ಪದಸರೀಸೃಪಾದಿತಿರ್ಯಗ್ಜಾತಿಗಳುಂ ಬೆರಸು ಧರ್ಮ್ಮಾಮೃತವರ್ಷದಿಂ ಧರ್ಮಕ್ಷೇತ್ರಂಗಳೊಳ್ ಭವ್ಯಸಸ್ಯಂಗಳನನೇಕಬ್ರತಫಲಭರವಿನತಂಗಳ್ ಮಾಡಿ ಚತುರುತ್ತರಾಶೀತಿಲಕ್ಷಪುರ್ಬಂಗಳೊಳಗೆ ಪದಿನಾಲ್ಕುದಿವಸದಾಯುಷ್ಯಮುಂಟೆನೆ ಕೈಳಾಸಪರ್ವತದ ಸಿದ್ಧಕೂಟದೊಳ್ ಪೌಷ್ಯಮಾಸದ ಪೌರ್ಣಮಿಯಾದಿನದಂದು ಯೋಗಪಲ್ಯಂಕಾಸನದಿಂದಂ ಯೋಗನಿರೋಧದೊಳ್ ಪೂರ್ವಾಭಿಮುಖನಾಗಿರ್ದಂ ; ಅನ್ನೆಗಮಿತ್ತಲ್,

ಭರತಂ ದರ್ಶನದೊಳ್ ಮಂ
ದರಮಾಪ್ರಾಗ್ಭಾರಭೂತಳಂಬರೆಗಂ ನೀ ।
ಳ್ದಿರೆ ಕಂಡು ವಿಸ್ಮಿತಾಂತಃ
ಕರಣನದರ್ಕಗಿದು ನಾಡೆಯುಂ ಚಿಂತಿಸಿದಂ ॥ ೪೧

ದಿವದಿನಿಟಿದೋಷಧಿದ್ರುಮ
ಮವನೀತಳಮನುಜಮರಣಜನ್ಮಜರಾಸಂ ।
ಭವಭಯಮಂ ಕಿಡಿಸಿ ದಿವ
ಕ್ಕವಯವದಿಂದಡರೆ ನೋಡಿದಂ ಯುವರಾಜಂ ॥ ೪೨

ನರಸಮಿತಿಗೆ ಬೇಡಿದುಪಂ
ನಿರಂತರಂ ಕೊಟ್ಟು ಕಲ್ಪವೃಕ್ಷಂ ಪೋಗಲ್ ।
ಸುರಲೋಕಕ್ಕುದ್ಧೃತಮಾ
ಗಿರೆ ಕಂಡಂ ಸ್ವಪ್ನಸಮಯದೊಳ್ ಗೃಹಪತಿಯುಂ ॥ ೪೩

ವರರತ್ನದ್ವೀಪಂ ಭಾ
ಸುರರತ್ನಾಳಿಯನನಾರತಂ ಕೊಟ್ಟು ವಸುಂ ।
ಧರೆಗಭ್ರದತ್ತ ನೆಗೆಯ
ಲ್ಕಿರೆ ಕಂಡಂ ಭರತಮಂತ್ರಿಮುಖ್ಯನುಮಾಗಳ್ ॥ ೪೪

ನೆಲಸಿರ್ದ ವಜ್ರಪಂಜರ
ಮಳಿಬುವಿನಂ ಪಾಯ್ದು ಸಿಂಧುರಾರಾತಿಯನು ।
ಜ್ಜ್ವಳತನುವನಭ್ರಪಥದ
ತ್ತುಳಂಘಿಸಲ್ಕಿರ್ದುದಂ ಚಮೂಪತಿಕಂಡಂ ॥ ೪೫

ವ॥ ಮತ್ತಂ ಜಯಪ್ರಿಯತನೂಜಂ,

ತಾರಾನಿಕರಾವೇಷ್ಟಿತ
ತಾರಾಪತಿಯಂ ಸಮಸ್ತಸುರಲೋಕಮುಮಂ ।
ನೇರಿತ್ತು ಬೆಳಗಿ ಪೋಪುದ
ನಾರಾತ್ರಿಯೊಳಂತನಂತವೀರ್ಯಂ ಕಂಡಂ ॥ ೪೬

ಸುರರಾಜಮನಃಪ್ರಿಯೆ ಶಚಿ
ವೆರಸು ಯಶಸ್ವತಿಯುಮಾಸುನಂದೆಯುಮಾಗಳ್ ।

ಪಿರಿದುಂ ಶೋಕದೊಳಿರೆ ಯುವ
ತಿರತ್ನಮೆನಿಸಿದ ಸುಭದ್ರೆ ಕನಸಂ ಕಂಡಳ್ ‖ ೪೭

ವ॥ ಮತ್ತಂ ವಾರಾಣಸೀನಗರಾಧೀಶ್ವರನಕಂಪನತನಯೆಂ,

ಧರಣೀತಳಘನತಮಮಂ
ಕರಗಿಸಿ ಭಾಸ್ವತ್ಕರಂಗಳಿಂ ಗಗನತಳ।
ಕ್ಕಿರದಡರ್ವ ವಿಸ್ಫುರದ್ದಿನ
ಕರನಂ ಚಿತ್ರಾಂಗದಾವನೀಶಂ ಕಂಡಂ ‖ ೪೮

ವ॥ ಅಂತು ಭರತಾದಿಗಳನಿಬರುಂ ತಂತಮ್ಮ ಕಂಡ ಕನಸುಗಳಂ ಪ್ರಭಾತಸಮಯದೊಳ್ ಪುರೋಹಿತಂಗಱಿಪಿದೊಡೆ ನಿಮ್ಮ ಕಂಡ

ಕನಸುಗಳಿವು ಪೆಱಪೆಱತೇ
ನನಂತಗುಣನಿಳಯನಾದಿದೇವಂ ಪಲಬರ್।
ಮುನಿಪತಿಗಳ್ ವೆರಸಡರ್ದಪ
ನನಶ್ವರಾಸ್ಪದಮನೆಂಬುದಂ ಸೂಚಿಸುಗಂ ‖ ೪೯

ವ॥ ಎಂಬುದುಮಾಪ್ರಸ್ತಾವದೊಳ್ ಆದಿಭಟ್ಟಾರಕವ್ಯತಿಕರಸ್ಥಿತಿಯಂ ಆನಂದನೆಂಬಂ ಧರ್ಮಕಾರ್ಯನಿಮಿತ್ತಂ ಬಂದಱಿಪಿದೊಡೆ, ಭರತೇಶ್ವರಚಕ್ರವರ್ತಿಯುಂ ವಿನೇಯಜನಸಮೇತಂ ಬಂದು ಭಟ್ಟಾರಕರಂ ಮೂಱು ಸೂೞ್ ಬಲವಂದು ಕೃತಾಭಿಷ್ಟಸ್ತವನಪರಂ ಮಹಾಮಹಮೆಂಬ ಮಹಾಪೂಜೆಯಂ ಮಹಾವಿಭೂತಿಯಿಂ ಪದಿನಾಲ್ಕು ದಿವಸಂಬರಂ ನಿರಂತರಂ ಮಾಡೆ ವೃಷಭನಾಥಂ ಸ್ವಸ್ಥಾನಯೋಗ್ಯಕೇವಳಕೇವಳಿಪ್ರದೇಶನಿರ್ಜರೆಯಂ ಮಾಡುತ್ತಮಂತರ್ಮುಹೂರ್ತಕಾಲದಿಂ ಶರೀರತ್ರಿಗುಣಬಹುಳತೆಯಿಂ ಚತುರ್ದಶರಜ್ವಾಯಾಮಾತ್ಮತ್ರಿಗುಣಪ್ರಮಾಣಾತ್ಮಪ್ರದೇಶವಿಸರ್ಪಣದಿಂ ದಂಡಕ್ರಿಯಾಕರಣಾನಂತರಸಮಯದೊಳ್ ಪೂರ್ವೋಕ್ತಬಾಹುಲ್ಯದಿಂ ಲೋಕಾಕಾಶವ್ಯಾಪಕಕವಾಟಕ್ರಿಯೆಯಂ ನೆಱಪಿ ತದನಂತರಸಮಯದೊಳ್ ವಾತವಳಯಮುೞಿಯೆ ಜೀವಪ್ರದೇಶಂಗಳಿಂ ಲೋಕಪ್ರದೇಶಮಂ ಪರ್ವಿ ನಿರ್ವರ್ತಿತಪ್ರತರಕ್ರಿಯಾವಿಶೇಷಂ ತದನಂತರಕ್ಷಣದೊಳ್ ವ್ಯಾಪ್ತಸಪ್ತಘನರಜ್ಜುಪ್ರಮಾಣಶೇಷಜಗತ್ಪ್ರದೇಶಲೋಕಪೂರಣಕ್ರಿಯಾಪರಿಸಮಾಪ್ತಿಯಂ ಮಾಡಿ ಮತ್ತಂ ಪ್ರವರ್ತಿತಪ್ರತರಕವಾಟದಂಡಕ್ರಿಯಾ

ವಿಶೇಷಂಗಳಿಂ ಖಂಡಿತಘಾತಿಚತುಷ್ಕಸ್ಥಿತ್ಯನುಭಾಗನಪಗತಮೂಲಶರೀರ ಪ್ರಮಾಣಾತ್ಮಕಪ್ರದೇಶನಾಯುಷ್ಯಸ್ಥಿತಿಸಮೀಕೃತಾಶೇಷಾಘಾತಿತ್ರಯ ಸ್ಥಿತಿಕನಂತರ್ಮುಹೂರ್ತನಿರುದ್ಧಾಶೇಷಮನೋವಾಗ್ಬಾದರಕಾಯಯೋಗಸೂಕ್ಷ್ಮಕಾಯಯೋಗಪರಿಣತನುಪಯೋಗಪರಿಕಲ್ಪಿತಸೂಕ್ಷ್ಮಕ್ರಿಯಾ ಪ್ರತಿಹತ್ಯಭಿಧಾನತೃತೀಯಶುಕ್ಲಧ್ಯಾನಪರಾಯಣಂ ನಿರುದ್ಧಸೂಕ್ಷ್ಮಶರೀರಯೋಗನನಂತರಸಮಯದೊಳ್ ಪಂಚಹ್ರಸ್ವಾಕ್ಷರೋಚ್ಚಾರಣಮಾತ್ರ ಕಾಲಪ್ರಮಿತಾಯೋಗಗುಣಸ್ಥಾನಸ್ಥಿತಂ ಸಮುಚ್ಛಿನ್ನಕ್ರಿಯಾಪ್ರತಿಪತ್ತಿಧ್ಯಾನಪರಿಪೂರ್ಣಾಶೇಷಶೀಲಗುಣಗಣನಿಳಯಂ ನಿಜದ್ವಿಚರಮಸಮಯದೊಳ್ ಅನ್ಯತರವೇದನೀಯ ದೇವಗತಿತತ್ಪ್ರಯೋಗ್ಯಾನುಪೂರ್ವ ಶರೀರಬಂಧನ ಸಂಘಾತವರ್ಣರಸಪಂಚಕಸಂಸ್ಥಾನಸಂಹನನಪಂಚಷಟ್ಕಾಂಗೋಪಾಂಗದ್ವಿಕಂ ಗಂಧದ್ವಿಕಂ ಸ್ಪರ್ಶಾಷ್ಟಕಂ ಅಗುರುಲಘುಂ ಚತುಷ್ಕವಿಹಾಯೋಗತಿ ದ್ವಿಕಸ್ಥಿರಾಸ್ಥಿರಶುಭಾಶುಭಸುಸ್ವರದುಸ್ವರಸುಭಗದುರ್ಭಗಪ್ರತ್ಯೇಕಶರೀರ ಯಶಸ್ಕೀರ್ತಿರನಾದೇಯನಿರ್ಮಾಣಪರ್ಯಾಪ್ತಿ ನೀಚೈರ್ಗೋತ್ರಂಗಳೆಂಬ ದ್ವಿಸಪ್ತತಿಪ್ರಕೃತಿಗಳಂ ನಿರವಶೇಷಂ ಕಿಡಿಸಿ ಸ್ವಕೀಯಚರಮಸಮಯದೊಳ್ ಅನ್ಯತರವೇದನೀಯಮನುಷ್ಯಾಯುಷ್ಯಮನುಷ್ಯಗತಿತತ್ಪ್ರಯೋಗ್ಯಾನುಪೂರ್ವಿಪಂಚೇಂದ್ರಿಯಜಾತಿತ್ರಸನಾಮಸುಭಾಶುಭೋದಯಪರ್ಯಾಪ್ತ ಬಾದರಯಶಸ್ಕೀರ್ತಿರುಚ್ಚೈರ್ಗೋತ್ರತೀರ್ಥಕರನಾಮಂಗಳೆಂಬ ಪದಿಮೂಱುಂ ಪ್ರಕೃತಿಗಳುಮಂ ನಿರ್ಮೂಲಂ ಕಿಡಿಸಿ ಬೞಿಯಂ ಕ್ಷಾಯಿಕಸಮ್ಯಕ್ತ್ವಾನಂತ ಜ್ಞಾನದರ್ಶನವೀರ್ಯಸೂಕ್ಷ್ಮಾವಗಾಹಾಗುರುಲಘುತಾವ್ಯಾಬಾದಂಗಳೆಂಬ,

ಗುಣಮೆಂಟುಂ ಬಂದು ತನ್ನೊಳ್ ಪೆಣೆದಿರೆ ಸುಖಸೋದ್ಭೂತನಂ ಲೋಕಚೂಡಾ
ಮಣಿಯುಂ ಶಶ್ವತ್ತ್ರಿಲೋಕೀಪ್ರಣುತನುಮತಿವಿಖ್ಯಾತನುಂ ಭವ್ಯಚಿಂತಾ ।
ಮಣಿಯುಂ ತಾನಾಗಿ ತನ್ನೊಳ್ ನೆಱೆಯೆ ಪಡೆದು ತನ್ನಂದಮಂ ತಾನೆ ತನ್ನ
ತ್ತಣಿನಾದಿಬ್ರಹ್ಮನೇಕಕ್ಷಣದೊಳೆ ಪರಮಬ್ರಹ್ಮಸದ್ಮಕ್ಕೆ ಸಂದಂ ॥ ೫೧

ದೊರೆಕೊಂಡ ಮಾಘಮಾಸಂ
ಬರೆ ಕೃಷ್ಣಚತುರ್ದಶೀದಿನಂ ಸಮನಿಸೆ ತ ।

ತ್ಪುರುದೇವಂ ಮುಕ್ತಿವಧೂ
ವರತೆಯನಭಿಜಿನ್ಮುಹೂರ್ತದೊಳ್ ಕೈಕೊಂಡಂ ॥ ೫೧

ವ॥ ಅಂತು ವೃಷಭೇಶ್ವರಂ ತ್ರಿಲೋಕಶಿಖರಿಶಿಖರಶೇಖರಾಯಮಾನಮನುಕ್ರಮೋನ್ನತಮಾಗಿ ಮಧ್ಯಪ್ರದೇಶದೊಳಷ್ಟಯೋಜನಬಾಹುಲ್ಯಮುಂ ಧವಳಚ್ಛತ್ರಾಕಾರಮುಂ ನಾಲ್ವತ್ತೈದುಲಕ್ಷಯೋಜನದಗಲಮುಂ ಸಮವೃತ್ತಮುಂ ಎನಿಸಿದೀಷತ್ಪ್ರಾಗ್ಭಾರದ ಮೇಗಣ ಘನೋದಧಿಘನಾನಿಳತನುವಾತತ್ರಿತಯಭಾಗದೊಳ್ ಅವ್ಯಾಬಾಧನುಮನಂತಸುಖಾಂಬುಧಿನಿಳಯನುಮಾಗಿ ನೆಲಸಿರ್ದಂ. ಇತ್ತ ಚತುರ್ವಿಧದೇವನಿಕಾಯಮುಂ ಪುರುದೇವಪರಿನಿರ್ವಾಣಮಹಾಕಲ್ಯಾಣಪೂಜಾನಿರ್ವರ್ತನಾಭಿಲಾಷೆಯಾಗಿ ನಿರ್ವಾಣಭೂಮಿಯನನೇಕಸುರಭಿಸುರತರುಕುಸುಮಸುಗಂಧಾಕ್ಷತಂಗಳಿಂದಮರ್ಚಿಸಿ,

ಸ್ಫುರಿತಾಗ್ನೀಂದ್ರಕಿರೀಟಕೋಟಿಮಣಿಸಂಭೂತಾಗ್ನಿಯಿಂ ಚಂದನಾ
ಗುರುಕರ್ಪೂರಲವಂಗಕುಂಕುಮಘೃತಕ್ಷೀರಾನಲದ್ರವ್ಯಸಂ ।
ಕರಸಂಪರ್ಕದೊಳೆಯ್ದೆ ಪೆರ್ಚಿದುದಱಿಂ ರೂಪಾಂತರಕ್ಕೆಯ್ದೆ ಭಾ
ಸುರದಿಂ ತತ್ಸುರರಾಜನಂದು ಪಿಱಿದೊಂದುತ್ಸಾಹಮಂ ಮಾಡಿದಂ ॥ ೫೨

ವ॥ ಅಂತು ಸುರಭಿಕುಸುಮಗಂಧಾಕ್ಷತಂಗಳಿಂದಮರ್ಚಿಸಿ ಭಗವಚ್ಛರೀರಹೋಮಕುಂಡದಕ್ಷಿಣಭಾಗದೊಳ್ ಗಣಧರಶರೀರಮನಿಱಿಸಿ ತದಪರದಿಗ್ಭಾಗದೊಳನಗಾರಕೇವಳಿಹುತಾಶನಕುಂಡಮಂ ಸ್ಥಾಪನಂಗೆಯ್ದು ಆಗಾರ್ಹಪತ್ಯದಕ್ಷಿಣಾಗ್ನ್ಯಾಹವನೀಯಾಭಿಧಾನಕುಂಡಂಗಳಂ ಕೊಂಡು ಲಲಾಟಕಂಠಭುಜಶಿಖರಗಳಹೃದಯಪ್ರದೇಶದೊಳಂ,

ಭೂತಿಗಳೊಳ್ ಕಲ್ಯಾಣವಿ
ಭೂತಿಗಳೆಮಗಕ್ಕೆ ಬೇಗಮಿನ್ನೆಂದು ಮನೋ ।
ಜಾತಮಹೋತ್ಸಾಹರ್ ತ
ದ್ಭೂತಿಯಿನಿಟ್ಟರ್ ತ್ರಿಪುಂಡ್ರಮಂ ದಿವಿಜೇಂದ್ರರ್ ॥ ೫೩

ವ॥ ಅಂತು ತ್ರಿಪುಂಡ್ರಂಗಳನಿಟ್ಟೊಸಗೆಯಿಂದೊಸಗೆ ಮುಱುಳ್ಗೊಂಡು,

ಆನಂದನಾಟಕಂ ಪರ
ಮಾನಂದಮನೆಂದು ಮಾಡಿ ದಿವಿಜಾಧೀಶರ್ ।

ನಾನಾಪ್ರಕಾರದಿಂದಮ
ದೇನೆಂಬುತ್ಸವಮನೆತ್ತಿಯಿಂ ಮಾಡಿದರೋ ॥ ೫೪

ವ॥ ಆಗಳಾತ್ಮೀಯಗುರುವಿಯೋಗಶೋಕಾನಳದಹ್ಯಮಾನಮಾನಸನಾಗಿರ್ದ ಭರತಪತಿಯ ಶೋಕಾವೇಗಮಂ ವೃಷಭಸೇನಗಣಾಗ್ರಣಿಗಳಿಂತೆಂದಾಱಿಸಿದರ್,

ಖಳಕರ್ಮಾಷ್ಟಕಮಂ ಪಡಲ್ವಡಿಸಿ ಸಂಸಾರಾಬ್ಧಿಯಂ ದಾಂಟಿ ನಿ
ಷ್ಕಳಸೌಖ್ಯಾಸ್ಪದಮಂ ತ್ವದೀಯಜನಕಂ ಕೈಕೊಂಡೊಡೀದೇವಸಂ।
ಕುಳಮಿಂದ್ರಂಬೆರಸಾಡಿದಪ್ಪುದಿವಱೊಳ್ ನೀಂ ರಾಗಿಸಲ್ತಕ್ಕುದೇ
ಕೊಳಕೊಳ್ವೈಜಡರಂತೆ ಶೋಕರಸಮಂ ಷಟ್ಖಂಡಧಾತ್ರೀಶ್ವರಾ ॥ ೫೫

ನಿನಗೆ ವೃಷಭೇಶ್ವರಂ ಲೋ
ಚನಗೋಚರನಿನ್ನೆವರೆಗಮಿಾಗಳ್ ನಿಂದಂ।
ಮನುಕುಲಲಲಾಮ ನೆಟ್ಟನೆ
ಮನದೊಳ್ ಕಡುಸಾರೆಯಲ್ತೆ ಮುನ್ನಿಂದೀಗಳ್ ॥ ೫೬

ಭರತೇಶ್ವರ ನಾಮುಪ್ಪೊಡೆ
ಚರಮಾಂಗರುಮಖಿಳಮಲವಿಲೇಪನದಿಂದಂ।
ಪುರುಪರಮೇಶ್ವರನೈದಿದ
ಪರಮಪದಂ ನಮಗಮದುವೆ ನೆಲೆ ಪೆಱತುಂಟೇ ॥ ೫೭

ವ॥ ಅದಲ್ಲದೆಯುಂ ಜೀವಂಗಳ್ ಶುಭಾಶುಭಕರ್ಮಶೈಲೂಷಪ್ರೇರಿತಂಗಳಾಗಿ ಚತುರ್ಗತಿಸಂಸಾರಂಗಳೊಳನೇಕರಸಪರಿಣತಂಗಳ್ ನಾನಾಶರೀರೋಪಾದಾನಪರಿತ್ಯಜನಪುರಸ್ಸರಂ ಪರಿಭ್ರಮಿಸುಗುಂ. ಅದು ನಮ್ಮನಿಬರ ಭವಾಳಿಯಿಂದೆ ನಮಗನುಭೂತಪೂರ್ವಮದೆಂತೆಂದೊಡೆ ಭವದೀಯಜನಕಂ ಪುರುಪರಮೇಶ್ವರಂ,

॥ ಅಕ್ಕರಂ ॥

ಭೋಗಕಾಂಕ್ಷೆಯೊಳ್ ಜಯವರ್ಮಂ ಬೞಿಕೀಮಹಾಬಳಂ ಲಲಿತಾಂಗಂ ವಜ್ರಜಂಘಂ
ಭೋಗಭೂಮಿಜಂ ಶ್ರೀಧರದೇವಂ ಸುವಿಧಿನರಾಧಿಪನಚ್ಯುತೇಂದ್ರಂ
ಸಾಗರಾಂತಂ ನೆಲನನಿತುಮಂ ಚಕ್ರದಿಂ ಬೆಸಕೈಸಿದ ವಜ್ರನಾಭಿ
ಯಾಗಿ ಸರ್ವಾರ್ಥಸಿದ್ಧಿಯೊಳ್ ಪುಟ್ಟಿ ಬಂದಿಲ್ಲಿ ತಾನಾದಿದೇವನಾದಂ ॥ ೫೮

ವ॥ ಮತ್ತಂ ಧನಶ್ರೀಯುಂ ನಿರ್ನಾಮಿಕೆಯುಂ ಸ್ವಯಂಪ್ರಭಾದೇವಿಯುಂ ಶ್ರೀಮತಿಯುಂ ಆರ್ಯೆಯುಂ ಸ್ವಯಂಪ್ರಭದೇವನುಂ ಕೇಶವಮಹೀಶನುಂ ಅಚ್ಯುತಪ್ರತೀಂದ್ರನುಂ ಧನದತ್ತನುಂ ಅಹಮಿಂದ್ರನುಂ ಆಗಿ ಬಂದೀಗಳಾದಿ ದಾನತೀರ್ಥಪ್ರವರ್ತಕಶ್ರೇಯಾಂಸನಾದಂ ; ಅತಿಗೃದ್ಧಮಹೀಶನುಂ ನಾರಕನುಂ ವ್ಯಾಘ್ರನುಂ ಈಶಾನಕಲ್ಪಜನುಂ ಮತಿವರಮಂತ್ರಿಯುಂ ಅಧೋಗ್ರೈವೇಯಕದಿವಿಜನುಂ ಸುಬಾಹುಮಹೀಪತಿಯುಂ ಸರ್ವಾರ್ಥಸಿದ್ಧೀಶ್ವರನುಂ ಅಹಮಿಂದ್ರನುಮಾಗಿ ಬಂದು ನೀನೀಗಳ್ ಭರತೇಶ್ವರಚಕ್ರವರ್ತಿಯಾದೈ ; ನಾರಕನುಂ ಪ್ರೀತಿವರ್ಧನಸೇನಾನಾಯಕನುಂ ಭೋಗಭೂಮಿಜನುಂ ಕನಕಪ್ರಭಾಮರನುಂ ಲಲಿತಾಂಗದೇವಸಾಮಾನಿಕನುಂ ಪ್ರಭಂಕರನುಂ ವಜ್ರಜಂಘಸೇನಾಧೀಶ್ವರನಕಂಪನನುಂ ಅಧೋಗ್ರೈವೇಯಕನುಮಹಮಿಂದ್ರನುಂ ಮಹಾಬಾಹುಮಹೀಪತಿಯುಂ ಸರ್ವಾರ್ಥಸಿದ್ಧಿಜನನುಮಾಗಿ ಬಂದು ವೃಷಭೇಶ್ವರತನೂಜನೀಗಳ್ ಬಾಹುಬಲಿಕುಮಾರನಾದಂ. ದಿವಿಜನುಂ ಪ್ರೀತಿವರ್ಧನಮಂತ್ರಿಯುಂ ಭೋಗಭೂಮಿಜನುಂ ಕನಕಪ್ರಭಾಮನರನುಂ ವಜ್ರಜಂಘಪುರೋಹಿತನಾನಂಗನುಂ ಅಧೋಗ್ರೈವೇಯಕನುಮಹಮಿಂದ್ರನುಂ ಪೀಠನುಂ ಸರ್ವಾರ್ಥಸಿದ್ಧೀಶನುಮಾಗಿ ಬಂದು ನಾನೀಗಳ್ವೃಷಭನಾಥಂಗೆ ಪ್ರಥಮಗಣಧರನಾದೆಂ, ಪ್ರೀತಿವರ್ಧನಪುರೋಹಿತನುಂ ಭೋಗಭೂಮಿಜನುಂ ಲಲಿತಾಂಗದೇವಸಾಮಾನಿಕಪ್ರಭಂಜನದೇವನುಂ ವಜ್ರಜಂಘಶ್ರೇಷ್ಠಿಧನಮಿತ್ರನುಂ ಅಧೋಗ್ರೈವೇಯಕಾಹಮಿಂದ್ರನುಂ ಮಹಾಪೀಠನುಂ ಸರ್ವಾರ್ಥಸಿದ್ಧೀಶ್ವರನುಮಾಗಿ ಬಂದೀಗಳನಂತವಿಜಯನಾದಂ ; ಶಾರ್ದೂಲಾರ್ಯನುಂ ಚಿತ್ರಾಂಗದೇವನುಂ ವರದತ್ತನೃಪನುಂ ಅಚ್ಯುತಸಾಮಾನಿಕದೇವನುಂ ವೈಜಯಂತಭೂಪನುಂ ಸರ್ವಾರ್ಥಸಿದ್ಧೀಶ್ವರನುಮಾಗಿಬಂದೀಗಳನಂತವೀರ್ಯನಾದಂ ; ವರಾಹಾರ್ಯನುಂ ಮಣಿಕುಂಡಲಾಮರನುಂ ವರಸೇನಭೂಪನುಂ ಅಚ್ಯುತಸಾಮಾನಿಕದೇವನುಂ ವೈಜಯಂತಭೂಪನುಂ ಸರ್ವಾರ್ಥಸಿದ್ಧೀಶ್ವರನುಮಾಗಿ ಬಂದೀಗಳ್ ಸುವೀರನಾದಂ ; ವಾನರಾರ್ಯನುಂ ಮನೋಹರಾಮರನುಂ ಚಿತ್ರಾಂಗದೇವದತ್ತನೃಪನುಂ ಅಚ್ಯುತಸಾಮಾನಿಕನುಂ ಅಪರಾಜಿತನೃಪನುಂ ಸರ್ವಾರ್ಥಸಿದ್ಧಿಯೊಳಹಮಿಂದ್ರನಾಗಿ ಬಂದೀಗಳ್ ವೀರನಾದಂ, ನಕುಲಾರ್ಯನುಂ ಮನೋರಥದಿವ್ಯನುಂ ಶಾಂತ

ಮದನನೃಪನುಂ ಅಚ್ಯುತಸಾಮಾನಿಕನುಂ ಅಪರಾಜಿತನೃಪನುಂ ಸರ್ವಾರ್ಥಸಿದ್ಧಿಯೊಳಹಮಿಂದ್ರನಾಗಿ ಬಂದೀಗಳ್ ಸುವೀರನಾದಂ,

ಭವವಾರಾಶಿಯೊಳಿಂತು ಜೀವನಿವಹಂ ಒರ್ದುಗತ್ತುಮಿರ್ಕುಂ ಮಹೋ
ತ್ಸವಮಲ್ತೇ ಗುರುವಿಂತು ದಾಂಟಿದೊಡಿದಂ ಬೇಡೀವಿಷಾದಂ ನಿರ ।
ಸ್ತವಿವೇಕಂಬೊಲಿದೇಕೆ ಮೋಹಿಸಿದಪೈ ನೀಂ ಮಾಣ ಶಕ್ರಂಗೆ ವ
ಸ್ತುವಿವರ್ ನಿನ್ನವೊಲಾರ್ಪರುರ್ಭುವನದೊಳ್ ಷಟ್ಖಂಡಧಾತ್ರೀಶ್ವರಾ ॥ ೫೯

ಎನೆ ದಾವದಗ್ಧಗಿರಿ ನೂ
ತನಜಳದಜಳಂಗಳಿಂದಮಾಱುವವೋಲ್ ಭೋಂ ।
ಕನೆ ಭರತನನಾಱಿಸಿದಂ
ಮುನಿವಿನುತಗಣಾಧಿನಾಥವಚನಾಮೃತದಿಂ ॥ ೬೦

ವ॥ ಅಂತಪಗತಗುರುಶೋಕವೇಗನಾಗಿ ಗಣಧರಚರಣಸರಸಿಜಂಗಳ್ಗೆಱಗಿ ತನ್ನ ಭೋಗತೃಷ್ಣೆಯುಂ ತಾನೆ ತನ್ನ ಮನದೊಳ್ ನಿಂದಿಸುತ್ತುಂ ಮುಕ್ತ್ಯಂಗನಾನುರಕ್ತಚಿತ್ತನಾಗುತ್ತುಂ ಬಂದಯೋಧ್ಯಾಪುರಮಂ ಪೊಕ್ಕು ಕೆಲವುದಿವಸಮಿರ್ದೊಂದು ದಿವಸಂ,

ಪರಮಪದದಿಂದಮಟ್ಟಿದ
ಪುರುಪರಮೇಶ್ವರನ ದೂತನಂ ಕಾಣ್ಬವೊಲಾ ।
ಭರತಂ ಕಂಡಂ ಕೆನ್ನೆಯ
ನೆರೆಯುಂ ತಳದಳಿಸಿ ಪೊಳೆವ ಮಣಿದರ್ಪಣದೊಳ್ ॥ ೬೧

ವ॥ ಅಂತದಂಕಂಡಪಗತಮೋಹರಸನುಮುಪಗತನಿರ್ವೇಗರಸನುಮಾಗಿ,

ಹೇಯಂ ಸಾಮ್ರಾಜ್ಯಮುಪಾ
ದೇಯಂ ಪ್ರವ್ರಜ್ಯವೆಂದು ಮಾಣದೆ ರಾಜ್ಯ ।
ಶ್ರೀಯುಂ ಕೊಟ್ಟಂ ಮುಕ್ತಿ
ಶ್ರೀಯುಂ ಬಗೆದರ್ಕಕೀರ್ತಿಗಾಭರತೇಶಂ ॥ ೬೨

ವ॥ ಅಂತು ಪರಿತ್ಯಕ್ತಸಾಮ್ರಾಜ್ಯಪರಿಚ್ಛೇದನಾಗಿ ಸಮಸ್ತಧಾರ್ಮಿಕಜನಂಗಳಂ ಬರಿಸಿ ಸರ್ವತೋಭದ್ರಮೆಂಬ ಮಹಾಮಹಿಮೆಯುಂ ಮಹೋತ್ಸವದಿಂದೆಂಟುದಿವಸಂಬರಂ ಮಾಡಿ ತತ್ಪೂಜಾಸಮೇತಂ ಕೈಳಾಸಶೈಲಕ್ಕೆ ಪೋಗಿ ತದಗ್ರಸ್ಥಿತಚೈತ್ಯಾಲಯಂಗಳನನೇಕವಿಧಾರ್ಚನೆಗಳಿಂದಮರ್ಚಿಸಿ,

ಕೋಟ್ಯಸ್ಸಪ್ತ ಗೃಹಾಸ್ತ್ರಿವಿಷ್ಟಪಗುರೋಃ ಲಕ್ಷಾಃ ಪುನಸ್ಸಪ್ತತಿಃ ।
ದ್ವಾಭ್ಯಾಮಭ್ಯಧಿಕಾ ಭವಂತಿ ಭವನಾವಾಸೇಷು ತೇಭ್ಯೋ ನಮಃ ॥
ನಿಸ್ಸಂಖ್ಯಾಶ್ಶಿಖರೇಂದ್ರಕಂದರಸರಿದ್ದ್ವೀಪಾದಿಷು ವ್ಯಂತರ ।
ಸ್ಥಾನೇಷು ಪ್ರಣಮಾಮಿ ಜೈನವಸತಿಂ ಜ್ಯೋತಿರ್ವಿಮಾನೇಷು ಚ ॥ ೬೩

ದ್ವಾತ್ರಿಂಶತ್ಪ್ರಥಮೇ ಜಿನೇಂದ್ರನಿಲಯಾಃ ಕಲ್ಪೇ ದ್ವಿತೀಯೇ ಭವಂ
ತ್ಯಷ್ಟಾವಿಂಶತಿರಗ್ರತೋ ನಿಗದಿತೇ ಲಕ್ಷಾಸ್ತತೋ ದ್ವಾದಶ ॥
ಮಾಹೇಂದ್ರಾಷ್ಟಶತದ್ವಯೋರಪಿ ದಿವೋ ಲಕ್ಷಾಶ್ಚತಸ್ರಃ ಪೃಥಕ್ ।
ಲಕ್ಷಾರ್ಧಂ ವಿಲಸಂತಿಚಪ್ರಥಿತಯೋರೂರ್ಧ್ವಂ ತತಃ ಕಲ್ಪಯೋಃ ॥ ೬೪

ಚತ್ವಾರಿಂಶದಶೋತ್ತರೇ ದಶಶತಾನ್ಯಾಭಾಂತಿ ಕಲ್ಪದ್ವಯೇ ।
ತಸ್ಯಾನಂತರವರ್ತಿನಿ) ? ತ್ರಿದಶಯೋರ್ದ್ವಂದ್ವೇ ಸಹಸ್ರಾಣಿ ಷಟ್ ॥
ಸಪ್ತಷ್ಣಂಶತಮಾನತಪ್ರಭೃತಿಷು ಸ್ವರ್ಗೇಷು ತೇಷ್ವಚ್ಯುತ ।
ಪ್ರಾಂತೇಷು ತ್ರಿದಶಾರ್ಚಿತಾ ಜಿನಗೃಹಾಸ್ತಾನಂಜಸೋಪಾಸ್ಮಹೇ ॥ ೬೫

ಭಾಂತ್ಯೇಕಾದಶಭಿಶ್ಶತಂ ಸಮಧಿಕಂ ಪ್ರಾಚ್ಯಾಂ ತದಗ್ರೇ ಶತಂ ।
ಸಪ್ತಾಗ್ರಂ ಚರಮೇ ಸಹೈಕನವತಿಗ್ರೈವೇಯಕಾಣಾಂ ತ್ರಿಕೇ ॥
ವಿಖ್ಯಾತಾ ವಸತಿರ್ನವಸ್ವನುದಿಶಂ ಶೇಷಂ ಚ ತತ್ಸಂಖ್ಯಯೋಃ ।
ಪಂಚಾಣೂತ್ತರಭಾಗಿನೋ ಜಿನಗೃಹಾಃ ಪಂಚೈವ ತಾನರ್ಚಯೇ ॥ ೬೬

ವಂದೇ ಪಂಚಸು ಮಂದರಾದ್ರಿಷು ವನಾಂತಭ್ರಾಜಿನಃ ಷೋಡಶ ।
ಪ್ರತ್ಯೇಕಂ ಜಿನಮಂದಿರಾಣಿ ದಿವಿಜೈಃ ಸೇವ್ಯಾನಿ ವಂದಾರುಭಿಃ ॥
ಕುರ್ವಚ್ಛ್ವೇತಸಿ ಕುಂಡಲಾದ್ರಿರುಚಕಕ್ಷೋಣೀಧ್ರಯೋರ್ವಿಶ್ರುತಃ ।
ನ್ಯೂಣಾಂ ಸೀಮನಿ ಮಾನುಷೋತ್ತರಗಿರೌ ಚತ್ವಾರಿ ಚತ್ವಾರಿ ಚ ॥ ೬೭

ತ್ರಿಂಶದ್ವರ್ಷಧರಾಧರೇಷು ವಿಜಯಾರ್ಧೋರ್ವೀಧರಾಣಾಂ ಶತೇ ।
ಸಪ್ತತ್ಯವ್ಯಧಿಕಂ ದಶಸ್ವಪಿ ಕುರುಕ್ಷೋಣೀರುಹೇಷು ಸ್ಥಿತಾಃ ॥
ಇಷ್ವಾಗಾರಚತುಷ್ಟಯೇ ಕ್ಷಿತಿಭೃತಾಂ ವಕ್ಷಾರನಾಮ್ನಾಂ ಶತೇ ।
ವಂದೇ ತತ್ಪರಿಸಂಖ್ಯಯೇವ ಭುವನಖ್ಯಾತಂ ಜಿನೇಂದ್ರಾಲಯಂ ॥ ೬೮

ಚತ್ವಾರೋಂಜನಪರ್ವತಾದಧಿಮುಖಕ್ಷೋಣೀಧರಾಃ ಷೋಡಶ ।
ದ್ವಾತ್ರಿಂಶದ್ಧರಣೀಭೃತೋ ರತಿಕರಾಃತೇಷಾಂ ಶಿರಶ್ಶೇಖರಾ ॥

ದ್ವಾಪಂಚಾಶತಮರ್ಹತಾಂ ಮಣಿಗೃಹಾಃ ನಂದೀಶ್ವರಾಖ್ಯಾಷ್ಟಮ ।
ದ್ವೀಪೇಪ್ರಣ್ಯಮಹಾಮಹೀಂದ್ರಮಹಿತಾನಭ್ಯರ್ಚ್ಯ ವಂದಾಮಹೇ ॥ ೬೯
ಕಲ್ಪಾತೀತಸಮೇತಕಲ್ಪಕಥಿತಾಸ್ಸರ್ವೇ ತ್ರಯೋವಿಂಶತಿಃ ।
ಸಪ್ತಾಂತಾ ನವತಿಃ ಸಹಸ್ರಗುಣಿತಾಶೀತಿಶ್ಚತುರ್ಮಿಶ್ರಿತಾ ॥
ಲಕ್ಷಾಶ್ಚೈತ್ಯಗೃಹಾಶ್ಚತುಶ್ಶತಯುತಾ ಪಂಚಾಶದಷ್ಟೋತ್ತರಾಃ ।
ತೇನಂದೀಶ್ವರಕುಂಡಲಾದ್ರಿರುಚಕಕೇಷ್ವದ್ಯರ್ಧಯೋರ್ದ್ವೀಪಯೋಃ ॥ ೭೦
ಜ್ಯೋತಿರ್ವ್ಯಂತರಚೈತ್ಯಗೇಹರಚಿತಾದ್ವಿಘ್ನಾಶ್ಚತುಷ್ಕೋಟಯೋ ।
ಲಕ್ಷೈಸ್ಸಂಘಟಿತಾಶ್ಚ ಷಟ್ಸಹಿತಯೋಃ ಪಂಚಾಶದರ್ಹದ್ಗೃಹಾಃ ॥
ಸಾಹಸ್ರಾಣಿ ಭವಂತಿ ಸಪ್ತನವತಿಃ ಯುಕ್ತಾಶ್ಚತುರ್ಭಿಶ್ಶತೈಃ ।
ಏಕಾಶೀತಿರಕೃತ್ರಿಮಾಸ್ತ್ರಿದಿವಗಾಃ ಕಸ್ಯ ವಾ ಗೋಚರಾಃ ॥ (?) ೭೧
ಭೂಪಾಲೇಂದ್ರಮಹಾಮಹೈರಹರಹಸ್ಸಂಪಾದ್ಯಮಾನೈರ್ನವೈಃ
ಭ್ರಾಜಂತೇ ಜಿನರಾಜಕೃತ್ರಿಮಗೃಹಾಸ್ತೇಭ್ಯೋ ನಮಸ್ಕುರ್ಮಹೇ ।
ಅಸ್ಮಾಕಂ ಕವಿತಾಗುಣಾರ್ಣವನುತಾಃ ಕುರ್ವಂತು ಚೈತ್ಯಾಲಯಾಃ
ತೇ ಲೋಕತ್ರಯತುಂಗಮಂಗಳಮಹಾಶ್ರೀಭಾಗ್ಯಯೋಗ್ಯಂ ಪದಂ ॥ ೭೨

ವ॥ ಎಂದು ಜಗತ್ತ್ರಯಚೈತ್ಯಸ್ತೋತ್ರಪವಿತ್ರಮುಖಾರವಿಂದನಾಗಿ ಭಗವದಾದಿಭಟ್ಟಾರಕರ ನಿರ್ವಾಣಭೂಮಿಸಮೀಪಸ್ಥಿತವಿಶಾಲಸ್ಫಟಿಕಶಿಲಾತಳಾರೂಢನುತ್ತರಾಭಿಮುಖನಾಗಿ ಸಿದ್ಧಭಕ್ತಿಪೂರ್ವಕಂ ತ್ರಿಜದ್ಗುರುವೇ ಗುರುವೆಂದು ತತ್ಪದಸರಸಿಜಧ್ಯಾನಪರಾಯಣನಾಗಿ,

ಶ್ರೀನಾರೀಪತಿದೀಕ್ಷೆಯಂ ಕೊಳಲೊಡಂ ಭೋಂಕಲ್ ಮನಃಪರ್ಯಯ
ಜ್ಞಾನಂ ಪುಟ್ಟಿದುದಂತು ಪುಟ್ಟಿದ ಬಟಿಕ್ಕಂತರ್ಮುಹೂರ್ತಕ್ಕೆ ಭ ।
ವ್ಯಾನಂದಪ್ರದಮಿಂದ್ರವೃಂದಕೃತಕಲ್ಯಾಣಾಸ್ಪದಂ ಕೇವಲ
ಜ್ಞಾನಂ ಪುಟ್ಟಿದುದಿಂತು ಭವ್ಯತೆ ಜಗಕ್ಕಾಶ್ಚರ್ಯಮಾಯ್ತಾ ಕನಾ ॥ ೭೩
ನರಲೋಕವೊಂದೆ ಮುನ್ನಿನ
ಚರಣಾಬ್ಜಕ್ಕೆಱಗೆ ನೆಗೞ್ದ ಕೇವಳಬೋಧಂ ।
ದೊರೆಕೊಳೆ ಸುರನರಲೋಕಂ
ಚರಣಾಬ್ಜಕ್ಕೆಱಗೆ ಭರತಯತಿಪತಿ ನೆಗೞ್ದಂ ॥ ೭೪

ವ॥ ಅಂತನಂತಚತುಷ್ಟಯವಿರಾಜಮಾನನುಂ ದೇವಮಾನವಪರಿಷತ್ಪರಿವೃತನುಂ ಸಪ್ತರ್ಧಿಸಮನ್ವಿತಯತಿಪತಿಸಮೇತನುಂ ಅಮೃತಕರಕರಧವಳೈಕಚ್ಛತ್ರಚಾಮರಚತುಷ್ಟಯವಿಭ್ರಾಜಿತನುಂ ಸುರೇಂದ್ರಗಿರಿಶಿಖರವಿರಾಜಮಾನಮೃಗೇಂದ್ರಾಸನವಿಭಾಸಿಯುಂ ಸರಿತ್ಸರೋವರವಿಮಳಗಗನತಳವಿಹರಣಪರಿಣತನುಮಾಗಿ ನಾನಾವಿಧಧರ್ಮಕ್ಷೇತ್ರಂಗಳೊಳೊಂದುಲಕ್ಕೆ ಪುರ್ವಂಬರಂ ಧರ್ಮಾಮೃತಾಂಬುಸೇಕದಿಂ ವಿನೇಯಜನಸಸ್ಯಸಂಪತ್ಪರಂಪರೆಯಂ ಮಾಡಿ ಕೈಳಾಸಶೈಲಶಿಖರಾಲಂಕಾರನಿರುದ್ಧಯೋಗನುಂ ಅಪಗತಯೋಗಗುಣಸ್ಥಾನನುಂ ಚತುರ್ಥಧ್ಯಾನಾನಳದಗ್ಧಶೇಷಾಶೇಷಕರ್ಮೇಂಧನನುಮಾಗಿ,

ಪರಮಶ್ರೀಸಂತತಾವಾಸದೊಳಖಿಳಸುಖಸ್ವಚ್ಛಸಂಪನ್ನತೋಯಾ
ಕರದೊಳ್ ಶಶ್ವದ್ಗುಣಾಂಭೋರುಹವಿಳಸನವಿಭ್ರಾಜಿಯೊಳ್ ಸಿದ್ಧಹಂಸೋ।
ತ್ಕರಲೀಲಾರಮ್ಯದೊಳ್ ಸಂದಮೃತನಿಳಯನೀರೇಜಿನೀಷಂಡದೊಳ್ ಸಾಂ
ದರಕೇಳೀಹಂಸನಾದಂ ಸುಕವಿಜನಮನೋಮಾನಸೋತ್ತಂಸಹಂಸಂ ॥ ೭೫

ವ॥ ಭರತಯತಿಪತಿಯುಂ ತದನಂತರದೊಳ್ ತದ್ವೃಷಭಸೇನಗಣನಾಥಪುರಸ್ಸರಂ ಪುರುತನಯರ್ ಆಕ್ರಮದೊಳ್ ಪರಮಸುಖಾಸ್ಪದಮನನಿಬರುಂ ಕೈಕೊಂಡರ್,

ಶಕವರ್ಷಮೆಂಟುನೂಱ
ಕ್ಕೆ ಕಡೆಯೊಳಱುವತ್ತುಮೂಱು ಸಂದಂದು ಜಗ।
ತ್ಪ್ರಕಟಪ್ಲವಸಂವತ್ಸರ
ದ ಕಾರ್ತಿಕಂ ಮುದಮನೀಯೆ ನಂದೀಶ್ವರದೊಳ್ ॥ ೭೬

ಸಿತಪಕ್ಷದ ಪಂಚಮಿದಿನ
ಪತಿವಾರಂ ಶುಭದಮೂಲನಕ್ಷತ್ರದೊಳ್।
ನ್ವಿತಮಾಗೆ ನೆಗೞ್ದೀಮ
ತ್ಕೃತಿ ಜಗದೊಳ್ ಪುದಿದು ಸಾಗರಾಂತಕ್ಷಿತಿಯಂ ॥ ೭೭

ತ್ರಿದಶಸ್ತುತ್ಯಮಿದಾದಿದೇವಚರಿತಂ ಕರ್ಣಾಮೃತಸ್ಯಂದಿಯ
ಕ್ಕಿದು ಭವ್ಯಾವಳಿಗೆಂದು ಪೇೞಿಸೆ ಬುಧರ್ ಸ್ವರ್ಗಾಪವರ್ಗಕ್ಕಮಾ।

ಸ್ಪದಮಪ್ಪಾದಿಪುರಾಣವಸ್ತುಕೃತಿಯಂ ಪೇೞ್ದಿಂ ಬೆಡಂಗಪ್ಪಮಾ
ರ್ಗದೊಳಂ ದೇಸೆಯೊಳಂ ಪ್ರೊದಪ್ಸೆಸೆವಿನಂ ಸಂಸಾರಸಾರೋದಯಂ ‖ ೭೮

ರಸಭಾವಪ್ರೋಪೇತಧರ್ಮಾಮೃತರಸಮಯದೊಳ್ ಘೋರಸಂಸಾರನಾನಾ
ವ್ಯಸನವ್ಯುಚ್ಛಿತ್ತಿಯೊಳ್ ಧಾರ್ಮಿಕಜನಜನಿತಾನಂದಸಂದೋಹವಿದ್ಯಾ ।
ರಸದೊಳ್ ಸಂಸಾರಸಾರೋದಯವಿರಚಿತದೊಳ್ ವಾಗ್ವಧೂಮುದ್ರೆಯೊಳ್ ಮು
ದ್ರಿಸಿ ನಿಂದತ್ತಾದಿತೀರ್ಥೇಶ್ವರನ ಚರಿತದೊಳ್ ವಾಕ್ಯಮಾಣಿಕ್ಯಕೋಶಂ ‖ ೭೯

ಭಾಸುರದೇವಕೋಟಿವಿಭುವಪ್ಪ ಮಹರ್ಧಿಕನಪ್ಪ ವಾಸವಂ
ಗಾಸನಕಂಪಮಂ ಪಡೆದು ತೀರ್ಥಕರತ್ವಮನಿತ್ತನಪ್ಪರಾ ।
ವಾಸಮನೆಯ್ದಿಸಲ್ಕಿದುವೆ ಷೋಡಶಭಾವನೆಯಿಂದೆ ಷೋಡಶಾ
ಶ್ವಾಸಮನೆಯ್ದೆ ಭಾವಿಸುಗೆ ಭವ್ಯರನಂತಸುಖಾಭಿಲಾಷಿಗಳ್ ‖ ೮೦

ಗ ‖ ಇದು ದೇವೇಂದ್ರಮುನೀಂದ್ರವಂದ್ಯಪರಮಜಿನೇಂದ್ರಮುಖಚಂದ್ರ
ವಾಕ್ಚಂದ್ರಿಕಾಪ್ರಸರಪ್ರಸಾದೋದೀರ್ಣಸೂಕ್ತಿಕಲ್ಲೋಲ
ಮಾಲಾಕೀರ್ಣಕವಿತಾಗುಣಾರ್ಣವ
ಪ್ರಣೀತಮಪ್ಪಾದಿಪುರಾಣದೊಳ್
ಪರಿನಿರ್ವಾಣಕಲ್ಯಾಣವರ್ಣನಂ
ಷೋಡಶಾಶ್ವಾಸಂ
ಸಂಪೂರ್ಣಂ.

---

ಆದಿಪುರಾಣಂ ಸಂಪೂರ್ಣಂ.

# ಶೋಧನ ಪತ್ರಿಕೆ.

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| ೨ | ೧ | ವೊಂದು | ವೆಂದು |
| ,, | ೬ | ಕಳೆ | ಕಱಿ |
| ,, | ೧೨ | ಟುಗು | ಟಗು |
| ೩ | ೨ | ಸ್ಕಂವ | ಸ್ಕಂಧ |
| ೪ | ೭ | ಮುೞ | ಮುಱಿ |
| ,, | ೧೬ | ಮನೇಕ | ಮನೇಡ |
| ೫ | ೧೦ | ತಾರ್ಕಿಗಂ | ತಾರ್ಕಿಕಂ |
| ,, | ೧೯ | ಮೊಚ್ಚು | ಮುಚ್ಚಿ |
| ೬ | ೭ | ದೆಂನ | ದನ್ನ |
| ,, | ೧೨ | ಸನ್ಮನಂ | ಸಲ್ಮನಂ |
| ,, | ೧೩ | ನೆಗಪ್ತೆ | ನಗಪ್ತೆ |
| ,, | ೧೬ | ಪಜಜ | ಪೆಜರ |
| ,, | ,, | ಪಜಯಿಂದವಪ್ಪ | ಪಜರಿಂದಮಪ್ಪ |
| ,, | ೨೨ | ಪ್ರಮೂಡ | ಪ್ರಮದ |
| ೭ | ೧ | ಸ್ಕಂದ | ಸ್ಕಂಧ |
| ,, | ೧೭ | ರಮಣೀಯಕಾ | ರಮಣೀಯತಾ |
| ೯ | ೩ | ಸ್ಥಾನಂಕಟಿ | ಸ್ಥಾನಂ |
| ,, | ೭ | ತಟ | ಕಟಿತಟ |
| ,, | ೨೨ | ಸ್ಥೈರ್ಯಂ | ಸ್ಥೈರ್ಯಂ |
| ೧೧ | ೩ | ಕೊಳ್ವ | ಕೂಳ್ವ |
| ,, | ೧೦ | ಡಂಗಳ್ | ಡಂಗಳ್ |
| ೧೨ | ೧೨ | ಫಲ | ಫಳೆ |
| ೧೨ | ೨೩ | ನೆಯ್ದಲ್ ಎಂಬೆಡೆಗಳಲ್ಲಿ | ನಯ್ದಿಲ್- ಎಂದು ಓದಿಕೊಳ್ಳುವುದು |
| ೧೩ | ೧೩ | ನೂಱು | ನೂಱು |
| ,, | ೧೭ | ಜನೋತ್ಸವ | ಜನೋತ್ಸೇಧ |

| ಪುಟ. | ಪಙ್ಕ್ತಿ. | ಅಶುದ್ಧ. | ಶುದ್ಧ. |
|---|---|---|---|
| ೧೬ | ೧೭ | ತನ್ನೊಳ್ಳಿಱೆಯಲಿದು | ತನ್ನೊಳ್ಳಿರೆಯಲಿದು |
| ೧೭ | ೪ | ಸಂತವಿಂ | ಸಂತನಿಂ |
| ,, | ೫ | ಕರ್ದಿದರ್ | ಕಟ್ಟಿದರ್ |
| ,, | ೧೪ | ತಾಗೆ | ತಾಗಿ |
| ೧೮ | ೨೦ | ಮುಳುಗುತ್ತುಂ | ಮುೞುಗುತ್ತುಂ |
| ೨೦ | ೨ | ಪೂವಿನುಬ್ಬುರ್ | ಪೂವಿನುರ್ಬು |
| ,, | ೧೫ | ತಿಳುಪು | ತಿಳಿಪು |
| ,, | ೨೧ | ಬಡಿಪುದು | ಬಡುವುದು |
| ೨೧ | ೫ | ಕಾರ್ಯಚ್ಚೈತನ್ಯ | ಕಾರ್ಯಂ ಚೈತನ್ಯ |
| ,, | ೧೨ | ಚಿತ್ತ | ಚಿತ್ತಿ |
| ೨೩ | ೫ | ಡೆಯುದುವುಂ ಹಿತಾಹಿತಾ | ಡಯುದುವುಂ ಹಿತಾಹಿತ |
| ೨೪ | ,, | ಗಳೆಯು | ಗಳೆ ಅ |
| ,, | ೧೯ | ಸಭಾಂತರ | ಸಭಾಂತರಾಳ |
| ,, | ೨೨ | ಽವಿಜಯಿ | ವಿಜಯಿ |
| ,, | ೨೬ | ೬ಕ. ಗ—ತಳವುೞಿಸಿ | ಇದು ಅವಶ್ಯಕವಿಲ್ಲ |
| ೨೭ | ೧ | ನಾಗಿ | ನಾಗೆ |
| ,, | ೮ | ಗಳಂ ಮಗಂ | ಗಳಂ ಕಾವಂದು ಮಗಂ |
| ೩೧ | ೬ | ದುರ್ದು | ದುರ್ದೊ |
| ,, | ೧೯ | ಪೊಗಳುತ್ತಂ | ಪೊಗೞುತ್ತಂ |
| ೩೨ | ೨೩ | ದೀಶನಿಂ । | ದೀಶನಿ ॥ |
| ೩೩ | ೧ | ನುಂನಿಜ | ನ್ನುನ್ನಿಜ |
| ,, | ೧೩ | ನೆಱಪಿ | ನೆರಪಿ |
| ,, | ೨೧ | ಗೆಯ್ಯೊ | ಗೆಯ್ಯು |
| ೩೪ | ೯ | ಪಸಿವಳ್ವೆ | ಪಸಿವಟ್ಟೆ |
| ,, | ೧೨ | ದುಃಖರ್ಗೆ | ಕುಃಖರ್ಗೆ |
| ೩೬ | ,, | ತೆಸೆವ | ತೆಸೆದ |
| ೩೭ | ೨ | ಮಾಣ್ದಿದರ್ | ಮಾಣ್ದಿರ್ದ |
| ೩೮ | ೧೨ | ತೊರೆಯಿಸಿದಂ ॥ | ತೊರೆಯಿಸಿದಂ ॥ |

| ಪುಟ. | ಪಙ್ಕ್ತಿ. | ಅಶುದ್ಧ. | ಶುದ್ಧ. |
|---|---|---|---|
| ೩೮ | ೧೩ | ತೊರೆಯಿಸಿ, | ತೊರೆಯಿಸಿ, |
| ೪೦ | ೨ | ನಿಟಿಪೆ | ನಿಟಿಪಿ |
| ೪೧ | ೮ | ಯುರುವುಂ | ಯುರುವಂ |
| ೪೨ | ೧೨ | ಅಪರಿಮಾಣ | ಅಪರಿಮ್ಲಾನ |
| ,, | ೧೩ | ಸಾಲ್ಭಾಸಿರ್ವರ್ | ಸಾಲ್ಸಾಸಿರ್ವರ್ |
| ,, | ೨೪ | ಕಪೆಯಿ | ಕಟಿಯಿ |
| ,, | ೨೬ | ಹಸೋಚ್ಛ್ರಿತ | ಹಸ್ತೋಚ್ಛ್ರಿತ |
| ೪೩ | ೨೧ | ವಣ್ಣಿಪೆಂಬಣ್ಣಿ ಂ ॥ | ಪಣ್ಣಿಪಂಬಣ್ಣಿಪಂ॥ |
| ,, | ೨೩ | ಬಂದಿರೆ | ನಿಂದಿರೆ |
| ೪೫ | ೧೪ | ಬಾಡಿ | ಬಾಪೆ |
| ೪೬ | ೨ | ನೋಡಿ | ನೋಡಿ, |
| ,, | ೧೩ | ಜ್ಯೃತ್ಯ | ಚೈತ್ಯ |
| ೪೭ | ೧ | ಸಂಪತ್ಪದ | ಸಂಪತ್ಪ್ರದ |
| ,, | ೧೫ | ನೀಳ್ಪಂ | ನೀಳ್ವಂ |
| ,, | ೨೪ | ಪೊಂಪ್ರಪೆ | ಪೊಂಪ್ರಟಿ |
| ೪೮ | ೧ | ತೇಟ್ರಿ | ತೆಂತು |
| ,, | ೧೧ | ಬಟೆ | ಬಟಿ |
| ,, | ೧೯ | ಮುಱಿದೆ | ಮುರಿದೆ |
| ೪೯ | ೨೧ | ತಂಪಲ | ತೆಂಪಲ |
| ೫೦ | ೧೯ | ಭೋಂಕನೆ | ಭೋಂಕೆನೆ |
| ೫೧ | ೨೧ | ಮನಮನಾರೆ | ಮನಮನಾಱೆ |
| ೫೩ | ೧೦ | ಸ್ವಭಾ | ಸ್ವಭಾವ |
| ೫೫ | ೫ | ಈತೆರ | ಈತೆಱ |
| ,, | ೨೪ | ಕರ್ಚ್ಚಿ | ಕರ್ಚಿ |
| ೫೬ | ೮ | ಎಂಭತ್ತೆಂಟು—ಎಂಪೆಡೆಗಳಲ್ಲಿ | ಎಂಬತ್ತೆಂಟು — ಎಂದು ಓದಿ [ಕೊಳ್ಳುವುದು. |
| ೫೭ | ೧೨ | ಕಳಿಪ್ರ | ಕಟಿಪ್ರ |
| ೫೮ | ೨೨ | ಜಂದದ | ಜೇಂದದ |
| ೬೦ | ೨೪ | ವರ್ಗಳ್ವಿದಳ್ತೊಡ. | ಪರ್ಗಟ್ವಿದಟ್ತೊಡ |

| ಪುಟ. | ಪಙ್ಕ್ತಿ. | ಅಶುದ್ಧ. | ಶುದ್ಧ. |
|---|---|---|---|
| ೬೧ | ೬ | ಮಾಜಿನ್ರು | ಮಾಜಿದು |
| ೬೪ | ೧೫ | ಮುಳುಗು | ಮುಱುಗು |
| ೬೭ | ೬ | ಬರ್ದು | ಬರ್ದುಕು |
| ೬೮ | ೧೩ | ನೂಸೆ | ನೂಸೆ |
| ೭೪ | ೧೬ | ಕೃತಾ | ಕೃತ |
| ೭೫ | ೧ | ಲಂಪಿ | ಲೆಂಪಿ |
| ,, | ೨೭ | ತಗುಳ್ಚದೆ | ತಗುಳ್ಚದೆ |
| ೭೬ | ೪ | ಪ್ರಾಸ | ಪ್ರಾಸ |
| ,, | ೨೨ | ಸ್ತುಕಕರ್ಣಪೂರಾಯಮಾನ | ಸ್ತುಬಕಕರ್ಣಪೂರಾಯಮಾ[ಣ |
| ೭೭ | ೮ | ದರವುರನೆಳ್ಚಿ | ದರಿವುರನೆಳ್ಚಿ |
| ೭೯ | ೧೧ | ಮೊಚ್ಚಿತ್ತು | ಮುಚ್ಚಿತ್ತು |
| ೮೦ | ೧ | ಕೋಟಿ | ಕೋಟೆ |
| ,, | ೯ | ಸೆಳಲ್ವ | ಸೆಱಲ್ವ |
| ೮೨ | ೩ | ಜೆಲುವಿಂಗದು | ಜೆಲ್ವಿಂಗದು |
| ,, | ೧೦ | ಪಳಕಿನ, ಪೊಳಪ್ತು | ಪಳಕಿನ, ಪೊಳೆಪ್ತು |
| ೮೩ | ೧೨ | ಳೆಸುವ | ಳಸುವ |
| ೮೯ | ೧೧ | ಮುಱು , ಸಂಮಂತು | ಮಱು ; ಸಮಂತು |
| ,, | ೧೭ | ವಿಗಳಿದ | ವಿಗಱಿದ |
| ೯೦ | ೭ | ನೊಟ್ಟುಜೆಯಂ | ನೊಟ್ಟುಜೆಯಿಂ |
| ,, | ೩ | ನರ್ಥಿ ಎಂಪೆಡೆಗಳಲ್ಲಿ | ನಟ್ಟಿ ಎಂದು ಓದಿಕೊಳ್ಳುವುದು |
| ,, | ೯ | ಳೆಸಾಂದರಿಯಂ | ಳನುದರಿಯಂ |
| ,, | ೧೦ | ಕಳುಪಿ—ಎಂಪೆಡೆಗಳಲ್ಲಿ | ಕಱಿಪಿ ಎಂದು ಓದಿಕೊಳ್ಳುವು[ದು |
| ೯೨ | ೧೭ | ನವ | ನವು |
| ೯೪ | ೬ | ನಾಲ್ವತ್ತೊಂಥ ಎಂಪೆಡೆಗಳಲ್ಲಿ | ನಾಲ್ವತ್ತೊಂಬ—ಎಂದು ಓದಿಕೊಳ್ಳುವುದು |
| ೯೫ | ೧೦ | ದೊಂದೊಂದೆನೆ | ದೊಂದೊಂದನೆ |
| ,, | ೧೨ | ಕೊಂದಿಕವೆ | ಕೊಂದಿಕ್ಕವೆ |

| ಪುಟ. | ಪಂಕ್ತಿ. | ಅಶುದ್ಧ. | ಶುದ್ಧ. |
|---|---|---|---|
| ೯. | ೨ | ಬಱುರಿಯುಂ | ಬಱುವಂ |
| ,, | ೬೩ | ನಾಲ್ಕಿಂದೆ | ನಾಲ್ಗಿಂದ |
| ೯೪ | ೧೨ | ಪಱಿದಮು | ಪಱಿದುದು |
| ೯೯ | ೧೫ | ಸೇನಾಯಕ | ಸೇನಾನಾಯಕ |
| ೧೦೦ | ೨೫ | ಕುಂಜಗಂಳೊಳಂ | ಕುಂಜಂಗಳೊಳಂ |
| ೧೧೪ | ೭ | ಳಿನೆಗಂ | ಳಿನಗಂ |
| ೧೦೭ | ,, | ಪ್ರಿಷ್ಟ್ಯೆ | ಪ್ರಟ್ಯೆ |
| ೧೦೬ | ೩ | ಭಟ್ಟ್ಯಾಕರರ್ | ಭಟ್ಟ್ಯಾರಕರ್ |
| ೧೦೬ | ೧೩ | ಗೊಳಗೆ | ಗೊಳಗೆ |
| ೧೧೧ | ೨೧-೨೨ | ಒಪೆ | ಒಪ್ಪೆ |
| ೧೧೨ | ೧೪ | ಮುದ್ಯೋತಿಸೆ | ಮೊದ್ದ್ಯೋತಿಸೆ |
| ೧೨೩ | ೬ | ನಿನ್ನನೆಲೆ | ನೆನ್ನನೆಲೆ |
| ೧೪೬ | ೧೩ | ಬದ್ದರ್ | ಬದ್ಧರುಂ |
| ೧೮೫ | ೨೪ | ಮುಂನಡೆಯ | ಮೊಂನಡೇಱಿನಡೆಯು |
| ೧೫೮ | ೧೬ | ಸಾಲುವಿಂ | ಸೊಲ್ಲುವಿಂ |
| ೧೬೧ | ೧೫ | ಪ್ರದಿದೊದುಱ | ಪುದಿದುಱ |
| ೧೬೩ | ೧ | ವರ್ಣಿಸುವದಂ | ವರ್ಣಿಸುವುದಂ |
| ೧೬೭ | ೧೦ | ಮುಗುಳ್ಳ್ನಗೆ | ಮುಗುಳ್ನಗೆ |
| ೧೪೪ | ೨೧ | ನೆಗೆಗಣ್ಣಂ | ನಗೆಗಣ್ಣಂ |
| ೧೮೮ | ೧೦ | ರಸೆಯರ್ | ರಸಿಯರ್ |
| ೧೯೧ | ೨ | ಕಳ್ | ಕಣ್ಗ |
| ೧೯೨ | ೨೫ | ಮಾಣ | ಮಾಣ |
| ೧೯೬ | ೧೦ | ಮೂಡಿ | ಮಾಡೆ |
| ೨೧೪ | ೯ | ಸಿಂಧುಸಿಂಧೂರಿ | ಸಿಂಧುರಸಿಂಧೂರೀ |
| ೨೧೦ | ೭ | ನಾದಿ | ಮಾದಿ |
| ೨೧೧ | ೨೫ | ತ್ರೆಜಿ | ತ್ರಜಿ |
| ೨೧೬ | ೬ | ಪರಿಯ | ಹರ್ಯ |
| ,, | ೧೩ | ತೋಱ | ತಾರ |

| ಪುಟ. | ಪಙ್ಕ್ತಿ. | ಅಶುದ್ಧ. | ಶುದ್ಧ. |
|---|---|---|---|
| ೨೧೯ | ೨೧ | ಗದಾ | ಗವದಾ |
| ೨೨೧ | ೨೨ | ದ್ಯೋ । | ಜ್ಯೋ । |
| ,, | ೨೬ | ಧೃತ | ದ್ರುತ |
| ೨೨೨ | ೧ | ಯುತತ್ವಾ | ಯುತತತ್ವಾ |
| ,, | ೨೬ | ಡೆಯು ॥ | ಡೆಯೇ ॥ |
| ೨೨೪ | ೧ | ತೆಱ | ತೆರ |
| ೨೨೮ | ೬ | ತದುದ್ಯೋಗ | ತ್ವದುದ್ಯೋಗ |
| ,, | ೯ | ಲಿರ್ದುದ | ಲಿರ್ದುದಡ |
| ೨೩೦ | ೧೪ | ಪಱಜ್ಜ | ಪಱಜ್ಜ |
| ೨೩೫ | ೨೧ | ಸಾರದಳಿಪೆಂದು | ನಾರದಱಿಪೆಂದು |
| ೨೪೪ | ೧೦ | ಪರಿತ | ಪಱಿತಂ |
| ೨೪೮ | ೯ | ವಿರತಣ | ವಿತರಣ |
| ೨೫೦ | ೧ | ನಾಗ | ನಾಗಿ |
| ,, | ೩ | ಸಾಮಗ್ರ | ನಾಮಗ್ರಿ |
| ,, | ೧೦ | ಗಳೊ | ಗಳೊಳ |
| ,, | ೨೨ | ಪಱಳಾ | ಪ್ರಱಳಾ |
| ೨೫೨ | ೧೧ | ಚುತುಷ್ಟಯು | ಚತುಷ್ಟಯು |
| ೨೬೨ | ,, | ಪ್ರಭುಗರಾ | ಪ್ರಭುಗಳಾ |
| ,, | ೨೧—೨೨ | ಕೆಗೆಯೊಳ | ಕೆಗವೊಳ |
| ,, | ೨೩ | ಕ್ಕಳಯಲ್ | ಕ್ಕಳೆಯಲ್ |
| ೨೭೦ | ೭ | ನೆಗೆವವ | ನೆಗೆವ |
| ೨೭೨ | ೧೨ | ವೆರಸೆಯು | ವೆರಸೆಸೆಯು |
| ,, | ೨೬ | ತೊಂಗಲ್, | ತೊಂಗ |
| ೨೭೫ | ೬ | ಪಾಱುತ್ತೆ | ಪಾರುತ್ತೆ |
| ೨೭೯ | ೧೮ | ವಳಾಕಿನ | ವಳಕಿನ |
| ,, | ೨೫ | ಛತ್ರಕಾ | ಛತ್ರಿಕಾ |
| ೨೮೦ | ೧೫ | ಪೊಳೆಯು | ಪೊಪೆಯು |
| ೨೮೫ | ೨೬ | ನೆಸಿವೆಲ | ನೆಸಪೆಲ |

| ಪುಟ. | ಪಙ್ಕ್ತಿ. | ಅಶುದ್ಧ. | ಶುದ್ಧ. |
|---|---|---|---|
| ೨೮೬ | ೯ | ಗ್ಗಳೆಳಸಿಪೊಳೆವಿಱುಲ್ಗಳೆ | ಗ್ಗಳಪೊಳೆವಿಱುಸಿಲ್ಗಳೆ |
| ,, | ೧೧ | ಪೊಳೆವೆಳೆ | ಪೊಳೆವೆಳ |
| ೨೮೭ | ೧೨ | ವಿನಿಂ | ವಿನಂ |
| ,, | ೨೪ | ಪೆಂಡಂ | ಬೆಡಂ |
| ೨೯೧ | ೨೫ | ಸಂಪಿಗೆ | ಸಂಪಗೆ |
| ೨೯೩ | ೧೧ | ಸುಣ್ಬೆರಲಂ | ನುಣ್ಬುರಲಂ |
| ೨೯೪ | ೨ | ಪಾಯ್ಪುಸ್ರೊ | ಪಾಯ್ಪುದ್ರೊ |
| ,, | ೧೦ | ವಣಿ | ಮೆಣಿ |
| ,, | ೧೩ | ಗೆಯು | ಗೆಯೆ |
| ೨೯೫ | ೨೪ | ಲೆತ | ತಲೆ |
| ೨೯೬ | ೨೨ | ಮನಾನ | ಮನಾಸವ |
| ೨೯೭ | ೨೪ | ಪಿಱುದೇ | ಪಿರಿದೇ |
| ೩೦೦ | ೩ | ಕಿರಣ | ಕಿರಣನ |
| ೩೦೩ | ೮ | ಮುಚ್ಚಿರಿದು | ಮುಚ್ಚಿಱಿದು |
| ,, | ೧೧ | ಪಸೂನಾ | ಪ್ರಸೂನಾ |
| ,, | ೧೫ | ಮನೀಂ | ಮನಿಂ |
| ೩೦೪ | ೨ | ಪಾಲ್ಮಳೆ | ಪಾಲ್ಮಡೆ |
| ,, | ೧೧ | ಶರಚ್ಚಂದಾ | ಶರಚ್ಚಂದ್ರಾ |
| ,, | ೧೩ | ನೆರೆದಲ್ಲಿ, | ನೆಱೆದಲ್ಲಿ, |
| ,, | ೧೫ | ಜಾಜೆಯ | ಜಾದಿಯ |
| ,, | ೨೬ | ದೇಶೊಳ್, | ದೇಶದೊಳ್ |
| ೩೦೬ | ೧ | ನ್ನುಳಿಪು | ನ್ನುಟಿಪು |
| ೩೦೯ | ೨೩ | ಗೈಯ್ದುಳಿ | ಗೈಯ್ದುಡಿ |
| ೩೧೨ | ೯ | ಮನೋಳ್ | ಮಾನೊಳ್ |
| ೩೧೬ | ೬ | ಮಾನ | ಮಾಣ |
| ೩೨೧ | ೧೧ | ಚೋದಿತಪ್ಪ | ಚೋದಿತಮಪ್ಪ |
| ೩೩೨ | ೧ | ಕರಣೀ | ಕರಿಣೀ |
| ,, | ೧೮ | ಭಾಗ | ಭೋಗ |

| ಪುಟ. | ಪಙ್ಕ್ತಿ. | ಅಶುದ್ಧ. | ಶುದ್ಧ. |
|---|---|---|---|
| ೩೨೩ | ೨೩ | ನಿಂತಿರ್ಪುದು | ನಿಂದಿರ್ಪುದು |
| ೩೨೬ | ೧೪ | ಪೇಳ | ಪೇೞ |
| ೩೩೭ | ೧ | ರುದ್ರು ಪ್ಪ್ರಕ್ಷತ್ರ | ರುದ್ಘಕ್ಷತ್ರ |
| ,, | ೯ | ಟೆಂತೀ | ಟಿಂತೀ |
| ೩೪೩ | ೧೫ | ಕಣ | ಕಣ್ |
| ೩೫೧ | ೧೦ | ಅಂಭೋದಿ | ಅಂಭೋಧಿ |
| ೩೫೮ | ೨೪ | ತನಗೆ | ತವಗೆ |
| ,, | ೨೬ | ಮೊಱೆಗೆ | ಮೊಱಗ |
| ೩೫೯ | ೫ | ಮುನ್ನೆಱೆಗಂ | ಮುನ್ನರಗಂ |
| ೩೬೦ | ೨೪ | ಬಾಯ್ಕೀಳಸಿ | ಬಾಯ್ಕೀೞಿಸಿ |
| ೩೬೧ | ೯ | ಸೊಲ್ವುದು | ಸಲ್ವುದು |
| ,, | ೧೫ | ಳರಸಂ | ೞರಸೆಂ |
| ೩೬೩ | ,, | ವಡೆ | ವಡ |
| ೩೬೪ | ೨೫ | ನಾಡಿತ | ನಾಥಿತ |
| ೩೬೭ | ೫ | ತೆಱೆದತ್ತು | ತೆಱೆದತ್ತು |
| ೩೭೨ | ೭ | ನೇಶಂ, ಕ್ಷೋಹಿಣೀ | ನೇಶ, ಕ್ಷೌಹಿಣೀ |
| ,, | ೧೯ | ಣ್ಮಿತ್ತಿರೆ | ಣ್ಮುತ್ತಿರೆ |
| ೩೭೬ | ೩ | ಬೞಕಾಳಕಾ | ಬೞಿಕ್ಕಾ |
| ೩೭೭ | ೯ | ಚ್ಛಾಬದಾ | ಚ್ಛಾಯದಾ |
| ೩೭೮ | ೧೮ | ಯುಧ್ಗ | ಯುದ್ಧ |
| ೩೮೧ | ೧೭ | ದರೆಪಂ | ದೆರಪಂ |
| ೩೮೨ | ೨೫ | ಯೆಡೆೞ್ | ಯೆಡೆಯೊಳ್ |
| ೩೮೩ | ೨೨ | ದಿಲ್ಲದ | ದಿಲ್ಲದಿ |
| ೩೯೨ | ೨೦ | ಜಿನ | ಜಿನ |
| ೪೦೦ | ೯ | ಜಿಸಟಂ | ಜಿನಾಟಂ |

---